

ಮನೆ ಮಂದಿಗೆಲ್ಲ ಮುದ ನೀಡುವ ಮಾಸಿಕ

# ಕಸ್ತೂರಿ

ಅಕ್ಟೋಬರ್ ೧೯೮೫

ಬೆಲೆ: ರೂ. ೬-೦೦

ತ್ರಿ'' ಎಂಬ
ಷ ಹುಡುಗಿ

ಪ್ರಾಚೀನ ಭಾರತದ
ಮಾಲಯ ಆಭರಣಗಳ



# ಕಸ್ತೂರಿ

ಕನ್ನಡ ಡೈಜೆಸ್ಟ್


ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎಸ್.ವಿ. ಜೋಶಿ

ಸಹಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ
ಎಂ.ಎಸ್. ಶಶಿಧರ

ಮುಖಪುಟ:
ನವರತ್ನ ಮುತ್ತುಗಳ
ನೆಕ್ಲೇಸು
(ಕ್ರಿ.ಶ. ೩ನೆ ಶತಮಾನದ್ದು)
ಚಿತ್ರಕೃಪೆ:
'ರಿಯಲಿಟೀಸ್' ಪತ್ರಿಕೆ

ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ-೫೮೦ ೦೨೦.


## ಚಿಂತನ

'ಅದ್ಭುತ'ವೆಂದರಾಯಿತು ನಮ್ಮ ಜನಕ್ಕೆ. ಅದನ್ನೇ ವಾಸ್ತವವೆಂದು ಭ್ರಮಿಸಿಕೊಂಡು ಸಂಭ್ರಮಿಸುತ್ತಾರೆ. ಅದರಲ್ಲೂ ಅಂದಂದೇ ದುಡಿದು ಗಳಿಸಿ ಅರೆಹೊಟ್ಟೆಯೂಟ ಕಾಣುವ ಮಂದಿಗೆ ಸಿನಿಮಾ ಲೋಕದ ಬಗ್ಗೆ ವಿಚಿತ್ರ ಪ್ರೀತಿ. ವಿಶೇಷ ಅಭಿಮಾನ ಶ್ರೀಸಾಮಾನ್ಯನ ದೃಷ್ಟಿಯಲ್ಲಿ ಸಾಕ್ಷಾತ್ ದೇವತೆಯಾಗಿ, ಸೂಪರ್‌ಮ್ಯಾನ್ ಆಗಿ, ಕೊಡುಗೈ ದೊರೆಯಾಗಿ ನಿಂತ ತಮಿಳು ಸಿನಿಮಾ ನಾಯಕರನ್ನೇ ತೆಗೆದುಕೊಳ್ಳಿ. ಈ ಕಾರಣದಿಂದಲೇ ಎಂ.ಜಿ.ಆರ್. ಅಂಥವರು ಅಲ್ಲಿ ಮುಖ್ಯಮಂತ್ರಿಯಾಗಿ ಮೆರೆದರು. ಆ ಪರಂಪರೆ ಅಲ್ಲಿ ಮುಂದುವರಿದು ಸಿನಿಮಾ ಜನವೇ ರಾಜಕೀಯ ಶಕ್ತಿಗಳಾಗಿ ಬೆಳೆದರು.

ಆದರೆ ಸಿನಿಮಾದಿಂದ ದೂರವಿದ್ದರೂ ಈ ಇಮೇಜನ್ನು ಉಳಿಸಿಕೊಂಡೇ ಹೋಗಲು ಅವರು ಹೂಡುವ ತಂತ್ರಗಳಿಗೇನೂ ಕಮ್ಮಿಯಿಲ್ಲ. ಎಂ.ಜಿ.ಆರ್.ರ ನಾಯಕಿಯಾಗಿ, ರಾಜಕೀಯ ಕ್ಷೇತ್ರದಲ್ಲಿ ಅವರ ಉತ್ತರಾಧಿಕಾರಿ ಎಂದೆನಿಸಿಕೊಂಡ ಜಯಲಲಿತಾ ಮೊನ್ನೆ ಮೊನ್ನೆ ಅಂಥ ಮತ್ತೊಂದು 'ಅದ್ಭುತ'ವನ್ನು ಆಡಿದರು. ತಮ್ಮ ದತ್ತು ಪುತ್ರನ ಮದುವೆಗಾಗಿ ಇಂದ್ರನಗರಿಯನ್ನೇ ಮದರಾಸಿನಲ್ಲಿ ತಂದಿಳಿಸಿದರು. ಅತಿಗಣ್ಯರಿಗೆ ಬೆಳ್ಳಿ ತಟ್ಟೆಯಲ್ಲಿ ಆಮಂತ್ರಣಪತ್ರ. ಎರಡು ಲಕ್ಷ ಜನಕ್ಕೆ ಆಹ್ವಾನ. ನೂಕು-ನುಗ್ಗಲಾಗದಂತೆ ಎಲ್ಲವನ್ನೂ ಸುವ್ಯವಸ್ಥಿತವಾಗಿ ನೋಡಿಕೊಳ್ಳುವ ಪೊಲೀಸು ಪೇದೆಗಳಿಗೆ ಚಿನ್ನದುಂಗುರ, ಹೆಂಗಸರಿಗೆ ಕಾಂಜೀವರಂ ಸೀರೆ ಇವೆಲ್ಲ ಒಂದೆಡೆಯಾದರೆ ಆರು ಅರಬ್ಬೀ ಅಶ್ವಗಳು ಎಳೆಯುವ ಶ್ರೀಗಂಧದ ರಥ ಮದುಮಗನ ಮೆರವಣಿಗೆಗೆ! ೨೦೦ ಲಾರಿಗಳಷ್ಟು ಹೂಗಳ ಹಾಸಿಗೆಯಂತೆ ಆ ಮೆರವಣಿಗೆ ಹೋಗುವ ರಸ್ತೆಗೆ. ನಗರದ ಅಲ್ಲಲ್ಲಿ ೨೪ ಜಾಗಗಳಲ್ಲಿ ಸಂಗೀತ ಗೋಷ್ಠಿಗಳು! ಒಂದು ಮದುವೆಗೆ ಕೋಟ್ಯಂತರ ಖರ್ಚು!

ಸರಳ ವಿವಾಹ, ಅತಿಥಿ ನಿಯಂತ್ರಣವೆಂದು ಕಾನೂನು ಮಾಡುವ ಸರಕಾರದ ಒಬ್ಬ ಮುಖ್ಯಸ್ಥೆಯೇ ಅದನ್ನು ಗಾಳಿಗೆ ತೂರುವುದೆಂದರೆ?

ಹೋಗಲಿ, ಇಷ್ಟಕ್ಕೂ ಈ ಅದ್ಧೂರಿತನದಿಂದ ಆಕೆಗೆ ಓಟುಕೊಟ್ಟು ಆರಿಸಿದ ಲಕ್ಷಾಂತರ ಬಡಜನಕ್ಕೆ ಬಂದ ಭಾಗ್ಯವಾದರೂ ಏನು?

'ಅದ್ಭುತ'ದ ಅಮಲಿನಲ್ಲಿರುವವರಿಗೆ ಇದೆಲ್ಲ ಯೋಚನೆ ಹ್ಯಾಗೆ ಬಂದೀತು?

ಇದು ನಮ್ಮ ಜನರ ದುರಂತ, ಅಷ್ಟೆ.

• ವ್ಯವಸ್ಥಾಪಕ ಸಂಪಾದಕ

# ಸಹಚಿಂತನ

### ಹಿರಿಯರ ಹರಕೆ

ಸಪ್ಟಂಬರ್ ೧೯೮೫ರ ಸಂಚಿಕೆಯ 'ಚಿಂತನ' ಓದಿದೆ. 'ಕಸ್ತೂರಿ' ಪ್ರಾರಂಭವಾದ ಸಮಯದಲ್ಲಿ ಶ್ರೀ ಮೊಹರೆ ಹನುಮಂತರಾಯರ ಕೃಪೆಯಿಂದ ನಾನೂ 'ಸಂಯುಕ್ತ ಕರ್ನಾಟಕ'ದ ಬಳಗದಲ್ಲಿದ್ದೆ- ಎರಡು ಮೂರು ತಿಂಗಳ ಕಾಲವಷ್ಟೆ. ಅನಂತರ ಶಿಕ್ಷಣವೃತ್ತಿ ನನ್ನನ್ನು ಸೆಳೆದುಕೊಂಡಿತು.

ಇಂಗ್ಲೀಷಿನ "ರೀಡರ್ಸ್ ಡೈಜೆಸ್ಟ್" ಹಾಗೆ ಕನ್ನಡಕ್ಕೊಂದು ಜನಪ್ರಿಯ ಮಾಸಿಕದ ಕೊರತೆಯನ್ನು ನೀಗಿಸಲು ಹೊರಟ ಮಾಸಿಕಗಳಲ್ಲಿ 'ಕಸ್ತೂರಿ' ಪ್ರಥಮ ಮಾತ್ರವಲ್ಲ, ಅಗ್ರಗಣ್ಯ ಸ್ಥಾನವನ್ನು ಪಡೆದಿರುವುದು ನಮ್ಮೆಲ್ಲರ ಹೆಮ್ಮೆಯ ವಿಷಯ.

ವಯಸ್ಸು ಜಾಸ್ತಿಯಾದಂತೆ ಒಂದು ವಸ್ತುವಿನ ವರ್ಚಸ್ಸು ಕಡಿಮೆಯಾಗುತ್ತ ಹೋಗುತ್ತದೆ. ಹಾಗಾಗದೆ ಇರುವುದು ಪ್ರತಿಭೆ ಇರುವ ಕಡೆ ಮಾತ್ರ. ಪ್ರತಿಭೆಯಲ್ಲಿ ಮಡಿವಂತಿಕೆ ಸೇರಿಕೊಂಡರೆ ಅದೊಂದು ಗಾಜಿನ ಮನೆಯ ವಾಸವಾಗುತ್ತದೆ. ಗಾಜಿನ ಮನೆಗಿಂತ ಮಣ್ಣಿನ ಮನೆವಾಸ ಹಿತಕರ. ಕನ್ನಡದಲ್ಲಿ ಬೇಕಾದಷ್ಟು ಪ್ರತಿಭಾವಂತರಿದ್ದಾರೆ. ಕೆಲವರು ಪ್ರಸಿದ್ಧರಾಗಿದ್ದಾರೆ. ಅಂತಹವರ ಬರವಣಿಗೆಗಳಾಗಿ ಮಾತ್ರ 'ಕಸ್ತೂರಿ' ಮೀಸಲಾಗಿದ್ದರೆ ಈಗಿರುವಷ್ಟು ಜನಪ್ರಿಯತೆ ಅದಕ್ಕೆ ಲಭ್ಯವಾಗುತ್ತಿರಲಿಲ್ಲ. ಹೊಸಿಲು ಆಗಷ್ಟೇ ದಾಟಿದ ಪ್ರತಿಭೆಯ ಮೊಗ್ಗುಗಳಿಗೆ ಪ್ರೋತ್ಸಾಹಕೊಟ್ಟು, ಪ್ರತಿಭೆ ಯಾರೊಬ್ಬರ ಸೊತ್ತಲ್ಲವೆಂಬುದನ್ನು 'ಕಸ್ತೂರಿ' ತೋರಿಸಿಕೊಟ್ಟಿದೆ. ಪ್ರತಿಭೆಯ ವಿಸ್ತಾರವನ್ನು ಹೆಚ್ಚಿಸಿದೆ. ನವೀನತೆ, ವೈವಿಧ್ಯ, ಆದರ್ಶಕತೆ, ಔಪಯೋಗಿಕತೆ, ವಿಚಾರವಂತಿಕೆ-ಹೀಗೆ ಹಲವಾರು ಚೌಕಟ್ಟಿನೊಳಗೆ ಬೆಳೆಯುತ್ತ ಬಂದ 'ಕಸ್ತೂರಿ,' "ಮನೆ ಮಂದಿಗೆಲ್ಲ ಮುದ ನೀಡುವ ಮಾಸಿಕ" ಎಂದು ಆತ್ಮವಿಶ್ವಾಸದಿಂದ ಹೇಳಿಕೊಳ್ಳಬಹುದು.

**ಬೆಂಗಳೂರು ಹಾಲಾಡಿ ಮಾರುತಿರಾವ್**

ಅನೇಕ ವರ್ಷಗಳಿಂದ, ಕಸ್ತೂರಿ ಮಾಸಪತ್ರಿಕೆಯನ್ನು ಕಾಯಂ ಕೊಳ್ಳುವ ನನಗೆ ಈ ಪತ್ರಿಕೆ ೩೦ನೇ ವರ್ಷದಲ್ಲಿ ಕಾಲಿಡುತ್ತಿರುವದನ್ನು ಓದಿ ಸಂತೋಷವಾಗಿದೆ. ಕನ್ನಡ ಪತ್ರಿಕಾರಂಗದ ಏಕಮೇವ ಡೈಜೆಸ್ಟ್ ಆಗಿ, ಎಲ್ಲರ ಮನಸೂರೆಗೊಂಡಿರುವ 'ಕಸ್ತೂರಿ'ಯ ಕಂಪು ಕನ್ನಡ ವಾಚಕನ ಜ್ಞಾನತೃಷೆಯನ್ನು ಹೀಗೇ ತಣಿಸುತ್ತಾ ಹೋಗಲಿ.

**ಧಾರವಾಡ ಡಾ. ಪಿ.ಬಿ. ಕಲ್ಲಾಪೂರ**

### ಇಸಬೆಲ್ಲಾ

ಸಪ್ಟೆಂಬರ್ ೮೫ರ ಪುಸ್ತಕ ವಿಭಾಗದ ಕಥೆ 'ಇಸಬೆಲ್ಲಾ' ಒಂದು ಸುಂದರವಾದ ಪ್ರೇಮಕಾವ್ಯವೇ ಸರಿ. ಇಂಥ ಉತ್ತಮ ಕಥೆ ನೀಡಿ ಓದುಗರ ಮನಸ್ಸನ್ನು ತಣಿಸಿದ್ದಕ್ಕೆ 'ಕಸ್ತೂರಿ'ಗೆ ಧನ್ಯವಾದಗಳು.

**ಗಜೇಂದ್ರಗಡ "ಕಸ್ತೂರಿ ರಂಗ"**

### ಜೀಶಂಪ

ಜಾನಪದ ಲೋಕದ ದಿಗ್ಗಜರಲ್ಲಿ ಒಬ್ಬರಾದ 'ಜೀಶಂಪ' ಬಗೆಗಿನ ಬಿಳಿಮಲೆಯವರ ಲೇಖನ ಅತ್ಯಾಕರ್ಷಕವಾಗಿತ್ತು. ಅವರ ಜೀವನದ, ಸಾಹಿತ್ಯದ ವಿವಿಧ ಮುಖಗಳನ್ನು ಲೇಖನ ಪರಿಚಯಿಸಿತು.

**ಹೆಗ್ಗನದೊಡ್ಡಿ ನಿಂಗಣ್ಣ ಟಿ. ವಡಿಗೇರ**

೩೦ನೇ ವರ್ಷದ ಸಂಭ್ರಮದಲ್ಲಿ ಮೂಡಿಬಂದ ಸೆಪ್ಟೆಂಬರ್ 'ಕಸ್ತೂರಿ' ತುಂಬಾ ಮನೋಜ್ಞವಾಗಿತ್ತು. ಅದರೊಳಗೆ ಪುರುಷೋತ್ತಮ ಬಿಳಿಮಲೆರವರ "ಜೀಶಂಪ" ಬಗೆಗಿನ ಲೇಖನ ಚೆನ್ನಾಗಿತ್ತು. ಜನಪದ ಪಂಡಿತರೊಬ್ಬ

ರನ್ನು ಆಳದಿಂದ ಕಂಡು ಅರುಹಿರುವುದು ಸಂತೋಷಕರ. ಅವರ ಬಗ್ಗೆ ಹೆಚ್ಚಾಗಿ ತಿಳಿಯ ದಿದ್ದ ನನಗೆ ಈ ಲೇಖನದಿಂದ ಹೆಚ್ಚಿನ ವಿವರಗಳು ತಿಳಿದುಬಂದುವು.

**ಹುಬ್ಬಳ್ಳಿ ಸಂತೇಬೆನ್ನೂರ್ ಫೈಜುಲ್ಲಾ**

**ಕಚೇರಿಯಲ್ಲಿ ಹಾಸ್ಯ**

ಸಪ್ಟಂಬರ್ ಸಂಚಿಕೆಯಲ್ಲಿ ಮೂಡಿ ಬಂದ ಎಚ್. ಆನಂದರಾಮ ಶಾಸ್ತ್ರಿಯವರ "ಕಚೇರಿ ಯಲ್ಲಿ ಹಾಸ್ಯ" ಮನೆ ಮಂದಿಗೆಲ್ಲ ಮುದನೀ ಡಿತು. ಹಾಸ್ಯ ಪ್ರಸಂಗಗಳು ಕಚೇರಿಯ ನೌಕರ ರಿಗೆ ಕೆಲಸದ ಏಕತಾನತೆಯಿಂದ ಸ್ವಲ್ಪ ರಿಲೀ ಫನ್ನು ನೀಡಿದರೆ ಗ್ರಾಹಕರಿಗೆ ಸಂದರ್ಭಾನುಸಾರ ಸ್ಪಂದನವನ್ನೊದಗಿಸುತ್ತವೆಂಬುದನ್ನು ಅಲ್ಲಿ ಚೆನ್ನಾಗಿ ವಿವರಿಸಲಾಗಿದೆ.

**ಕಲಾದಗಿ ಶ್ರೀದೇವಿ ಆಲಗುಂಡಿ**

**ಕಿರಣ ಬೇಡಿ**

ಸಪ್ಟಂಬರ್ ಸಂಚಿಕೆಯಲ್ಲಿ ಪ್ರಕಟವಾದ ಕಿರಣ ಬೇಡಿಯವರ ಕಿರುಪರಿಚಯ ತುಂಬಾ ಚೆನ್ನಾಗಿದೆ. ಒಬ್ಬ ಧೀರೋದಾತ್ತ ನಾಯಕಿಯಲ್ಲಿ ರಬೇಕಾದ ಗುಣಗಳೆಲ್ಲ ಅವರಲ್ಲಿವೆ. ಮುಖ್ಯ ವಾಗಿ ಆಕೆಯೊಬ್ಬ ನಿಸ್ಪೃಹ ವ್ಯಕ್ತಿ. ರಾಜಕಾರಣಿ ಗಳು ಇಂಥವರಿಗೆ ಅದೆಷ್ಟು ಕಡಿವಾಣ ಹಾಕಲು ಪ್ರಯತ್ನಿಸಿದರೂ ಬೇಡಿಯಂಥವರು ಅಪ್ಪಟ ಅಪರಂಜಿಯಾಗಿಯೇ ಉಳಿದಾರು. ಶೇಷನ್, ಕಿರಣ ಬೇಡಿಯಂತಹ ವ್ಯಕ್ತಿಗಳು ರಾಷ್ಟ್ರದ ಆಡಳಿತದ ಚುಕ್ಕಾಣಿ ಹಿಡಿದರೆ ಬಾಪೂ ಬಯ ಸಿದ ರಾಮರಾಜ್ಯ ಒಂದೇ ವರ್ಷದಲ್ಲಿ ನನಸಾ ದೀತು.

**ಜಮಖಂಡಿ ಎಸ್.ಜಿ. ಕಾರಜೋಳ**

ಪ್ರಾಮಾಣಿಕ ಸೇವೆಗೆ ಹೆಸರಾದ ಕಿರಣ್‌ಬೇ ಡಿಯವರ ಸಾಹಸದ ಕಥೆ, ತಮ್ಮ ಇಲಾಖೆಯಲ್ಲಿ ಅವರು ಸಲ್ಲಿಸಿದ ಅಪಾರಸೇವೆ ಮತ್ತು ದಕ್ಷ ಪೊಲೀಸ್ ಅಧಿಕಾರಿ ಎಂದು ಹೆಸರು ಗಳಿಸಿದ ಬಗ್ಗೆ ವಿವರಗಳನ್ನು ಓದಿ ತುಂಬಾ ಸಂತೋಷ ವಾಯಿತು.

ಬರೀ ಹಣದಾಸೆಗೋಸ್ಕರ ರಾಜಕೀಯ ಧುರೀಣರ ಬಾಲ ಹಿಡಿಯುವ ಅಧಿಕಾರಿಗಳೇ ತುಂಬಿರುವ ಈ ದೇಶದಲ್ಲಿ ಕಿರಣ್ ಬೇಡಿಯ ವರಂಥ ಮಹಿಳಾ ಪೊಲೀಸ್ ಅಧಿಕಾರಿಗಳು ಇರುವುದು ಸಂತೋಷಕರ.

**ಕುಕನೂರ ಹೊಳೆಬಸಯ್ಯ ಆರ್.ವಸ್ತ್ರದ**

**ಸರಿಯೆ?**

ಅಗಸ್ಟ್ ೧೯೯೫ರ ಸಂಚಿಕೆಯಲ್ಲಿ ಎಲ್ಲ ಕಥೆಗಳು ಚೆನ್ನಾಗಿ ಬಂದಿವೆ. ಹಾಗೆಯೇ ವಿನಾ ಯಕಭಟ್ ಹಾಸಣಗಿಯವರ "ಆಕೆ...." ಚೆನ್ನಾ ಗಿದೆ. ಆದರೆ ನಮ್ಮ ಕುಟುಂಬದಲ್ಲಾದ ಒಂದು ಸಣ್ಣ ಘಟನೆಯನ್ನು ನಾಲ್ಕೈದು ವರ್ಷದ ಹಿಂದೆ ಕೇಳಿ, ಈಗ ಅದನ್ನೇ ತಮಗೆ ಬೇಕಾದ ರೀತಿಯಲ್ಲಿ ತಿರುಚಿ ರಸವತ್ತಾಗಿ ಬರೆದು ಪ್ರಚಾರ ತೆಗೆದುಕೊಳ್ಳುವುದು ಒಳ್ಳೆಯದಲ್ಲ.

**ಮೈಸೂರು ನಾರಾಯಣ ಹೆಗಡೆ, ಶಿರಶಿ**

**ಭಾರತೀಯ ವ್ಯಕ್ತಿತ್ವ**

ಅಗಸ್ಟ್ ಸಂಚಿಕೆಯಲ್ಲಿನ "ಭಾರತೀಯ ವ್ಯಕ್ತಿತ್ವ: ವಿಜ್ಞಾನಿಗಳು ಕಾಣುವಂತೆ" ಲೇಖನ ಮೌಲಿಕವಾಗಿದ್ದು ವಿಶೇಷವಾಗಿ ಆಕರ್ಷಿಸಿತು. ಭಾರತೀಯ ಜೀವನದ ಒಳಪದರಗಳನ್ನು ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಮೂಲಕ ಕಂಡುಕೊಂಡ ಅನೇಕ ಒಳನೋಟಗಳನ್ನು ಈ ಲೇಖನದಲ್ಲಿ ಕಾಣಬ ಹುದು. ಭಾರತೀಯರ ಬಗ್ಗೆ ಭಾರತೀಯರಿಗಿಂ ತಲೂ ಪಾಶ್ಚಿಮಾತ್ಯ ಮನೋವಿಜ್ಞಾನಿಗಳೇ ಹೆಚ್ಚಿನ ಆಸ್ಥೆ ವಹಿಸಿ ಅಧ್ಯಯನ ನಡೆಸಿರುವುದು ಕುತೂಹಲಕರ. ಬಹುಶಃ ಭಾರತೀಯರ ಬದು ಕಿನ ಎಲ್ಲ ರಂಗಗಳಲ್ಲೂ ವಿದೇಶೀಯರಿಗಿರುವ ಆಸ್ಥೆ ಅಚ್ಚರಿ ಮೂಡಿಸುತ್ತದೆ. ಡಾ. ಪ್ರಕಾಶ್ ಕೊಣ್ಣೂರ್ ಅವರು ಪಾಶ್ಚಾತ್ಯ ವಿಜ್ಞಾನಿಗಳ ಅಧ್ಯಯನವನ್ನು ಈ ಲೇಖನದಲ್ಲಿ ತುಂಬಾ

---

(ಆರನೆ ಪುಟಕ್ಕೆ)

# ಚಿತ್ರರಂಗ



## ಸ್ಥಿರ ಶೀರ್ಷಿಕೆಗಳು



# ಚಿಳಕಿಂಡಿ

ಪ್ರತಿಭಾವಂತರು ಚರ್ಚಿಸುವುದಿಲ್ಲ, ಸೃಷ್ಟಿಸುತ್ತಾರೆ.

–ರವೀಂದ್ರನಾಥ ಠಾಕೂರ

ಸಂತೋಷ, ಕೃತಜ್ಞತೆಗಳು ತೀರಾ ಸರಳ ಸಂಕೇತ.

–ಕಾರ್ಲ್ ಬಾರ್ಥ್

ಹೆಣ್ಣಿಲ್ಲದವನ ಸಂಸಾರ ಮಣ್ಣಲ್ಲಿ ಎಣ್ಣೆಹೊಯ್ದಂತೆ.

–ಸರ್ವಜ್ಞ

ಕೆಲಸವನ್ನು ಸರಿಯಾಗಿ ಪ್ರಾರಂಭಿಸಿದರೆ ಅರ್ಧ ಮುಗಿಸಿದಂತೆಯೆ.

–ಸೆನೆಕಾ, ರೋಮನ್ ತತ್ವಜ್ಞಾನಿ

ಈ ಜಗತ್ತೆಂಬ ಪುಸ್ತಕದಲ್ಲಿ ಮನುಷ್ಯ ಒಂದು ಜೀವಂತ ಪುಟ.

–ಖಲೀಲ್ ಗಿಬ್ರಾನ್

ಪ್ರಬುದ್ಧಾವಸ್ಥೆ: ಮಕ್ಕಳು ಪ್ರಶ್ನೆಗಳನ್ನು ಕೇಳುವುದನ್ನು ಬಿಟ್ಟು ನಿಮ್ಮ ಉತ್ತರಗಳನ್ನೇ ಪ್ರಶ್ನಿಸಲು ಪ್ರಾರಂಭಿಸುವ ಕಾಲ.

–ಎಂ.ಆರ್.ಎಸ್.

(ಮೂರನೆ ಪುಟದಿಂದ)

ಚೆನ್ನಾಗಿ ವಿಶ್ಲೇಷಿಸಿದ್ದಾರೆ. ಈ ಲೇಖನದಲ್ಲಿ ಕಂಡುಬರುವುದು ವಿಜ್ಞಾನಿಗಳು ದಶಕಗಳ ಹಿಂದೆ ವ್ಯಕ್ತಪಡಿಸಿರುವ ಅನಿಸಿಕೆಗಳೇ ಆದರೂ ಅವು ಇಂದಿಗೂ ಪ್ರಸ್ತುತವಾಗಿರುವುದು ಈ ಅಧ್ಯಯನದ ಸಾರ್ವಕಾಲಿಕತೆಯನ್ನು ಬಿಂಬಿಸುತ್ತದೆ.

ಬೆಟ್ಟದಪುರ ಎನ್. ಮಹಾದೇವ

ಸಿದ್ಧರ ಬೆಟ್ಟ

ಅಗಸ್ಟ್ ಸಂಚಿಕೆಯಲ್ಲಿ ಪ್ರಕಟಗೊಂಡ "ಸಿದ್ಧರಬೆಟ್ಟ" ತುಂಬಾ ರಂಜಿಸಿತು. ಆ ಲೇಖನಕ್ಕೆ ಸಂಬಂಧಿಸಿದಂತೆ ಕೆಲ ಮಾತುಗಳನ್ನು ತಿಳಿಸಬಯಸುತ್ತೇನೆ:

"ಸಿದ್ಧರ ಬೆಟ್ಟ"ದ ಬಳಿ ಸತ್ತ ಮೀನುಗಳನ್ನು ಹೆಣ್ಣೊಬ್ಬಳು ಕೊಂಡೊಯ್ಯುತ್ತಿದ್ದಾಗ ಅಲ್ಲಿನ ಮೂಲಿಕೆಗಳ ಮಹಿಮೆಯಿಂದ ಅವು ಜೀವ ತಳೆದವೆಂಬ ಕಥೆ ಅಲ್ಲಿ ಪ್ರಚುರವಾಗಿದೆ. ನಮ್ಮೆಲ್ಲರನ್ನೂ ಆಳಿದ ಪ್ರಭುಗಳಾದ ಶ್ರೀ ಜಯಚಾಮರಾಜೇಂದ್ರ ಒಡೆಯರರೂ, ರಾಜ್ಯದ ಮುಖ್ಯ ಮಂತ್ರಿಗಳಾಗಿದ್ದ ಕೆಂಗಲ್ ಹನುಮಂತಯ್ಯ ಅವರೂ ತಮ್ಮ ಸ್ವಾಸ್ಥ ಸುಧಾರಣೆಗೆ ಸಿದ್ಧರ ಬೆಟ್ಟದಲ್ಲಿ ಠಿಕಾಣಿ ಹೂಡಿದ್ದರು. ಇಂಥ ತಾಣವನ್ನು ಆರೋಗ್ಯ ಧಾಮವನ್ನಾಗಿಸಿ ಅದರ ಮಹತ್ವವನ್ನು ಕಾಯ್ದುಕೊಳ್ಳುವುದು ಸರಕಾರದ ಕರ್ತವ್ಯವಾಗಿದೆ.

ಕೊರಟಗೆರೆ 'ತರಂಗಿಣಿ'

---

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಫುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

**ಪತ್ರವ್ಯವಹಾರ ವಿಳಾಸ:**
ಪ್ರಸ್ತಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦.

**ಚಂದಾ ದರಗಳು**

| | | |
|---|---|---|
| ಬಿಡಿ ಸಂಚಿಕೆ | ರೂ. | ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. | ೩೫-೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. | ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. | ೧೩೦-೦೦ |

# ಕಸ್ತೂರಿ

ವರ್ಷ: ೪೦ | ಅಕ್ಟೋಬರ್ ೧೯೯೫ | ಸಂಚಿಕೆ: ೨

## ವಾತ್ಸಲ್ಯಮಯಿ

ಹೆರಿಗೆಯ ನಂತರ ತಾಯಿ ಸತ್ತು ಹೋದ್ದರಿಂದ ಎಳೆಯ ಶಿಶುವನ್ನು ಒಬ್ಬ ದಾದಿಯ ವಶಕ್ಕೆ ಒಪ್ಪಿಸಲಾಯಿತು. ಅವಳೊಬ್ಬ ಕರುಣಾಮಯಿ. ಅದನ್ನು ತನ್ನ ಮಗುವೆಂದೇ ಭಾವಿಸಿ ಬಹಳ ಪ್ರೀತಿಯಿಂದ ಸಾಕಿದಳು. ದಾದಿಯ ಎದೆ ಹಾಲನ್ನು ಕುಡಿದ ಮಗು ಒಳ್ಳೆ ದಷ್ಟಪುಷ್ಟವಾಗಿ ಬೆಳೆಯಿತು.

ಹುಡುಗ ಬೆಳೆದು ದೊಡ್ಡವನಾಗಿ, ಓದು ಮುಗಿಸಿ ಜಿಲ್ಲಾ ನ್ಯಾಯಾಧೀಶನೂ ಅನಂತರ ಹೈಕೋರ್ಟಿನ ನ್ಯಾಯಮೂರ್ತಿಯೂ ಆದ. ನ್ಯಾಯ ನಿಷ್ಠೆಯನ್ನು ಮೆಚ್ಚಿ ಬ್ರಿಟಿಶರು 'ನೈಟ್ ಹುಡ್' (ಸರ್ ಪದವಿ) ದಯಪಾಲಿಸಿದರು.

ಒಂದು ದಿನ ಗುರುದಾಸರು ಯಾವುದೋ ಮೊಕದ್ದಮೆಯನ್ನು ಆಲಿಸುತ್ತಿದ್ದಾಗ ಕೋರ್ಟಿನ ಬಾಗಿಲಿನಲ್ಲಿ ಏನೋ ಗಲಾಟೆ ನಡೆದ ಶಬ್ದ ಕೇಳಿಸಿತು. ಅಲ್ಲೊಬ್ಬ ಮುದುಕಿ ಬಾಗಿಲು ಕಾಯುವವನನ್ನು ಒಳಕ್ಕೆ ಬಿಡುವಂತೆ ಗೋಗರೆಯುತ್ತಿದ್ದಳು. ನ್ಯಾಯಾಧೀಶರು ಆಕೆಯನ್ನು ನೋಡಿ ಏನೋ ನೆನಪಾದವರಂತೆ ಅಲ್ಲಿಗೆ ಬಂದರು. ಬಂದವರೇ ಅವಳ ಪಾದಗಳನ್ನು ಹಿಡಿದುಕೊಂಡು ನಮಸ್ಕಾರ ಮಾಡಿದರು. ನ್ಯಾಯಮೂರ್ತಿಗಳಿಂದ ನಮಸ್ಕಾರ ಮಾಡಿಸಿಕೊಂಡ ಈಕೆ ಯಾರೆಂದು ಎಲ್ಲರಿಗೂ ಆಶ್ಚರ್ಯವೋ ಆಶ್ಚರ್ಯ. ಜನರ ಅನುಮಾನವನ್ನು ಪರಿಹರಿಸುತ್ತ ಗುರುದಾಸರು, "ತಾಯಿಯಿಲ್ಲದ ನನಗೆ ಪ್ರೀತಿ ವಾತ್ಸಲ್ಯಗಳನ್ನು ತೋರಿದ ನನ್ನ ಸಾಕು ತಾಯಿ ಈಕೆಯೆ. ಇವಳ ಕರುಣೆಯಿಂದಲೇ ನಾನು ಈ ಸ್ಥಿತಿಗೆ ಬಂದಿದ್ದೇನೆ," ಎಂದು ಹೇಳಿದರು.

ಆಗ ಆ ವೃದ್ಧೆ "ಏನೋ ಗುರು, ಬಹಳ ದೊಡ್ಡವನಾಗಿಬಿಟ್ಟಿದ್ದೀ? ಯಾರೋ ಹೇಳಿದರು, ನೀನು ಬಹಳ ದೊಡ್ಡ ಕೆಲಸದಲ್ಲಿದ್ದೀ ಎಂದು. ನಾನು ನಿನ್ನನ್ನು ಎಲ್ಲೆಲ್ಲೊ ಹುಡುಕಿಕೊಂಡು ಇಲ್ಲಿಗೆ ಬಂದರೆ ನಿನ್ನನ್ನು ನೋಡಲು ಮೊದಲೇ ಅಪ್ಪಣೆ ತೆಗೆದುಕೊಳ್ಳಬೇಕೆಂದು ಈ ಮನುಷ್ಯ ಹೇಳುತ್ತಾನೆ. ನನ್ನ ಮಗನನ್ನು ನೋಡಲೂ ಅಪ್ಪಣೆ ತೆಗೆದುಕೊಳ್ಳಬೇಕೇ? ಎಂಥಾ ದೌರ್ಭಾಗ್ಯ ನನ್ನದು!" ಎಂದು ಕಣ್ಣೀರು ಒರೆಸಿಕೊಂಡಳು. ಗುರುದಾಸರ ಕಣ್ಣಿನಿಂದಲೂ ಧಾರಾಕಾರವಾಗಿ ನೀರು ಹರಿಯಿತು. ಅನೇಕ ವರ್ಷಗಳ ನಂತರ ಆ ವಾತ್ಸಲ್ಯಮಯಿ ತನ್ನ ಪ್ರತಿಷ್ಠಿತ ಮಗುವಿನ ಹಣೆಗೆ ಮುತ್ತಿಕ್ಕಿದ್ದಳು.

• ಡಿ. ಗುಂಡೂರಾವ್

# ಪ್ರಾಚೀನ ಭಾರತದ ದೇವಾಲಯ ಆಭರಣಗಳು

• ವಿದ್ಯಾ ಕೊಡ್ಗಲ



●●●

**ಈ ರತ್ನಾಭರಣಗಳ ವಿನ್ಯಾಸ, ತಯಾರಿಕೆ ಮತ್ತು ಅಂದಚೆಂದಕ್ಕೆ ಇಂದಿನ ಮಾದರಿಗಳು ಖಂಡಿತ ಸಾಟಿಯಾಗಲಾರವು.**

●●●

ರತ್ನಾಭರಣಗಳು ಹಾಗೂ ಅಮೂಲ್ಯ ಹರಳುಗಳಿಗಾಗಿ ಭಾರತ ಎಂದಿನಿಂದಲೂ ಪ್ರಸಿದ್ಧ ದೇಶ. ಅನಾದಿ ಕಾಲದಿಂದಲೂ ಇವುಗಳಿಗೆ ವಿಶೇಷವಾದ ಅಲೌಕಿಕ ಮಹತ್ವವನ್ನು ನೀಡಲಾಗಿದೆ. ಈ ಸುಂದರ ರತ್ನಾಭರಣಗಳಲ್ಲಿ ಹೆಚ್ಚಿನವು ದೇವಸ್ಥಾನಗಳಲ್ಲಿ, ಪ್ರಾಚೀನ ವಸ್ತು ಸಂಗ್ರಹಾಲಯಗಳಲ್ಲಿ ಹಾಗೂ ಖಾಸಗಿ ಸಂಗ್ರಹಗಳಲ್ಲಿ ಸೇರಿ ಹೋಗಿ ಜನರ ದೃಷ್ಟಿಯಿಂದ ಮರೆಯಾಗಿವೆ.

ಭಾರತೀಯ ಕಲೆಗಳ ವಿಷಯದಲ್ಲಿ ನಿಷ್ಣಾತನೆನಿಸಿದ ಫ್ರಾನ್ಸಿಸ್ ಬ್ರುನೆಲ್ ಪ್ರಪ್ರಥಮವಾಗಿ ಇಂಥ ಅಪರೂಪದ ರತ್ನಾಭರಣಗಳ ಛಾಯಾ ಚಿತ್ರಗಳನ್ನು ಸೆರೆಹಿಡಿದ. ಪುರಾತನ ನಾಗರಿಕತೆಯಿಂದ ಬಳುವಳಿಯಾಗಿ ಬಂದಂಥ ಈ ರತ್ನಾಭರಣಗಳನ್ನು ಕಂಡು ರೋಮಾಂಚಿತನಾದ ಆತ ಹೀಗೆ ಹೇಳಿದ್ದಾನೆ:

"ದಕ್ಷಿಣ ಭಾರತದ ಒಂದು ಸುಪ್ರಸಿದ್ಧ ಹಿಂದೂ ದೇವಾಲಯದ ಅರ್ಚಕರು ಬಂಗಾರದ ಕಿರೀಟವನ್ನು ನನ್ನ ತಲೆಯ ಮೇಲಿಟ್ಟರು. ನನ್ನೆದುರು ಪರಮಾತ್ಮನ ಭವ್ಯವಾದ ವಿಗ್ರಹ ಬಂಗಾರ ಹಾಗೂ ರತ್ನಗಳ ಶೋಭೆಯಿಂದ ದಿವ್ಯವಾಗಿ ತೋರುತ್ತಲಿತ್ತು. ಕೆಳಗೆ ಸುವಾಸನೆ ಬೀರುತ್ತ ಮಲ್ಲಿಗೆ ಹಾಗೂ ಬಣ್ಣ ಬಣ್ಣದ ಗುಲಾಬಿ ಹೂವುಗಳು ರಾಶಿ ರಾಶಿಯಾಗಿ ಬಿದ್ದಿದ್ದವು.

"ವಿಶೇಷ ಹಬ್ಬಗಳಲ್ಲಿ ದೇವ ದೇವತೆಯರನ್ನು ಅಲಂಕರಿಸುವ ಈ ರತ್ನಖಚಿತ ಕಿರೀಟಗಳನ್ನು, ಆಭರಣಗಳನ್ನು ನೋಡುವುದೇ ಒಂದು ಅನನ್ಯ ಅನುಭವ. ಇನ್ನು ಸ್ಪರ್ಶಿಸುವುದಂತೂ ಅವಿಸ್ಮರಣೀಯ ಅನುಭೂತಿ.

"ವಿಶೇಷ ಸಂದರ್ಭಗಳನ್ನು ಬಿಟ್ಟರೆ ಈ ಆಭರಣಗಳು ದೇವಸ್ಥಾನದ ತಿಜೋರಿಗಳಲ್ಲಿ ಸುರಕ್ಷಿತವಾಗಿ ಭದ್ರವಾಗಿಡಲ್ಪಟ್ಟಿರುತ್ತವೆ. ಬರಿ ದೇವಸ್ಥಾನಗಳ ಆಭರಣಗಳಷ್ಟೇ ಅಲ್ಲ, ಐತಿಹಾಸಿಕ ಕುಟುಂಬಗಳ ಗತವೈಭವದ ಮೂಕಸಾಕ್ಷಿಗಳಂತಿರುವ ಆ ಕಾಲದ ಖಾಸಗಿ ಆಭರಣ ಸಂಗ್ರಹವೂ ಕಣ್ಣಿಗೆ ಹಬ್ಬವನ್ನುಂಟು ಮಾಡುವಂಥದು.

"ಆದಿಕಾಲದಿಂದಲೂ ಭಾರತ ಸುಂದರ ಆಭರಣಗಳ ತವರೂರಾಗಿದೆ. ಜಗತ್ತಿನ ಬೇರೆಲ್ಲೂ ಮನುಷ್ಯ ಅಲಂಕಾರ ಹಾಗೂ ಸೌಂದರ್ಯ ವೃದ್ಧಿಗಾಗಿ ಇಷ್ಟು ಜಾಗರೂಕತೆ, ಶ್ರಮ ಹಾಗೂ ನವನವೀನ ಕಲ್ಪನೆಗಳನ್ನು ಬಳಸಿರುವುದು ಕಾಣಸಿಗುವುದಿಲ್ಲ.

"ಭಾರತದಲ್ಲಿ, ಸರ್ವಋತುಗಳಲ್ಲೂ ಹೂಗಳು ಅರಳುವದರಿಂದ ಮಾಲೆಯೆ ಮೊದಲ ಆಭರಣವಾಗಿರುವುದು ನಿಸ್ಸಂದೇಹ. ಅಲ್ಲದೇ ಹೂ ಮಾಲೆಗಳು ಜನ ಸಾಮಾನ್ಯರಿಗೂ ಕೈಗೆಟಕುವಂಥವಾದ್ದರಿಂದ ಪ್ರತಿದಿನವೂ ಹೊಸ ಮಾಲೆಯನ್ನು ಇಷ್ಟಾನುಸಾರ ಹೆಣೆದು ಧರಿಸಬಹುದು.

"ಭಾರತೀಯರು ಮೂಲತಃ ಅಲಂಕಾರಪ್ರಿಯರು. ಅಡಿಯಿಂದ ಮುಡಿಯವರೆಗೆ ದೇಹದ ಎಲ್ಲ ಭಾಗಗಳನ್ನೂ ಅಲಂಕರಿಸಿಕೊಳ್ಳುತ್ತಾರೆ. ತಾವಷ್ಟೇ ಅಲ್ಲ, ಪೂಜ್ಯವೆಂದೆನಿಸಿದ ಆನೆ, ಕುದುರೆ, ಎತ್ತು, ಆಕಳು ಹಾಗೂ ಜಿಂಕೆ ಇತ್ಯಾದಿ ಪ್ರಾಣಿ

ಗಳನ್ನೂ ಅಲಂಕರಿಸಿ ತೃಪ್ತಿಪಟ್ಟುಕೊಳ್ಳುತ್ತಾರೆ.

"ಐದು ಸಾವಿರ ವರ್ಷಗಳಷ್ಟು ಪ್ರಾಚೀನವಾದ ಆಭರಣಗಳನ್ನೂ ಇತ್ತೀಚಿನ ಮಾದರಿಗಳನ್ನೂ ಭಾರತದಲ್ಲಿ ನಾವು ಒಟ್ಟೊಟ್ಟಿಗೆ ಕಾಣಬಹುದಾಗಿದೆ. ಐತಿಹಾಸಿಕ ಶಿಲ್ಪಗಳು ವರ್ಣಚಿತ್ರಗಳು, ಕಾಷ್ಠಕಲೆ ಮುಂತಾದವುಗಳಲ್ಲಿ ಕಾಣಸಿಗುವಂಥವನ್ನೂ ಈಗಿನ ಆಭರಣಗಳನ್ನೂ ಸೂಕ್ಷ್ಮವಾಗಿ ಗಮನಿಸಿನೋಡಿದರೆ ಅವು ಒಂದನ್ನೊಂದು ಹೋಲುತ್ತವೆ. ಆದ್ದರಿಂದ ಆಭರಣಗಳು ಪ್ರಾಚೀನ ಸಂಸ್ಕೃತಿಯ ಪ್ರತಿನಿಧಿಗಳಾಗಿ ಮುಂದುವರಿಯುತ್ತಿವೆ ಎಂದೆನ್ನಬಹುದು.

"ಭಾರತೀಯರ ಪವಿತ್ರ ಗ್ರಂಥಗಳಾದ ವೇದ-ಪುತಾಣಗಳಲ್ಲಿಯೂ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತಗಳಲ್ಲಿಯೂ ಆಭರಣಗಳ ವಿವರಣೆ, ವರ್ಣನೆಯಿದೆ. ಜ್ಯೋತಿಷ್ಯ ಶಾಸ್ತ್ರದ ಕುರಿತಾಗಿ ಇರುವ ಪ್ರಾಚೀನ ಸಂಸ್ಕೃತ ಪ್ರಬಂಧಗಳಲ್ಲಿ ಬೇರೆ ಬೇರೆ ಬಣ್ಣಗಳ ಹರಳುಗಳ ಸೂಕ್ಷ್ಮ ಗುಣಗಳನ್ನೂ ಪಾವಿತ್ರ್ಯವನ್ನೂ ಕೂಲಂಕಷ



ನವರತ್ನಗಳನ್ನುಳ್ಳ ಭುಜಕೀರ್ತಿ (ಕ್ರಿಸ್ತಶಕ ೫ನೇ ಶತಮಾನ)

ಗಜ ಚಿತ್ತಾರಗಳುಳ್ಳ
ಇನ್ನೊಂದು ಆಭರಣ.
ವಜ್ರದ ಹರಳು ಕೂಡಿಸಿದ
ಬೈತಲೆ ಮಣಿ'
(ಕ್ರಿಸ್ತಶಕ ೫ನೇ ಶತಮಾನದವು)

ವಾಗಿ ಚರ್ಚಿಸಲಾಗಿದೆ. ಮೂರು ಸಾವಿರ ವರ್ಷ ಗಳಷ್ಟು ಪುರಾತನ ಇತಿಹಾಸ ಹೊಂದಿರುವ ಭಾರತದ ವೈದ್ಯಕೀಯ ಶಾಸ್ತ್ರವಾದ 'ಆಯು



ವೇದದಲ್ಲೂ ಹಲವಾರು ರೋಗಗಳಿಗೆ ಪ್ರತಿಬಂಧಕವಾಗಿಯೂ ಔಷಧವಾಗಿಯೂ ಈ ಅಮೂಲ್ಯ ಹರಳುಗಳ ಉಪಯೋಗವನ್ನು ತಿಳಿಸಲಾಗಿದೆ.

ರತ್ನಖಚಿತ ತೋಳಬಂದಿ.
ಚಿನ್ನ-ಮುತ್ತುಗಳ
ಮುಂಗೈ ಕಟ್ಟು
(ಕ್ರಿಸ್ತಶಕ ಎರಡನೆ ಶತಮಾನದವು)



"ಈ ಸಾಂಪ್ರದಾಯಿಕ ಶಾಸ್ತ್ರದ ಪ್ರಕಾರ ವಿಶ್ವವು ಸಕಲ ಜೀವರಾಶಿಗಳನ್ನು ನಿಯಂತ್ರಿಸುವ ಅಲೌಕಿಕ ಶಕ್ತಿಯಿಂದ ಆವೃತವಾಗಿದೆ. ಬಣ್ಣಗಳ ಕಂಪನ ಈ ಶಕ್ತಿಯ ಕಣ್ಣಿಗೆ ಕಾಣುವ ಅಭಿವ್ಯಕ್ತಿ. ಈ ಸುಪ್ತ ಶಕ್ತಿಗೂ ಕಾಮನಬಿಲ್ಲಿನ ಬಣ್ಣಗಳು, ಅಮೂಲ್ಯ ಹರಳುಗಳು, ನಕ್ಷತ್ರಗಳು ಮತ್ತು ಜೀವರಾಶಿಗಳ ನಡುವೆಯೂ ಹತ್ತಿರದ ಸಂಬಂಧವಿದೆ.

"ಹರಳುಗಳು ಈ ಶಕ್ತಿಯನ್ನು ಹೊರಹೊಮ್ಮಿಸುವ ಕೇಂದ್ರ ಬಿಂದುವೆಂಬುದಾಗಿ ತಿಳಿಯಲಾಗಿದ್ದು, ಪ್ರತಿಯೊಂದು ಹರಳೂ ಒಂದೊಂದು ಮೂಲಭೂತ ಬಣ್ಣದ ಪ್ರತಿನಿಧಿ ಎನ್ನಲಾಗುತ್ತದೆ. ಅಂತೆಯೇ ಒಂದೊಂದು ಹರಳು ಒಬ್ಬೊಬ್ಬ ಜೀವಿಯ ಬದುಕಿನ ಗತಿ, ಆರೋಗ್ಯ, ಜೀವನಾನಂದಗಳ ಮೇಲೆ ಪ್ರಭಾವ ಬೀರುತ್ತವೆ ಎನ್ನಲಾಗಿದೆ.

"ಪ್ರತಿಯೊಬ್ಬನೂ ತನಗೆ ಅನುಗುಣವಾದ ಹರಳನ್ನು ಧರಿಸುವುದರಿಂದ ಅವನ ಜೀವನ ಸುಖಮಯವಾಗುತ್ತದೆ ಎನ್ನುವ ನಂಬಿಕೆಯಿದೆ. ಆದ್ದರಿಂದ ಅರಮನೆಯ ಅದ್ಭುತ ರತ್ನಾಭರಣಗಳಲ್ಲಿ ಧರಿಸುವವರಿಗೆ ಅನುಗುಣವಾದ ಹರಳುಗಳನ್ನು ಅಳವಡಿಸಲಾಗುತ್ತಿತ್ತು.

"ಹರಳುಗಳ ಬಣ್ಣದ ಆಯ್ಕೆ, ಯಾವ ಲೋಹದಲ್ಲಿ ಹೇಗೆ ಅಳವಡಿಸಬೇಕೆಂಬುದರ ಕುರಿತು ಶಾಸ್ತ್ರಬದ್ಧ ನಿಯಮಗಳಿದ್ದು ಇವು ಜ್ಯೋತಿಷಿಗಳಿಗೆ ಹಾಗೂ ರತ್ನಗಾರರಿಗೆ ಮಾತ್ರ ತಿಳಿದಿವೆ. ಆಭರಣಕ್ಕೆ ಉಪಯೋಗಿಸುವ ಲೋಹವೂ ತುಂಬಾ ಮಹತ್ವದ್ದಾಗಿದ್ದು ೨೪ ಕ್ಯಾರೆಟ್ ಬಂಗಾರವೇ ಇದಕ್ಕೆ ಯೋಗ್ಯವೆಂದು ಹೇಳಲಾಗುತ್ತದೆ. ಬಂಗಾರಕ್ಕೆ 'ಸೂರ್ಯನ ಲೋಹ'ವೆಂದೂ ಕರೆಯುವುದಿದೆ. ಇದರ ಬಣ್ಣ, ಹೊಳಪು ಬದಲಾಗದೇ ಇರುವಿಕೆ ಹಾಗೂ ಇದರ ಮೇಲೆ 'ಸೂಕ್ಷ್ಮಾತಿಸೂಕ್ಷ್ಮ' ಕೆತ್ತನೆಯೂ ಸಾಧ್ಯವಾಗುವುದರಿಂದಾಗಿ ಹೆಚ್ಚಾಗಿ ಆಭರಣಗಳಿಗೆ ಚಿನ್ನವನ್ನೇ ಉಪಯೋಗಿಸಲಾಗುತ್ತದೆ.

"ಉತ್ತರ ಭಾರತದಲ್ಲಿ ೧೬ನೇ ಶತಮಾನದಲ್ಲೇ ಚಿನ್ನದ ಕಂಠಾಭರಣಗಳನ್ನು, ಕೈ ಕಡಗಗಳನ್ನು

ಹಾಗೂ ಪದಕಗಳನ್ನು ತಯಾರಿಸಿರುವುದನ್ನು ಕಾಣಬಹುದು. ಅಲ್ಲದೆ ಇವರ ಮೇಲೆ ಹೊಳಪಿನ ಬಣ್ಣಗಳಿಂದ ಚಿತ್ತಾರಗಳನ್ನು ಕೆತ್ತಿರುವುದರಿಂದ ಇವು ಹರಳುಗಳಷ್ಟೇ ಸುಂದರವಾಗಿ ಆಕರ್ಷಕವಾಗಿ ಕಾಣುತ್ತವೆ.

"ಇನ್ನು ಬೆಳ್ಳಿ. ಇದಕ್ಕೆ ಲೋಹ ಸಾಮ್ರಾಜ್ಯದಲ್ಲಿ ಎರಡನೆಯ ಸ್ಥಾನ. ಆಭರಣಗಳಿಗಿಂತ ಹೆಚ್ಚಾಗಿ ಬೆಳ್ಳಿಯನ್ನು ಪಾತ್ರೆಗಳ ತಯಾರಿಕೆಗೆ ಬಳಸಿಕೊಂಡದ್ದಿದೆ. ರಜತಾಭರಣಗಳನ್ನು ರೈತ ಮಹಿಳೆಯರೇ ಹೆಚ್ಚಾಗಿ ಧರಿಸುವುದನ್ನು ಕಾಣಬಹುದು. ಇದರಲ್ಲಿ ಕಾಣಬರುವ ವಿನ್ಯಾಸಗಳು ಒಂದಕ್ಕಿಂತ ಇನ್ನೊಂದು ಮಿಗಿಲು.

"ಭಾರತದಲ್ಲಿ ಆಭರಣಗಳ ತಯಾರಿಕೆಯ ಕಲೆಯನ್ನು ಹಿಂದಿನ ಕಾಲದಿಂದಲೂ ರೂಢಿಸಿಕೊಂಡು ಬೆಳೆಸಿಕೊಂಡು ಬರಲಾಗಿದೆ. ಭಾರತೀಯರಿಗೆ ಆಭರಣ ಕೇವಲ ಅಲಂಕಾರ ವಸ್ತುವಾಗಲಿ ಶ್ರೀಮಂತಿಕೆಯ ಕುರುಹಾಗಲಿ ಅಧಿಕಾರ ದರ್ಪದ ಪ್ರದರ್ಶನ ಮಾಡುವಂಥ ಸಾಮಗ್ರಿಯಾಗಲಿ ಅಲ್ಲ, ಅದೊಂದು ಪ್ರಕೃತಿಯ ಅದ್ಭುತ ಸಂರಚನೆಯ ಪ್ರತೀಕ.

" ಈ ಆಭರಣಗಳು ಪ್ರೀತಿ ಹಾಗೂ ಕನಸುಗಾರಿಕೆಗಳನ್ನು ಅಭಿವ್ಯಕ್ತಗೊಳಿಸಲು ಸಹಾಯಕವಾಗುವಂಥವು ತಲೆತಲಾಂತರದಿಂದ ವಿಕಾಸಗೊಂಡೇ ಬಂದಿರುವ ಭಾರತದ ದೇವಾಲಯ ಆಭರಣಗಳು ಅನುಗಾಲವೂ ನೋಡುಗರಿಗೆ ಖುಷಿನೀಡುತ್ತಲೂ ಆಶ್ಚರ್ಯ ಚಕಿತರನ್ನಾಗಿ ಮಾಡುತ್ತಲೂ ಇರುತ್ತವೆ ."

# ಅಭಿಮಾನಿ ಓದುಗರೇ.............
# ನಿಮಗೆ ಇದೋ "ವಿಜಯ ದಶಮಿ" ಪ್ರಯುಕ್ತ
# 'ಕರ್ಮವೀರ'ದ
# ವಿಶೇಷ ಉಡುಗೊರೆ

ಇದೇ ದಿ. 30-9-1995ರ ಒಳಗಾಗಿ **'ಕರ್ಮವೀರ'** ವಾರಪತ್ರಿಕೆಯ ನೇರ ಚಂದಾದಾರರಾಗುವವರಿಗೆ ಮಾತ್ರ ಈ ಸೌಲಭ್ಯ!

* ಆರು ತಿಂಗಳ ಚಂದಾ ಹಣ, ರೂ. 125-00 ಗಳನ್ನು ನಮಗೆ ನೇರವಾಗಿ ಸಂದಾಯಮಾಡಿ ಚಂದಾದಾರರಾಗುವವರಿಗೆ **ನಿಮ್ಮೆಲ್ಲರ ಅಚ್ಚುಮೆಚ್ಚಿನ "ಕರ್ಮವೀರ ದೀಪಾವಳಿ ವಿಶೇಷಾಂಕ-1995"**ನ್ನು ಉಚಿತವಾಗಿ ಕಳಿಸಲಾಗುವುದು.

ನೀವು ಮಾಡಬೇಕಾದುದಿಷ್ಟೇ:

ಕೆಳಗೆ ಕೊಟ್ಟಿರುವ ಕೂಪನ್ನಿನಲ್ಲಿ ನಿಮ್ಮ ಹೆಸರು, ವಿಳಾಸವನ್ನು ಸ್ಫುಟವಾಗಿ ತುಂಬಿ, ಅದರೊಂದಿಗೆ ಆರು ತಿಂಗಳ ಚಂದಾ ಹಣ, ರೂ. 125-00 ಗಳನ್ನು ಹುಬ್ಬಳ್ಳಿಯಲ್ಲಿರುವ ಯಾವುದೇ ಬ್ಯಾಂಕಿನ ಮೇಲೆ ತೆಗೆದ ಡಿಮಾಂಡ್ ಡ್ರಾಫ್ಟ್ ಅಥವಾ ಪೋಸ್ಟಲ್ ಆರ್ಡರ್ ಮೂಲಕವಾಗಲೀ ಇಲ್ಲವೇ ಮನಿಯಾರ್ಡರ್ ಮೂಲಕವಾಗಲೀ ಕಳಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ ಎಂಬುದನ್ನು ದಯವಿಟ್ಟು ಗಮನಿಸಿರಿ.

**ಕೆಳಗೆ ಕೊಟ್ಟಿರುವ ಕೂಪನ್‌ನೊಂದಿಗೆ ದಿ: 30-9-95ರೊಳಗಾಗಿ ಚಂದಾ ಹಣ ಕಳಿಸಿ ಕೊಟ್ಟು ಚಂದಾದಾರರಾಗುವವರಿಗೆ ಮಾತ್ರ ಈ ವಿಶೇಷ ಕೊಡುಗೆ ಯೋಜನೆ.**

**ಕಳಿಸಬೇಕಾದ ವಿಳಾಸ:**

ಪ್ರಸಾರಾಂಗ ವ್ಯವಸ್ಥಾಪಕರು,
**ಸಂಯುಕ್ತ ಕರ್ನಾಟಕ,**
**ಪೋಸ್ಟ ಬಾಕ್ಸ್ ನಂ. 30,**
**ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-580 020.**

ಪ್ರಸಾರಾಂಗ ವ್ಯವಸ್ಥಾಪಕರು,
**ಸಂಯುಕ್ತ ಕರ್ನಾಟಕ,**
**2, ರೆಸಿಡೆನ್ಸಿ ರೋಡ್,**
**ಬೆಂಗಳೂರು-560 025.**

ಹೆಸರು:..............................................................................

ವಿಳಾಸ:..............................................................................

ಊರು:.......................................ಪಿನ್‌ಕೋಡ್:.....................

ತ್ವರೆ ಮಾಡಿ, ದಿ: 30-9-95 ಸಮಾಪಿಸುತ್ತಿದೆ. ಚಂದಾ ಹಣ ಕಳಿಸಿ ಈ ವಿಶೇಷ ಕೊಡುಗೆಗೆ ಪಾತ್ರರಾಗಿರಿ.

ಲೋಕ ಶಿಕ್ಷಣ ಟ್ರಸ್ಟಿನ ಹೆಮ್ಮೆಯ ಪ್ರಕಟಣೆ




● ಎಸ್. ನಾರಾಯಣಮೂರ್ತಿ
ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶ
(ನಿವೃತ್ತ)

"ರಾಮ್ ಎಂಬುವನು ತನ್ನ ಭಾವ ರಾಮ ಕುಮಾರ ಮತ್ತು ಅವನ ಅಳಿಯ ಕಾಂತಾಲಾಲ್ ಎಂಬಿಬ್ಬರ ಜೊತೆ ಸೇರಿ ಓಂ ಪ್ರಕಾಶ್ ಮತ್ತು ಮಹಿಂದರ್‌ನನ್ನು ಕೊಲೆಗೈದರು. ಅಷ್ಟೇ ಅಲ್ಲ, ಕಮಲಾ ಮತ್ತು ಅವಳ ಮಕ್ಕಳನ್ನು ಗಾಯಗೊಳಿಸಿದರು," ಎಂಬ ಸುದ್ದಿ ಕಾಡ್ಗಿಚ್ಚಿನಂತೆ ಹರಿಯಾಣದಲ್ಲೆಲ್ಲ ಹಬ್ಬಿತು. ಗಾಯಗೊಂಡಿದ್ದ ಕಮಲಾ ಪೊಲೀಸರಿಗೆ ಪ್ರಥಮ ಮಾಹಿತಿ ವರದಿಯನ್ನು ಕೊಟ್ಟದ್ದರ ಆಧಾರದ ಮೇಲೆ ಅವರು ಧಾವಿಸಿ ಬಂದು, ಸ್ಥಳ ಪರೀಕ್ಷೆ ನಡೆಸಿ, ಮೃತರ ಶರೀರಗಳನ್ನು ವೈದ್ಯಕೀಯ ಪರೀಕ್ಷೆಗೆ ಒಳಪಡಿಸಿದರು; ಗಾಯಾಳುಗಳ ದೇಹಪರೀಕ್ಷೆಗೂ ಏರ್ಪಾಡು ಮಾಡಿದರು. ಪೊಲೀಸರ ತಪಾಸಣಾ ಕಾರ್ಯ ಕೊನೆಗೊಂಡ ಕೂಡಲೇ ಅವರು ಆರೋಪಿಗಳ ಕೃತ್ಯದ ಬಗ್ಗೆ ಆಪಾದನಾಪಟ್ಟಿಯನ್ನು ತಯಾರಿಸಿ, ಹರಿಯಾಣ ಸತ್ರ ನ್ಯಾಯಾಧೀಶರ ನ್ಯಾಯಾಲಯಕ್ಕೆ ಸಲ್ಲಿಸಿದರು. ಪ್ರಕರಣ ಮುಂದುವರಿಯಿತು.

ಆದರೆ ಹರಿಯಾಣ ಸರಕಾರದ ಪರ ಅಭಿಯೋಜಕರ ಮುಖಾಂತರವಾಗಿ ಹಾಜರಾದ ಎಲ್ಲಾ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿದ ಸತ್ರ ನ್ಯಾಯಾಲಯವು ಆಪಾದಿತರು ಮಾಡಿದರೆನ್ನಲಾದ ಕೃತ್ಯದ ಸಾಬೀತಾಗಿಲ್ಲವೆಂದು ತೀರ್ಮಾನಿಸಿ ಅವರನ್ನು ಬಂಧಮುಕ್ತಗೊಳಿಸಿದ್ದಾಗಿ ಆದೇಶವನ್ನಿತ್ತಿತು. ಸತ್ರ ನ್ಯಾಯಾಲಯದ ಆದೇಶದಿಂದ ಬಾಧಿತವಾದ ಹರಿಯಾಣ ಸರಕಾರವು ಅಲ್ಲಿನ ಸ್ಥಾನೀಯ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಮಾಡಿಕೊಂಡಿತು. ಆ ಮೇಲ್ಮನವಿಯನ್ನು ಉಚ್ಚ ನ್ಯಾಯಾಲಯವು ಎಲ್ಲಾ ಸಾಕ್ಷ್ಯಾಧಾರಗಳನ್ನೂ, ಸತ್ರ ನ್ಯಾಯಾಲಯದಲ್ಲಿ ಆರೋಪಿಗಳ ಬಿಡುಗಡೆಗೆ ಕೊಡಲಾದ ಕಾರಣಗಳನ್ನೂ ಪರಾಮರ್ಶಿಸಿ, ಸತ್ರ ನ್ಯಾಯಾಲಯದ ತೀರ್ಮಾನವು ಅಂಗೀಕಾರಯೋಗ್ಯವಲ್ಲವೆಂದು ನಿರ್ಧರಿಸಿತಲ್ಲದೆ ಆರೋಪಿಗಳ ಕೃತ್ಯವು ಸಾಬೀತಾಗಿದೆಯೆಂದು ಕಾರಣ ಸಹಿತವಾಗಿ ತೀರ್ಮಾನಿಸಿ ಶಿಕ್ಷಾರ್ಹರನ್ನಾಗಿ ಮಾಡಿ ಆದೇಶವನ್ನು ಹೊರಡಿಸಿತು. ಈ ಮಧ್ಯೆ ಮೊದಲನೇ ಅಪರಾಧಿ ರಾಮ್ ಸಾವನ್ನಪ್ಪಿದ್ದರಿಂದ ಅವನ ಮೇಲಿನ ಪ್ರಕರಣವು ಕೊನೆಗೊಳ್ಳುವಂತಾಯಿತು. ಅವನ ಸಹ ಆರೋಪಿ ರಾಮಕುಮಾರ್ ತನಗಾಗಿದ್ದ ಶಿಕ್ಷೆಯ ಆದೇಶದ ವಿರುದ್ಧ ಭಾರತದ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಮಾಡಿಕೊಂಡು ತನ್ನನ್ನು ಶಿಕ್ಷಾರ್ಹನೆಂದು ಸಾರಿದ ಉಚ್ಚ ನ್ಯಾಯಾಲಯದ ಆದೇಶದ ರದ್ದತಿಗೆ ಕೋರಿಕೊಂಡನು.

ಸರ್ವೋಚ್ಚ ನ್ಯಾಯಾಲಯದ ಕಕ್ಷೆಯೊಳಗೆ ಪುನರ್ವಿಮರ್ಶೆಯ ರೂಪದಲ್ಲಿ ಬಂದ ಈ ಪ್ರಕರಣ (ಎ.ಐ.ಆರ್. ೧೯೯೫ ಸ. ನ್ಯಾ. ೨೬೦: ರಾಮಕುಮಾರ ವಿರುದ್ಧ ಹರಿಯಾಣ ಸರಕಾರ) ತುಂಬ ಕುತೂಹಲ ಕೆರಳಿಸಿತು. ಊರಿನವರೆಲ್ಲ ಆ ನ್ಯಾಯಾಲಯದಿಂದ ಯಾವ ತೀರ್ಪು ಹೊರಬರಬಹುದೆಂದು ತಿಳಿಯಲು ಉತ್ಸುಕರಾಗಿದ್ದರು.

ಇಂತಹ ಕೌತುಕದ ಪ್ರಕರಣದಲ್ಲಿ ಅಂತರ್ಗತವಾಗಿದ್ದ ವಿಷಯಗಳ ಸೂಕ್ಷ್ಮಾವಲೋಕನದ ಅಗತ್ಯವಿದೆ. ಕಮಲ ಎಂಬವಳಿಗೂ ಅವಳ ಮಾವ ರಾಮ್ ಎಂಬವನಿಗೂ ಬಹಳ ವರ್ಷಗಳಿಂದ ಆಸ್ತಿಯ ವಿಷಯದಲ್ಲಿ ವೈಮನಸ್ಸಿದ್ದಿತು. ಕಮಲ

ಅವನ ಸ್ವಂತ ಸೊಸೆಯಾದರೂ ಅವಳ ಪಾಲಿನ ಆಸ್ತಿಯನ್ನು ಕಬಳಿಸಲು ರಾಮ್ ಶತ ಪ್ರಯತ್ನ ನಡೆಸುತ್ತಿದ್ದ. ಆದರೆ ಆಸ್ತಿಯನ್ನು ತಾನೇ ಸಾಗುವಳಿ ಮಾಡಿಕೊಂಡು ಹೋಗಲು ಕ್ರಮ ಕೈಗೊಂಡ ಕಮಲ ಅವನ ಕಣ್ಣಿಗೆ ಮಾರಿಯಂತೆ ಕಂಡು ಬರುತ್ತಿದ್ದಳು. ಅವಳಿಗೆ ತಕ್ಕ ಬುದ್ಧಿಯನ್ನು ಕಲಿಸ ಬೇಕೆಂದು ಹೊಂಚುಹಾಕಿದ್ದ ರಾಮ್‌ಗೆ ಅವನ ಭಾವ ಮತ್ತು ಅಳಿಯರ ನೆರವು ದೊರಕಿತು.

ಒಂದು ದಿನ ಸಾಯಂಕಾಲದ ಸಮಯ. ಕಮಲ ಎಂದಿನಂತೆ ತನ್ನ ಗದ್ದೆಯಿಂದ ಕೆಲಸ ಮುಗಿಸಿ ಟ್ರ್ಯಾಕ್ಟರನ್ನು ತೆಗೆದುಕೊಂಡು ಮನೆಗೆ ಹಿಂದಿರುಗುತ್ತಿದ್ದಳು. ಅವಳ ಸಂಗಡ ಟ್ರ್ಯಾಕ್ಟರಿನಲ್ಲಿ ಅದರ ಚಾಲಕ ಮಹೀಂದರ್, ಓಂ ಪ್ರಕಾಶ್ ಎಂಬ ಕೆಲಸಗಾರ, ಮತ್ತು ಆಕೆಯ ಇಬ್ಬರು ಮಕ್ಕಳು ಕೂಡ ಇದ್ದರು. ಆ ವೇಳೆಯಲ್ಲಿ ಪೊದೆಯ ಬುಡದಲ್ಲಿ ಕಾದು ಕುಳಿತಿದ್ದ ಆರೋಪಿಗಳು-ಹಠಾತ್ತನೆ ಕಾಣಿಸಿಕೊಂಡರು: ರಾಮ್ ತನ್ನ ಬಂದೂಕಿನಿಂದ ಗುಂಡು ಹಾರಿಸಿದ; ಓಂ ಪ್ರಕಾಶ್ ಆ ಕ್ಷಣ ಸ್ಥಳದಲ್ಲೇ ಅಸು ನೀಗಿದ. ಮಹೀಂದರ್, ಚಾಣಾಕ್ಷತನದಿಂದ ಟ್ರ್ಯಾಕ್ಟರನ್ನು ಅತಿ ವೇಗವಾಗಿ ಓಡಿಸಿಕೊಂಡು ಹೋಗಿ ಹತ್ತಿ ಗಿಡಗಳ ಮಧ್ಯೆ ಅವಿತುಕೊಂಡರು. ಆಗಲೇ ಅವರಲ್ಲಿ ಕೆಲವರಿಗೆ ಗಾಯಗಳಾಗಿದ್ದವು. ಆ ದುಷ್ಟರು ಅವರನ್ನು ಹುಡುಕಾಡಿಕೊಂಡು ಅಲ್ಲಿಗೆ ಬಂದರು. ಗುಂಡು ಹಾರಿಸಿ ಮಹೀಂದರ್‌ನನ್ನು ಕೊಂದರು, ಕಮಲಳಿಗೂ ಗಾಯಗಳಾಗಿ ರಕ್ತ ಸುರಿಯಲಾರಂಭಿಸಿತು. ಅಷ್ಟರೊಳಗೆ ಬೇರೆ ಜನ ಬಂದದ್ದರಿಂದ ಆರೋಪಿಗಳು ತಲೆ ತಪ್ಪಿಸಿಕೊಂಡು ಓಡಿಹೋದರು. ಅಬಲೆ ಕಮಲ ಮಾರನೇ ದಿನ ಬೆಳಿಗ್ಗೆ ಆ ಆರೋಪಿಗಳ ದುಷ್ಕೃತ್ಯದ ಬಗ್ಗೆ ಪೊಲೀಸರಿಗೆ ದೂರನ್ನಿತ್ತಳು. ಪೊಲೀಸರು ಅದನ್ನೇ ಪ್ರಥಮ ಮಾಹಿತಿ ವರದಿಯಾಗಿ ಸ್ವೀಕರಿಸಿ, ಕಾರ್ಯಾಚರಣೆಗೆ ತೊಡಗಿದರು.

ಈ ಪ್ರಕರಣವು ಸರ್ವೋಚ್ಚ ನ್ಯಾಯಾಲಯಕ್ಕೆ ತಲುಪಿದಾಗ ಕಮಲಳ ಮಾವ ರಾಮ್ ಮರಣ ಹೊಂದಿದ್ದರಿಂದ ರಾಮಕುಮಾರನ ಮೇಲೆ ವಿಧಿಸಿದ್ದ ಆದೇಶದ ಔಚಿತ್ಯದ ಬಗ್ಗೆ ಪರಿಶೀಲಿಸುವುದು ಮಾತ್ರ ಬಾಕಿಯಿತ್ತು.

ರಾಮಕುಮಾರನ ಮೇಲಿನ ಆಪಾದನೆ ಸಾಬೀತಾಗಿಲ್ಲವೆಂದು ತೀರ್ಮಾನವನ್ನು ಕೈಗೊಳ್ಳಲು ಸತ್ರ ನ್ಯಾಯಾಲಯವು ಹಲವಾರು ಸಾಂದರ್ಭಿಕ ಸಾಕ್ಷ್ಯಗಳನ್ನು ಆಧಾರವಾಗಿ ಬಳಸಿಕೊಂಡಿತ್ತು. ಮೊತ್ತ ಮೊದಲಿಗೆ, ಕಮಲಳು ಬಹಳ ತಡವಾಗಿ, ಎಂದರೆ ಕೃತ್ಯ ನಡೆದ ಮಾರನೇ ದಿನ ಬೆಳಿಗ್ಗೆ ೧೦-೩೦ ಗಂಟೆಗೆ ಮೊದಲ ಮಾಹಿತಿ ವರದಿಯನ್ನು ಪೊಲೀಸರಿಗೆ ಸಲ್ಲಿಸಿದ್ದರಿಂದ ಅವಳು ತನ್ನ ಮಾವನನ್ನು ಸುಳ್ಳು ಆಪಾದನೆಗೆ ಗುರಿಪಡಿಸಿ ಹಿಂಸಿಸಲು ಅವಕಾಶ ಮಾಡಿಕೊಂಡಳು; ಆರೋಪಿಗಳು ಆ ಕೃತ್ಯವನ್ನು ಮಾಡಿದ್ದೇ ಹೌದಾಗಿದ್ದರೆ, ಅವಳು ಆ ಕೂಡಲೇ ಅಲ್ಲಿನ ಸರಪಂಚರಿಗೂ ಪೊಲೀಸರಿಗೂ ಆ ಕೃತ್ಯದ ಬಗ್ಗೆ ತಿಳಿಸಬೇಕಾಗಿತ್ತು ಎಂಬ ಅಭಿಪ್ರಾಯಕ್ಕೆ ಬಂದು, ಅವಳ ಆಪಾದನೆಯು ಸುಳ್ಳಿನ ಕಂತೆ ಎಂದು ಹೇಳಿತ್ತು. ಆದರೆ ಅಲ್ಲಿನ ಉಚ್ಚ ನ್ಯಾಯಾಲಯವು ಅವೆಲ್ಲಾ ಸಂದರ್ಭಗಳನ್ನೂ, ಕೃತ್ಯದ ಭೀಕರತೆಯನ್ನೂ ಗಮನಿಸಿ, ಸತ್ರ ನ್ಯಾಯಾಲಯ ತಳೆದ ಅಭಿಪ್ರಾಯ ಸರಿಯಾದುದಲ್ಲ ಎಂದಿತು; ಕಮಲಳಿಗೆ ಹಾಗೆ ವರದಿಯನ್ನು ತಡವಾಗಿ ಕೊಡಲು ಸಾಕಷ್ಟು ಕಾರಣಗಳಿದ್ದವು; ಕೃತ್ಯವು ನಡೆದುದು ಸಾಯಂಕಾಲ ೭-೩೦ ಗಂಟೆಗೆ; ಕೃತ್ಯ ನಡೆದ ಸ್ಥಳ, ಅತಿ ಹಿಂದುಳಿದ ಗ್ರಾಮಾಂತರ ಪ್ರದೇಶ; ಕಮಲ ನಾಲ್ವರು ಅಪ್ರಾಪ್ತ ಮಕ್ಕಳ ತಾಯಿ, ವಿಧವೆ ಬೇರೆ. ಆರೋಪಿಗಳ ಧಾರ್ಷ್ಟ್ಯವನ್ನು ಕಂಡು ಹೆದರಿ ಹೋಗಿದ್ದಳು. ಓಂ ಪ್ರಕಾಶನ ಕೊಲೆಯನ್ನು ಸ್ವತಃ ನೋಡಿದವಳಾಗಿ ಭೀತಳಾಗಿದ್ದಳು. ಜೊತೆಗೆ ಅವಳಿಗೂ ಮಕ್ಕಳಿಗೂ ಗಾಯಗಳಾಗಿದ್ದುವು. ಕೊಲೆಗಡುಕರ ಕೈಯಿಂದ ಪಾರಾದರೆ ಸಾಕೆಂದು ಓಡಿ ಹೋಗಿ ಛಬೀಲಾಲ ಎಂಬೊಬ್ಬನ ಮನೆಯನ್ನು ತಲುಪಿ ಆ ರಾತ್ರಿಯನ್ನು ಅಲ್ಲಿ ಕಳೆದಳು; ಆಗ ಕೊರೆಯುವ ಚಳಿ ಬೇರೆ. ಪರಿಸ್ಥಿತಿ ಹೀಗಿರುವಾಗ ಅವಳು ಅಲ್ಲಿಂದ ೧೮ ಕಿಲೋಮೀಟರ್ ದೂರದ ಪೊಲೀಸ್ ಠಾಣೆಗೆ ಹೋಗಿ ಮಾರನೇ ದಿನ ಬೆಳಿಗ್ಗೆ ೧೦.೩೦ ಗಂಟೆಗೆ ವರದಿಯನ್ನು ಸಲ್ಲಿಸಿದರೆ ಅದು 'ತಡವಾಗಿ ವರದಿ ಸಲ್ಲಿಸಲಾಯ್ತು' ಎನ್ನುವ ಅಪವಾದಕ್ಕೆ ಪಕ್ಕಾಗದು ಎಂದು ನಿರ್ಧರಿಸಿ ಸತ್ರ ನ್ಯಾಯಾಲಯದ ಅಭಿಪ್ರಾಯವನ್ನು ತಳ್ಳಿ ಹಾಕಿತು. ಸರ್ವೋಚ್ಚ ನ್ಯಾಯಾಲಯವು ಇದೇ ಅಭಿಪ್ರಾಯವನ್ನು ಎತ್ತಿ

ಹಿಡಿದು ಅವಳು ವರದಿಯನ್ನು ತಡವಾಗಿ ಕೊಟ್ಟಿರುವಳೆಂಬುದು ಪ್ರಕರಣಕ್ಕೆ ಮಾರಕವಾಗಿಲ್ಲವೆಂದಿತು.

ಸತ್ರ ನ್ಯಾಯಾಲಯದ ಇನ್ನೊಂದು ವಾದವೆಂದರೆ, ಆ ಕೃತ್ಯದ ಕುರಿತಾದ ವರದಿ, ೧೯೭೩ನೇ ದಂಡ ಪ್ರಕ್ರಿಯಾ ಸಂಹಿತೆಯನ್ವಯ, ದಂಡಾಧಿಕಾರಿಗೆ ಅತಿ ತ್ವರಿತವಾಗಿಯೇ ಮುಟ್ಟಿಸುವ ಅಗತ್ಯವಿದೆ. ಈ ಪ್ರಕರಣದಲ್ಲಿ ಅದು ಅತಿ ವಿಳಂಬವಾಗಿಯೇ ತಲುಪಿದ್ದರಿಂದ ಕಮಲಳ ದೂರು ಸತ್ಯಕ್ಕೆ ದೂರವಾಗಿದೆಯೆಂದು ಊಹಿಸಲು ಬರುತ್ತದೆ, ಎಂಬುದಾಗಿತ್ತು. ಅದಕ್ಕೆ ಸಮಾಧಾನಕರವಾಗಿ ಉಚ್ಚ ನ್ಯಾಯಾಲಯವು ಪೊಲೀಸ್ ಪೇದೆಯು ಕೊಟ್ಟಿದ್ದ ಸಾಕ್ಷಿ ಹೇಳಿಕೆಯನ್ನು ಸಮರ್ಥಿಸಿಕೊಳ್ಳುತ್ತ ಹೀಗೆಂದಿತು: ದಂಡ ಪ್ರಕ್ರಿಯಾ ಸಂಹಿತೆಯ ರೀತ್ಯಾ ವರದಿಯನ್ನು ದಂಡಾಧಿಕಾರಿಗೆ ಕೊಡುವುದು ಪೊಲೀಸರ ಕರ್ತವ್ಯ ಕ್ಷೇತ್ರಕ್ಕೆ ಸೇರಿದುದು, ಇದರಲ್ಲಿ ಕಮಲಳ ಕೈವಾಡವೇನೂ ಇರುವುದಿಲ್ಲ. ಪೊಲೀಸ್ ಪೇದೆ ತಾನು ಅಂಥ ವರದಿಯನ್ನು ತೆಗೆದುಕೊಂಡು ಹೋದಾಗ ದಂಡಾಧಿಕಾರಿಯ ಮನೆಗೆ ಬೀಗ ಮುದ್ರೆ ಹಾಕಿದ್ದುದರಿಂದ ತಾನು ಪುನಃ ಠಾಣೆಗೆ ಹಿಂತಿರುಗಿ ಬಂದು, ನಿರೀಕ್ಷಕರನ್ನು ಕಂಡು, ಅದನ್ನು ಮತ್ತೊಂದು ಸ್ಥಳದಲ್ಲಿದ್ದ ಮತ್ತೊಬ್ಬ ದಂಡಾಧಿಕಾರಿಯ ಬಳಿ ಕೊಂಡೊಯ್ದು ಮುಟ್ಟಿಸಿದಾಗ ಬಹಳ ತಡವಾಯಿತು ಎಂದು ಹೇಳಿರುವುದರಲ್ಲಿ ತಥ್ಯಾಂಶವಿಲ್ಲದೆ ಇಲ್ಲ, ಆ ಪ್ರಯುಕ್ತ ಕಮಲಳು ಕೊಟ್ಟ ದೂರಿನ ವರದಿಗೆ ಧಕ್ಕೆ ಬರಲಾರದು ಎಂದಿರುವುದನ್ನು ಸರ್ವೋಚ್ಚ ನ್ಯಾಯಾಲಯವು ಪೂರ್ಣವಾಗಿ ಎತ್ತಿಹಿಡಿಯಿತು.

ಸತ್ರ ನ್ಯಾಯಾಲಯಕ್ಕೆ ಒದಗಿ ಬಂದ ಮತ್ತೊಂದು ಕಾರಣವು ಹೀಗಿತ್ತು: ಆ ಪ್ರಕರಣದಲ್ಲಿ ೩-೪ ಸಾಕ್ಷಿಗಳು ಪ್ರತಿಕೂಲರಾಗಿರುತ್ತಾರೆಂಬ ಕಾರಣದಿಂದಾಗಿ ಅಭಿಯೋಜಕರು ಅವರನ್ನು ಸತ್ರ ನ್ಯಾಯಾಲಯದೆದುರು ಸಾಕ್ಷಿಗಳಾಗಿ ಹೇಳಿಕೆ ಕೊಡಿಸಿರಲಿಲ್ಲ, ಆದರೆ ಅವರ ಸಾಕ್ಷ್ಯದ ಅಗತ್ಯವಿದೆ ಎಂದ ಸತ್ರ ನ್ಯಾಯಾಲಯವು ಅವರುಗಳನ್ನೆಲ್ಲಾ ಕರೆಸಿ ಅವರ ಹೇಳಿಕೆಗಳನ್ನು ಸಾಕ್ಷ್ಯ ರೂಪದಲ್ಲಿ ತೆಗೆದುಕೊಂಡಿತ್ತು, ಮತ್ತು ಅವರ ಸಾಕ್ಷ್ಯದ ಮೂಲಕವೂ ಆರೋಪಿಗಳ ಕೃತ್ಯವು ಸಾಬೀತಾಗಿಲ್ಲವೆಂದು ಕಂಡು ಬಂತೆಂದು ಸತ್ರ ನ್ಯಾಯಾಲಯವು ಅವರ ಬಿಡುಗಡೆಗೆ ಆದೇಶವಿತ್ತಿತ್ತು. ಆದರೆ ಉಚ್ಚ ನ್ಯಾಯಾಲಯವು ಅಂಥ ಪ್ರತಿಕೂಲ ಸಾಕ್ಷಿಗಳೆನ್ನುವವರ ಹೇಳಿಕೆಯ ಮೇಲಿಂದಲೇ ಆರೋಪಿಗಳ ಕೃತ್ಯದ ಸಾಬೀತಾಗಿದೆ ಎನ್ನುವಂತಿದೆ ಎಂದು ಹೇಳಿತು. ಏಕೆಂದರೆ, ಆ ಸಾಕ್ಷಿಗಳೂ ಆ ಕೃತ್ಯ ನಡೆದ ಕಾಲದಲ್ಲಿ ಕಮಲ, ಅವಳ ಮಕ್ಕಳು, ಮೃತರೂ ಇದ್ದರೆಂದು ಹೇಳುತ್ತಾರೆ; ಆದರೆ ಅವರು ಓಂ ಪ್ರಕಾಶನನ್ನು ಮಹೀಂದರ್‌ನನ್ನು ಯಾರು ಕೊಂದರೆಂದು ತಾವು ನೋಡಿಲ್ಲ ಎಂದು ಹೇಳಿರುತ್ತಾರೆ. ಅವರು ಹಾಗೆ ಹೇಳಲು ಕಾರಣವೂ ಇಲ್ಲದಿಲ್ಲ. ಅವರುಗಳೇ ಒಪ್ಪಿಕೊಂಡಂತೆ ಅವರು ರಾಮ್ ಎಂಬವನ ಜೀತದಾಳುಗಳೇ ಆಗಿದ್ದರು; ಅಂಥವರು ತಮ್ಮ ಒಡೆಯನ ವಿರುದ್ಧ ಹೇಳಿಕೆ ಕೊಡಲು ನಿರಾಕರಿಸಿರುವುದು ಸಹಜವೆ. ಅವರು ಪ್ರತಿಕೂಲ ಹೇಳಿಕೆ ಕೊಡಲು ಅದೇ ಕಾರಣ. ಅವರ ಹೇಳಿಕೆಯಿಂದಲೂ ಕಮಲ ಮತ್ತಿತರರು ಅಲ್ಲಿ ಇದ್ದ ಬಗ್ಗೆ ಸಾಬೀತಾಗುವುದರಿಂದ ಕಮಲಳ ಹೇಳಿಕೆ ನಂಬಿಗೆಯ ಹಂತವನ್ನೇರುತ್ತದೆ ಎಂಬ ಉಚ್ಚ ನ್ಯಾಯಾಲಯದ ನಿಲುವನ್ನು ಸರ್ವೋಚ್ಚ ನ್ಯಾಯಾಲಯವು ಅಂಗೀಕರಿಸಿತು.

ಇವೆಲ್ಲ ಸಾಕ್ಷ್ಯಾಧಾರಗಳನ್ನು ಪೂರ್ಣವಾಗಿ ವಿಶ್ಲೇಷಿಸಿ ನೋಡಿದಾಗ ರಾಮಕುಮಾರನ ಪಾಶವೀ ಕೃತ್ಯಕ್ಕೆ ಸಾಕಷ್ಟು ನಂಬಲರ್ಹವಾದ ಪುರಾವೆ ಇದೆಯೆಂದು ಕಂಡುಬರುತ್ತದಾದ್ದರಿಂದ ಉಚ್ಚ ನ್ಯಾಯಾಲಯದ ನಿರ್ಧಾರಕ್ಕೆ ತಿದ್ದುಪಡಿಯ ಅಗತ್ಯವಿಲ್ಲವೆಂದು ಸರ್ವೋಚ್ಚ ನ್ಯಾಯಾಲಯವು ಅಭಿಪ್ರಾಯ ಪಟ್ಟಿತು. ಪರಿಣಾಮವಾಗಿ ಉಚ್ಚ ನ್ಯಾಯಾಲಯವು ರಾಮಕುಮಾರನಿಗೆ ವಿಧಿಸಿದ್ದ ಜೀವಾವಧಿ ಶಿಕ್ಷೆ ಖಾಯಂ ಆಗಿ ಉಳಿಯುವಂತಾಯಿತು. ಕಮಲಳ ಮಾವ ರಾಮ್ ಎಂಬವನು ಆ ದುಷ್ಕೃತ್ಯದಲ್ಲಿ ಭಾಗಿಯಾಗಿದ್ದನೆಂದು ಉಚ್ಚ ನ್ಯಾಯಾಲಯವು ಹೇಳಿದ್ದರೂ ಅವನು ಆಗಲೇ ಮೃತಿಯನ್ನೈದಿದ್ದರಿಂದ ಅವನ ಮೇಲಿನ ಪ್ರಕರಣ ಆ ಕಾರಣಕ್ಕಾಗಿ ಕೊನೆಗೊಂಡಿತ್ತು. ಆದರೆ ಅವನ ಭಾವ ರಾಮಕುಮಾರನಿಗೆ ಆತ ಮಾಡಿದ್ದ ಹೇಯ ಕೃತ್ಯಕ್ಕೆ ತಕ್ಕ ಶಾಸ್ತಿಯಾಯಿತು. ●



## ಮಧುರ ಸೇತು

# ಡಾ. ಪಾ.ಶ. ಶ್ರೀನಿವಾಸ

ಮಧುರೈ ಎಂದಾಕ್ಷಣ ಸಾಮಾನ್ಯವಾಗಿ ಸುಪ್ರಸಿದ್ಧ ಮೀನಾಕ್ಷಿ ಸುಂದರೇಶ್ವರ ದೇವಾಲಯದ ನೆನಪಾದರೆ ಕನ್ನಡ ಸಾಹಿತ್ಯಾಸಕ್ತರ ವಲಯದೊಳಗೆ ಮಾತ್ರ ಡಾ. ಪಾ.ಶ. ಶ್ರೀನಿವಾಸರು ಕಣ್ಣೆದುರು ನಿಲ್ಲುತ್ತಾರೆ. ಇದಕ್ಕೆ ಮುಖ್ಯಕಾರಣ ಅವರ ಸಾಹಿತ್ಯ ಕೃಷಿಯಲ್ಲಿ ಎದ್ದುಕಾಣುವ ಆಳವಾದ ಜೀವನಾನುಭವ, ಪಾಂಡಿತ್ಯ, ಸಮತೋಲ ವಿಚಾರ ವಿಮರ್ಶಾ ಪದ್ಧತಿ, ಎಲೆಮರೆಯ ಕಾಯಂತೆ ಸದ್ದಿಲ್ಲದೆ ಕಾರ್ಯಪ್ರವೃತ್ತರಾಗಿರುವಿಕೆ ಹಾಗೂ ಅವರೊಳಗಿನ ಮಾನವೀಯ ಅಂತಃಕರಣಗಳು. ಅವರು ನನಗೆ ಗುರುಸಮಾನರು ಮಾತ್ರವಲ್ಲ, ನನ್ನ ಹಿರಿಯ ಸಹೋದ್ಯೋಗಿಗಳು ಕೂಡ. 'ಮಧುರೈ ಕಾಮರಾಜ ವಿಶ್ವವಿದ್ಯಾಲಯ'ದ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರು ಹಾಗೂ ಅದರ ಮುಖ್ಯಸ್ಥರು.

ಪಾ. ಶ. ಶ್ರೀ. ಮೂಲತಃ ದಕ್ಷಿಣ ಕನ್ನಡ ಜಿಲ್ಲೆಯವರು. ಶಂಕರನಾರಾಯಣ ಬಾಯಿರಿ ಮತ್ತು ಕಾವೇರಮ್ಮನವರ ಮಗನಾಗಿ ೧೯೩೪ಸನೇ ಇಸವಿಯ ಸಪ್ಟಂಬರ್ ತಿಂಗಳ ೨ಲನೇ ತಾರೀಖಿನಂದು ಪಾಂಡೇಶ್ವರದಲ್ಲಿ ಶ್ರೀನಿವಾಸರು ಜನಿಸಿದರು. ಅವರು ಬೆಳೆದುದು, ಪ್ರಾಥಮಿಕ, ಮಾಧ್ಯಮಿಕ ಹಾಗೂ ಇಂಟರ್‌ವರೆಗಿನ ಶಿಕ್ಷಣವನ್ನು ಪಡೆದುದು ಸಕ್ಕರೆ ಸೀಮೆಯೆಂದೇ ಜನಜನಿತವಾಗಿರುವ ಮಂಡ್ಯದಲ್ಲಿ, ೧೯೫೫-೫೯ರ ವರೆಗಿನ ಅವಧಿಯಲ್ಲಿ ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಅವರು ಕನ್ನಡ ಆನರ್ಸ್ (ಬಿ.ಎ.) ಹಾಗೂ ಎಂ.ಎ. ಪದವಿಗಳನ್ನು ಪಡೆದರು. ಸಾಹಿತ್ಯ ಹಾಗೂ ಸಂಘಟನಾತ್ಮಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದ ಪಾ.ಶ.ಶ್ರೀಯವರು ೧೯೫೯ರಲ್ಲಿ ಕನ್ನಡನಾಡನ್ನು ಬಿಟ್ಟು ನೆರೆಯ ತಮಿಳುನಾಡಿಗೆ ಬಂದರು.

ಮದರಾಸಿನಲ್ಲಿ ಅಮೆರಿಕದ ಫೋರ್ಡ್ ಫೌಂಡೇಶನ್ ನೆರವಿನಿಂದ ಕಾರ್ಯವೆಸಗುತ್ತಿದ್ದ ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯಲ್ಲಿ (Southern Language Book Trust) ಕನ್ನಡ ವಿಭಾಗದ ಸಂಪಾದಕರಾಗಿ ಸೇರಿಕೊಂಡು ೧೯೫೯ ರಿಂದ ತಮಿಳುನಾಡಿನ ಕನ್ನಡಿಗರಾಗಿಬಿಟ್ಟರು. ೧೯೫೯

• ಡಾ. ಹರಿಕೃಷ್ಣ ಭರಣ್ಯ

ರಿಂದ ೧೯೬೪ರ ವರೆಗಿನ ಐದು ವರ್ಷಗಳಲ್ಲಿ ಅವರು ಸುಮಾರು ಮೂವತ್ತಕ್ಕೂ ಹೆಚ್ಚು ಕನ್ನಡ ಪುಸ್ತಕಗಳನ್ನು ಪ್ರಕಟಿಸುವ ಸಾಹಸದ ಕೆಲಸವನ್ನು ಅಲ್ಲಿ ಮಾಡಿದರು. ಅಲ್ಲದೆ ಅಂದಿನ ಜನಪ್ರಿಯ ಪತ್ರಿಕೆ ('ಕತೆಗಾರ,' 'ಜನಪ್ರಗತಿ' ಇತ್ಯಾದಿ)ಗಳಲ್ಲೆಲ್ಲಾ ಅವರ ಕತೆ, ಲೇಖನಗಳು ಪ್ರಕಟವಾಗುತ್ತಿದ್ದು ಕನ್ನಡದಲ್ಲಿ ಅವರೊಬ್ಬ ಜನಪ್ರಿಯ ಬರಹಗಾರರೆನಿಸಿಕೊಂಡಿದ್ದರು, ಮಾತ್ರವಲ್ಲ ಅಂದಿನ ಕಾಲಕ್ಕೆ ವಿಶಿಷ್ಟವಾದ, ಪ್ರಕಟಿತ ಪುಸ್ತಕಗಳ ಮಾಹಿತಿಯನ್ನು ಕೊಡುವ 'ಪುಸ್ತಕ ಮಿತ್ರ'ವೆನ್ನುವ ತ್ರೈಮಾಸಿಕದ ಸಂಪಾದಕರಾಗಿಯೂ ಕೆಲಸ ನಡೆಸಿದರು.

೧೯೬೪ರಲ್ಲಿ ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ಉಪನ್ಯಾಸಕರಾಗಿ ಸೇರಿಕೊಂಡ ನಂತರ ಪಾ.ಶ.ಶ್ರೀ.ಯವರ ಸಾಹಿತ್ಯಕ ಚಟುವಟಿಕೆಗಳು ಸಂಶೋಧನೆಯತ್ತ ಮುಖಮಾಡಿದವು. ಅಲ್ಲಿ ಕನ್ನಡ ವಿಭಾಗದ ಪ್ರಾಧ್ಯಾಪಕರಾಗಿದ್ದ (ದಿ.) ಎಂ. ಮರಿಯಪ್ಪಭಟ್ಟರ ಮಾರ್ಗದರ್ಶನದಲ್ಲಿ ಪಿ.ಎಚ್.ಡಿ. ಪದವಿಗಾಗಿ ಸಂಶೋಧನೆ ನಡೆಸತೊಡಗಿದರು. ಜೊತೆಗೆ ವಿಶ್ವವಿದ್ಯಾಲಯ ಧನಸಹಾಯ ಆಯೋಗದ ನೆರವಿನಿಂದ ಆರಂಭಗೊಂಡ ಕಿಟ್ಟೆಲ್ಲರ ಕನ್ನಡ-ಇಂಗ್ಲಿಷ್ ಅರ್ಥಕೋಶದ ಪರಿಷ್ಕರಣದಲ್ಲಿಯೂ ಪಾಲ್ಗೊಂಡರು.

ಅವರ ಸಂಶೋಧನ ಕೃತಿಯಾದ A Comparative Study of Sharana and Dasa Literature (ಶರಣ ಹಾಗೂ ದಾಸ ಸಾಹಿತ್ಯದ ಒಂದು ತೌಲನಿಕ ಅಧ್ಯಯನ) ಅನ್ನು ಅವರು ೧೯೭೦ರಲ್ಲಿ ಸಾದರಪಡಿಸಿದ್ದು, ಅದಕ್ಕೆ ೧೯೭೧ರಲ್ಲಿ ಮದರಾಸು ವಿಶ್ವವಿದ್ಯಾನಿಲಯವು ಪಿ.ಎಚ್.ಡಿ. ಪದವಿಯನ್ನು ನೀಡಿದೆ. ಈ ಮಹಾಪ್ರಬಂಧವನ್ನು ೧೯೮೧ರಲ್ಲಿ ಮದರಾಸು ವಿ.ವಿ.ಯೇ ಪ್ರಕಟಿಸಿದೆ. ಕನ್ನಡ ಸಾಹಿತ್ಯದ ಚರಿತ್ರೆಯಲ್ಲೇ ವಿಶಿಷ್ಟವಾದ ಕೃತಿಯೆಂಬುದಾಗಿ ವಿಮರ್ಶಕರಿಂದ ಮೆಚ್ಚುಗೆಯನ್ನು ಪಡೆದುದಲ್ಲದೆ ಕನ್ನಡ ಸಾಹಿತ್ಯದಲ್ಲಿನ ಭಕ್ತಿ ಪರಂಪರೆಯ ಮೇಲೆ ನಡೆದ ಒಂದು ತುಲನಾತ್ಮಕ ಅಧ್ಯಯನದ ಅಮೂಲ್ಯ ಆಕರ ಗ್ರಂಥವೆಂಬ ಗೌರವವನ್ನೂ ಅದು ಪಡೆದಿದೆ. ಸಂಪೂರ್ಣ ಇಂಗ್ಲಿಷ್ ಭಾಷೆಯಲ್ಲಿರುವುದರಿಂದಾಗಿ ಇದು ಕನ್ನಡೇತರರಿಗೂ ಕನ್ನಡದ ಬಗೆಗೆ ತಿಳಿಯುವಂತೆ ಮಾಡಿದೆ.

ಪಾ.ಶ.ಶ್ರೀ.ಯವರು ಮದರಾಸಿನಲ್ಲಿದ್ದರೂ ಸಾಂಘಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡವರು. ಮದರಾಸಿನ ಟ್ರಿಪ್ಲಿಕೇನಿನಲ್ಲಿ ಕನ್ನಡ ಮಿತ್ರ ಸಂಘವನ್ನು ಸ್ಥಾಪಿಸಿ ಅನೇಕ ಚಟುವಟಿಕೆಗಳನ್ನು ನಡೆಸಿದರು. ಅಂದಿನ ಸುಪ್ರಸಿದ್ಧ ಚಲನಚಿತ್ರ ನಿರ್ಮಾಪಕ ನಿರ್ದೇಶಕ ನಟ (ದಿ.) ಆರ್. ನಾಗೇಂದ್ರರಾಯರು ಅಧ್ಯಕ್ಷರಾಗಿದ್ದ ಆ ಸಂಘದ ಉಪಾಧ್ಯಕ್ಷರಾಗಿ ಶ್ರೀನಿವಾಸರು ಸೇವೆ ಸಲ್ಲಿಸಿದ್ದರು. ಅಲ್ಲದೆ, ಮದರಾಸಿನಲ್ಲಿ ಅನೇಕ ಆಕಾಶವಾಣಿ ಕಾರ್ಯಕ್ರಮಗಳನ್ನೂ ಸಾಹಿತ್ಯಕ-ಸಾಂಸ್ಕೃತಿಕ ಚಟುವಟಿಕೆಗಳನ್ನೂ ಹಮ್ಮಿಕೊಂಡು, ಕನ್ನಡನಾಡಿನಿಂದ ದೂರವಿದ್ದರೂ ಕನ್ನಡದ ಕಂಪನ್ನು ಹಬ್ಬಿಸುತ್ತ ಸಂಘಜೀವಿಯಾಗಿ ಬೆಳೆದು ಬಂದವರು ಅವರು.

೧೯೭೨ರ ನವಂಬರ್ ತಿಂಗಳಲ್ಲಿ ಮಧುರೈ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ವಿಭಾಗವನ್ನು ತೆರೆದಾಗ ಅದರ ಪ್ರವಾಚಕ-ಮುಖ್ಯಸ್ಥರಾಗಿ ನೇಮಕಗೊಂಡರು. ಆ ಮೂಲಕ ಪಾ.ಶ.ಶ್ರೀ. ದಂಪತಿ ಮಧುರೆಯವರೇ ಆಗಿಬಿಟ್ಟರು. ಮಧುರೆಯಲ್ಲಿ ಶ್ರೀನಿವಾಸರು ಕನ್ನಡ ಅಧ್ಯಾಪನದ ಜೊತೆಗೆ, ಅಪ್ಪಟ ತಮಿಳು ಸಂಸ್ಕೃತಿಯನ್ನು ಚೆನ್ನಾಗಿ ಅರಗಿಸಿಕೊಂಡು, ಅಧ್ಯಯನವನ್ನು ನಡೆಸಿ, ತಮಿಳಿನ ಪ್ರಮುಖ ಸಾಹಿತ್ಯ ಕೃತಿಗಳನ್ನು ಕನ್ನಡಕ್ಕೆ ತರುವ ಯೋಜನೆಗಳನ್ನು ಹಾಕಿಕೊಂಡರು. ತಮಿಳಿನ ಶ್ರೇಷ್ಠ ಕೃತಿಯಾದ ವಳ್ಳುವರ್ ಕವಿಯ 'ತಿರುಕ್ಕುರಳ್'ನ್ನು ಸಮಗ್ರವಾಗಿ, ಸಮರ್ಥವಾಗಿ ಕನ್ನಡಕ್ಕೆ ತಂದರು. ಈ ಕೃತಿಯನ್ನು ಮಧುರೆಯ ಕಾಮರಾಜ ವಿಶ್ವವಿದ್ಯಾನಿಲಯವೇ ಪ್ರಕಟಿಸಿದೆ (೧೯೮೨). ಇದು ತಮಿಳುನಾಡಿನ ಮಧುರೆಯಿಂದ ಪ್ರಕಟವಾದ ಮೊದಲ ಕನ್ನಡ ಕೃತಿಯಷ್ಟೇ ಅಲ್ಲ, ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ 'ಉತ್ತಮ ಸೃಜನಶೀಲ ಅನುವಾದ'ವೆಂಬ ಬಹುಮಾನವನ್ನೂ ಪಡೆದಿದೆ. ಕನ್ನಡದಲ್ಲಿ ಒಂದೆರಡು ತಿರುಕ್ಕುರಳಿನ ಅನುವಾದಗಳು ಈ ಹಿಂದೆ ಬಂದಿದ್ದರೂ ಪಾ.ಶ. ಶ್ರೀನಿವಾಸರ ಅನುವಾದ ಕೃತಿಗೆ ಅದರದ್ದೇ ಆದ ವೈಶಿಷ್ಟ್ಯ, ಮೌಲ್ಯಗಳು ಇವೆಯೆಂಬುದನ್ನು ಯಾರಾದರೂ ಅರ್ಥಮಾಡಿಕೊಳ್ಳಬಹುದಾಗಿದೆ.

ಅವರ 'ತಿರುಕ್ಕುರಳ್' ಅನುವಾದದ ಹಿರಿಮೆಯನ್ನು ಮನ್ನಿಸಿ ತಮಿಳುನಾಡಿನ ಮಧುರೈ ಸಿದ್ಧಾಶ್ರಮ, ರಾಜಪಾಳಯಂನ ಪ್ರತಿಷ್ಠಿತ ಮಣಿಮೇಖಲೈ ಮನ್ರಂ ಹಾಗೂ ಮಧುರೈ ಕಾಮರಾಜ ವಿಶ್ವವಿದ್ಯಾಲಯದಲ್ಲಿನ ಬೇರೆ ಬೇರೆ ಭಾಷಾವಿಭಾಗಗಳು ಪಾ.ಶ.ಶ್ರೀ.ಯವರನ್ನು ಅಭಿನಂದಿಸಿ ಗೌರವಿಸಿರುವುದು ಕನ್ನಡ ನಾಡಿಗೇ ಅಭಿಮಾನ ತರುವ ವಿಷಯ. ಅಲ್ಲದೆ ಕರ್ನಾಟಕ ರಾಜ್ಯೋತ್ಸವದ ಸಂದರ್ಭದಲ್ಲಿ ತವರೂರಿನ ಮಂಡ್ಯದಲ್ಲಿ ಜಿಲ್ಲಾಧಿಕಾರಿಗಳು ಅವರಿಗೆ ಶ್ರೀಗಂಧದ ಕರಂಡಕವನ್ನರ್ಪಿಸಿ ಗೌರವಿಸಿದ್ದಲ್ಲದೆ (೧೯೮೫) ಜಿಲ್ಲಾ ಪರಿಷತ್ತು ಏರ್ಪಡಿಸಿದ ಮಂಡ್ಯ ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನಿಸಿ ದ್ದಾರೆ.

೧೯೮೮ರಲ್ಲಿ ಪ್ರಾಧ್ಯಾಪಕರಾಗಿ ಬಡ್ತಿ ಹೊಂದಿದ ಪಾ.ಶ.ಶ್ರೀ.ಯವರು ಇನ್ನಷ್ಟು ಸಾಂಸ್ಕೃತಿಕ-ಸಾಹಿತ್ಯಕ ಸಂಪತ್ತನ್ನು ತಮಿಳಿನಿಂದ ಕನ್ನಡಕ್ಕೆ ತಂದರು. ಈ ಮಧ್ಯೆ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗವನ್ನು ವಿಸ್ತರಿಸುವತ್ತ ಶ್ರಮಿಸಿದರು. ಒಬ್ಬರೇ ಇದ್ದ ಈ ವಿಭಾಗವು ಮತ್ತಿಬ್ಬರು ಅಧ್ಯಾಪಕರನ್ನು ಪಡೆದು ವಿಸ್ತೃತಗೊಂಡಿತು. ಈಗ ಇಲ್ಲಿ ಕನ್ನಡದಲ್ಲಿ ಪಿ.ಎಚ್.ಡಿ.ಯಲ್ಲದೆ ಎಂ.ಫಿಲ್., ಸರ್ಟಿಫಿಕೆಟ್ ಹಾಗೂ ಡಿಪ್ಲೋಮಾ ತರಗತಿಗಳು ನಡೆದು ಬರುತ್ತಿವೆ. ಈಗಾಗಲೇ ಕರ್ನಾಟಕ ಹಾಗೂ ಕೇರಳಗಳಿಂದ ಹಲವಾರು ಮಂದಿ ವಿದ್ಯಾರ್ಥಿಗಳು ಬಂದು ಪಿ.ಎಚ್.ಡಿ. ಹಾಗೂ ಎಂ.ಫಿಲ್. ಪದವಿಗಳನ್ನು ಗಳಿಸಿಕೊಂಡು ಹೋಗಿದ್ದಾರೆ.

ಡಾ.ಪಾ.ಶ.ಶ್ರೀನಿವಾಸರು ಸಂಶೋಧನೆ ಹಾಗೂ ಅಧ್ಯಾಪನಗಳ ಜೊತೆಗೆ ತಮಿಳಿನ ಅಮೂಲ್ಯ ಸಾಹಿತ್ಯರಾಶಿಯಿಂದ ಆಯ್ದ ಹಲವಾರು ವಿಚಾರಗಳನ್ನು ತಂದರು. ಅವರ 'ಸಾಹಿತ್ಯ ಕಾವೇರಿ' ತಮಿಳು ಸಾಹಿತ್ಯ-ಸಂಸ್ಕೃತಿಗಳನ್ನು ಕನ್ನಡದಲ್ಲಿ ಬಿಂಬಿಸುವ ಮಹತ್ವದ ಕೃತಿ. ಇದು ೧೯೮೮ರಲ್ಲಿ ಬೆಂಗಳೂರಿನ ಕುವೆಂಪು ಪ್ರತಿಷ್ಠಾನದಿಂದ ಪ್ರಕಟಗೊಂಡಿದೆ. 'ಸಾಹಿತ್ಯ ಕಾವೇರಿ'ಯ ಎರಡನೇ ಭಾಗ ಇದೀಗ ಪ್ರಕಟಣೆಯನ್ನು ಕಾಣಲಿದೆ. ಹಾಗೆಯೇ, ದಿಲ್ಲಿಯ ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ ಅವರು ಅನುವಾದಿಸಿದ "ತಿರುವಳ್ಳುವರ್" ಕೃತಿ ೧೯೯೦ರಲ್ಲಿ ಪ್ರಕಟವಾಗಿದೆ. ಮಾತ್ರವಲ್ಲದೆ, ಇನ್ನಷ್ಟು ಅಮೂಲ್ಯವಾದ ಲೇಖನಗಳನ್ನು ಪತ್ರಿಕೆಗಳಲ್ಲಿ ನಿಯತಕಾಲಿಕೆಗಳಲ್ಲಿ ಹಾಗೂ ಕೆಲವು ಅಭಿನಂದನ ಗ್ರಂಥಗಳಲ್ಲಿ ಪ್ರಕಟಿಸಿದ್ದಾರೆ.

ಪಾ.ಶ.ಶ್ರೀಯವರ ಪ್ರಕಟಣೆಗಳ ಬಗ್ಗೆ ಸಮಗ್ರವಾದ ಪರಿಚಯ ಹಾಗೂ ಅಧ್ಯಯನ ಇನ್ನೂ ಬಂದಿಲ್ಲ. ಅವರ ವಿಮರ್ಶಾ ಸಾಮರ್ಥ್ಯವನ್ನು ಅವರ 'ಕಾವ್ಯಾನುಶೀಲನ' (ಪ್ರಕಟಣೆ: ಪ್ರಾಚ್ಯ ಕಾವ್ಯ ಪ್ರಕಾಶನ, ಬೆಂಗಳೂರು ೧೯೭೦)ರಲ್ಲಿ ಗುರುತಿಸಬಹುದಾಗಿದೆ. ಅವರನ್ನು ಉತ್ತಮ ಅನುವಾದಕರಾಗಿ, 'ಜರ್ಮನ್ ಸಂಪ್ರದಾಯ ಸಾಹಿತ್ಯ ದರ್ಪಣ' (ಇತರರೊಂದಿಗೆ) ಹಾಗೂ 'ಹಾರಾಡುವ ತರಗತಿ' (೧೯೭೦: ದಕ್ಷಿಣ ಭಾಷಾ ಪುಸ್ತಕ ಸಂಸ್ಥೆ), 'ತಿರುವಳ್ಳುವರ್' (೧೯೭೨, ಸಾಹಿತ್ಯ ಅಕಾಡೆಮಿ ಹೊಸದಿಲ್ಲಿ), 'ತಮಿಳು ಸಣ್ಣ ಕತೆಗಳು' (ಇತರರೊಂದಿಗೆ-ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು) 'ಪವಿತ್ರ ಕ್ಷೇತ್ರಗಳು' ಮಹಾಕವಿ ಸುಬ್ರಹ್ಮಣ್ಯ ಭಾರತಿಯವರ 'ಜ್ಞಾನ ರಥ' (೧೯೯೪ (ಎರಡೂ ದ. ಭಾಷಾ ಪುಸ್ತಕ ಸಂಸ್ಥೆಯ ಪ್ರಕಟಣೆಗಳು) ಮೊದಲಾದ ಕೃತಿಗಳಲ್ಲಿ ಗುರುತಿಸಬಹುದು. ಇಷ್ಟು ಮಾತ್ರವಲ್ಲದೆ, ಅವರು ಪ್ರಕಟಿಸಿದ ಐವತ್ತಕ್ಕೂ ಹೆಚ್ಚು ಸಾಹಿತ್ಯ ಸಂಶೋಧನಾತ್ಮಕ ವಿಮರ್ಶಾತ್ಮಕ ಲೇಖನಗಳು ಪ್ರಕಟಗೊಂಡಿವೆ.

ಎಳವೆಯಿಂದಲೇ ಸಾಹಿತ್ಯ ಸಾಂಸ್ಕೃತಿಕ ಚಟುವಟಿಗೆಗಳೊಂದಿಗೆ ಬೆಳೆದು ಬಂದ ಡಾ. ಶ್ರೀನಿವಾಸರು ಮಂಡ್ಯದಲ್ಲಿದ್ದಾಗ (೧೯೫೨-೫೯) 'ಕಿರಣ ಸಾಹಿತ್ಯ ಸಂಘ' ವೆಂಬ ಸಾಹಿತ್ಯಕ ಚಟುವಟಿಕೆಗಳ ಒಕ್ಕೂಟದ ಸಂಸ್ಥಾಪಕ ಅಧ್ಯಕ್ಷರಾಗಿ ಕೆಲಸ ಆರಂಭಿಸಿದವರು. ಅಲ್ಲೇ ಅನೇಕ ಮಂದಿ ನಾಡಿನ ಹಿರಿಯ ಹಾಗೂ ಪ್ರಖ್ಯಾತ ಕವಿ-ಸಾಹಿತಿಗಳನ್ನು ಕರೆಸಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡವರು. ಹೀಗಾಗಿ ಕನ್ನಡ ನಾಡಿನ ಅನೇಕ ಮಂದಿ ಪ್ರಖ್ಯಾತ ಲೇಖಕ-ವಿದ್ವಾಂಸರುಗಳ ಒಡನಾಟ ಅವರಿಗಿದೆ. ರಾಷ್ಟ್ರಕವಿ ಕುವೆಂಪು, ಆಚಾರ್ಯ ತೀ.ನಂ.ಶ್ರೀ, ಡಿ.ಎಲ್. ನರಸಿಂಹಾಚಾರ್ಯ, ಕೆ. ವೆಂಕಟರಾಮಪ್ಪ, ತ.ಸು. ಶಾಮರಾವ್, ಕ.ವೆಂ. ರಾಘವಾಚಾರ್, ಪ್ರೊ. ಎಸ್.ವಿ. ಪರಮೇಶ್ವರ ಭಟ್ಟ, ಪ್ರೊ. ದೇಜಗೌ, ಪ್ರೊ. ಸುಜನಾ ಮೊದಲಾದ ಕನ್ನಡದ ಆಚಾರ್ಯಪುರುಷರುಗಳ ಶಿಷ್ಯರಾಗಿದ್ದ

ಪಾಶಶ್ರೀಯವರು, ಅವರುಗಳಿಂದ ಕಲಿತುಕೊಂಡ ಪಾಠ ಹಾಗೂ ಅನುಭವ ಸಂಪತ್ತನ್ನು ಇಂದಿಗೂ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತಾರೆ. (ದಿ.) ನಿರಂಜನ ದಂಪತಿಗಳು, ಪ್ರೊ.ಅ.ರಾ.ಮಿತ್ರ, ಡಾ.ಹಂಪನಾ, ಕವಿ ಡಾ. ಎಸ್.ಎಸ್. ಲಕ್ಷ್ಮೀನಾರಾಯಣಭಟ್ಟ, ಪ್ರೊ. ಯು.ಆರ್. ಅನಂತಮೂರ್ತಿ, ಪ್ರೊ. ಚಿ.ನ.ಮಂಗಳಾ ಮೊದಲಾದ ಕನ್ನಡದ ಸುಪ್ರಸಿದ್ಧರು ಮಾತ್ರವಲ್ಲದೆ ತಮಿಳಿನ ಶ್ರೇಷ್ಠ ವಿದ್ವಾಂಸ (ದಿ.) ಮು. ವರದರಾಜನ್, ತೆಲುಗು ವಿದ್ವಾಂಸ (ದಿ.) ಪ್ರೊ. ಕೋದಂಡರಾಮಯ್ಯ, ಬಹುಭಾಷಾ ವಿದ್ವಾಂಸ ಪ್ರೊ. ಟಿ.ಬಿ ಸಿದ್ಧಲಿಂಗಯ್ಯ, ಮುದನೂರಿ ಜಗನ್ನಾಥರಾಜ ಮೊದಲಾದವರು ಪಾ.ಶ.ಶ್ರೀ.ಯವರ ಒಡನಾಡಿಗಳಾಗಿದ್ದವರೆಂಬುದು ವಿಶೇಷ.

ಪಾ.ಶ. ಶ್ರೀನಿವಾಸರು ಮಧುರೆಯಲ್ಲಿ ಸಂಘಜೀವಿಯಾಗಿಯೇ ಬೆಳೆದವರು. ೧೯೭೪ ರಿಂದ ಮಧುರೆಯ ಕರ್ನಾಟಕ ಸಂಘದ ಅವಿಭಾಜ್ಯ ಘಟಕವಾಗಿದ್ದು, ಹತ್ತಾರು ವರ್ಷಗಳು ಅವರು ಇದರ ಅಧ್ಯಕ್ಷರಾಗಿಯೂ ಕಾರ್ಯಕಾರೀ ಸದಸ್ಯರಾಗಿಯೂ ನಿಜವಾದ ಅರ್ಥದಲ್ಲಿ ಸೇವೆ ಸಲ್ಲಿಸಿದ್ದಾರೆ. ೧೯೮೬ರಲ್ಲಿ ಮಧುರೆಯ ಕರ್ನಾಟಕ ಸಂಘವು ತನ್ನ ಬೆಳ್ಳಿ ಹಬ್ಬವನ್ನು ಅತ್ಯಂತ ವಿಜೃಂಭಣೆಯಿಂದಲೂ ವರ್ಣರಂಜಿತವಾಗಿಯೂ ನಡೆಸಿದುದು ಇಂದು ಐತಿಹಾಸಿಕ ದಾಖಲೆಯಾಗಿದೆ. ಇದರಲ್ಲಿ ಹಲವಾರು ತಮಿಳು-ಕನ್ನಡ ಸಾಂಸ್ಕೃತಿಕ ಕೊಳು-ಕೊಡುಗೆಗಳ ಬಗ್ಗೆ ವಿಚಾರ ಸಂಕಿರಣಗಳೂ, ಬಹು ಭಾಷಾ ಕವಿಗೋಷ್ಠಿಯನ್ನೂ ಹಮ್ಮಿಕೊಳ್ಳುವುದರ ಮೂಲಕ ಕನ್ನಡಿಗರ ಪರಭಾಷಾ ಬಾಂಧವ್ಯವನ್ನು ಮೆರೆಯುವಂತೆ ಮಾಡಿದೆ. ಮೂರು ದಿನಗಳ ಸಾಹಿತ್ಯ-ಸಾಂಸ್ಕೃತಿಕ ಮೇಳವನ್ನು ಇಂದು ಮಧುರೆಯಲ್ಲಿರುವವರೂ ಇದ್ದು ಹೋದವರೂ ನೆನೆಸಿಕೊಳ್ಳುತ್ತಿರುತ್ತಾರೆ.

ಪ್ರಕೃತ ಮಧುರೆಯ ಕಾಮರಾಜ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ಅವರ ಮುಂದಾಳುತನದಲ್ಲಿ ತಮಿಳು-ಕನ್ನಡ ದ್ವಿಭಾಷಾ ನಿಘಂಟು ರಚನೆಯು ಮುಗಿದಿದ್ದು ಸದ್ಯದಲ್ಲೇ ಪ್ರಕಟಣೆಯನ್ನು ಕಾಣಲಿದೆ. ಇದು ತಮಿಳು ಕಲಿಯುವವರಿಗೆ ಹಾಗೂ ತಮಿಳಿನ ರಚನೆಗಳನ್ನು ಅನುವಾದಿಸುವವರಿಗೆ ಅಮೂಲ್ಯವಾದ ಸಹಾಯಕ ಗ್ರಂಥವೆನಿಸುವುದರಲ್ಲಿ ಸಂದೇಹವಿಲ್ಲ, ಜೊತೆಗೆ, ಅವರು ಅನುವಾದಿಸಿರುವ ತಮಿಳಿನ 'ತೊಲ್ಕಾಪ್ಪಿಯಮ್' ಕೃತಿಯೂ ಸದ್ಯದಲ್ಲೇ ಬೆಳಕು ಕಾಣಲಿದೆ.

ಅವರು ಮಧುರೆಗೆ ಬಂದು ಇಪ್ಪತ್ತೆರಡು ವರ್ಷಗಳಾಗಿವೆ. ಎಂದರೆ, ತಮಿಳುನಾಡಿನಲ್ಲಿ ಒಟ್ಟು ಮೂವತ್ತೈದು ವರ್ಷಗಳ ಸಾರ್ಥಕ ಬದುಕು ಅವರದ್ದಾಗಿದೆ.

ಪಾ.ಶ.ಶ್ರೀಯವರ ಬದುಕು ವೈವಿಧ್ಯಮಯ. ಸೃಜನಶೀಲ ಬರಹಗಾರರಾಗಿ, ಸಂಘಟಕರಾಗಿ, ಸಂಪಾದಕರಾಗಿ, ಒಂದು ಹಂತದ ಬದುಕಿನಿಂದ ಅನುವಾದಕ, ಸಂಶೋಧಕ, ಎರಡು ಸಂಸ್ಕೃತಿಗಳ ಮಧುರ ಸೇತುವೆಯಾಗಿ, ಉತ್ತಮ ಅಧ್ಯಾಪಕರಾಗಿ ಬೆಳೆದು ನಿಂತವರು ಅವರು. ಎಲ್ಲದಕ್ಕೂ ಮಿಗಿಲಾಗಿ ಅವರೊಬ್ಬ ಉತ್ತುಂಗ ಹೃದಯವಂತಿಕೆ, ವಿಚಾರಧಾರೆಗಳುಳ್ಳ ಎತ್ತರದ ವ್ಯಕ್ತಿ ಎಂಬುದು ನಮಗೆಲ್ಲ ಮರೆಯಲಾರದ ವಿಷಯ. ಹೊರನಾಡಿನಲ್ಲಿದ್ದೂ ಕನ್ನಡದ ಕಾಯಕವನ್ನು ಕ್ರಿಯಾಶೀಲವಾಗಿ ನಡೆಸಿ, ತಾವು ಹೊಕ್ಕ ನಾಡಿಗೂ ಹೊರಟ ನಾಡಿಗೂ ಹೇಗೆ ಋಣಿಯಾಗಿರಬಹುದೆಂಬುದನ್ನು ಪಾ.ಶ.ಶ್ರೀಯವರ ಬದುಕಿನಿಂದ ನಾವು ಕಲಿತುಕೊಳ್ಳಬೇಕು. ಸರಳ ಸಜ್ಜನಿಕೆಯ, ತುಂಬಿದ ಪಾಂಡಿತ್ಯದ ಮೃದು ಮಾತುಗಳಿಂದ ಕರೆದು, ಆತ್ಮೀಯವಾಗಿ ಮಾತನಾಡಿಸುವ ಹೃದಯವಂತಿಕೆ ಅವರದ್ದು. ಅವರ ಶ್ರೀಮತಿಯವರೂ ಅಷ್ಟೇ. ಯಾರನ್ನೇ ಆದರೂ ಇವರು ನಮ್ಮವರೇ ಎಂಬಂತೆ ಮಾತನಾಡಿಸುವ, ಸತ್ಕರಿಸುವ ವ್ಯಕ್ತಿತ್ವ ಸುಶೀಲಮ್ಮನವರದ್ದು. ಅವರ ಮನೆ ಎಂದರೆ ಅದು ನಮ್ಮ ಮನೆ, ನಿಮ್ಮ ಮನೆ, ಎಲ್ಲರ ಮನೆ.

ಹಲವಾರು ಪ್ರಶಸ್ತಿ ಬಿರುದು ಸನ್ಮಾನಗಳು ಪಾ.ಶ.ಶ್ರೀನಿವಾಸರಿಗೆ ಬಂದಿವೆ. ಆದರೆ ಅವುಗಳ ಬಗೆಗೆ ಎಂದೂ ಅವರು ಹೇಳಿಕೊಳ್ಳುವವರಲ್ಲ. ಅವರಿಗೆ ಅರುವತ್ತು ತುಂಬುತ್ತಿರುವ ಈ ಸಂದರ್ಭದಲ್ಲಿ ಅವರ ಮಿತ್ರವರ್ಗ, ಶಿಷ್ಯವೃಂದ, ಸಹೋದ್ಯೋಗಿಗಳು, ಬಂಧುಗಳು ಹಾಗೂ ಅಪಾರ ಅಭಿಮಾನಿ ವರ್ಗದವರೆಲ್ಲ ಸೇರಿ ಸನ್ಮಾನಗೈಯಲು ಒಂದು ಅಭಿನಂದನ ಗ್ರಂಥವನ್ನು ಸಮರ್ಪಿಸಲು ಕಾರ್ಯ ಪ್ರವೃತ್ತರಾಗಿದ್ದಾರೆ. ●

## ಸತ್ಯಕಥೆ

# ಶಾಪಗ್ರಸ್ತ ಖಜಾನೆ

● ಸವ್ಯಸಾಚಿ

ಹದಿನೇಳನೇ ಶತಮಾನದ ಕೊನೆಯ ಸಂಗತಿ. ಇಂಗ್ಲೆಂಡಿನ ನೌಕಾಪಡೆ ಇಡೀ ಭೂಮಧ್ಯಸಾಗರದಲ್ಲಿ ತನ್ನ ಪ್ರಭುತ್ವ ನಡೆಸುತ್ತಿತ್ತು. ಆ ಕಾಲದಲ್ಲಿ ಉತ್ತರ ಅಮೇರಿಕವು ಇಂಗ್ಲೆಂಡಿನ ವಸಾಹತು ಎನಿಸಿತ್ತು. ಸಾಹಸಿ ಹಾಗೂ ಚುರುಕಿನ ನಾವಿಕನೆಂದು ಕಪ್ತಾನ ಕಿಡ್ ಅಮೆರಿಕಾ ಹಾಗೂ ಇಂಗ್ಲೆಂಡಿನಲ್ಲಿ ಹೆಸರು ಪಡೆದಿದ್ದ.

ಒಂದು ರಾಜಕೀಯ ಔತಣಕೂಟದಲ್ಲಿ ಕಪ್ತಾನ ಕಿಡ್‌ನನ್ನು ಬೋಸ್ಟನ್ ಪ್ರಾಂತದ ಗವರ್ನರ್ 'ಆರ್ಲ್-ಆಫ್ ಬೆಲಮೌಂಟ್'ನಿಗೆ ಪರಿಚಯಿಸಲಾಯಿತು.

ಬೆಲಮೌಂಟ್ ಗುಪ್ತಯೋಜನೆಯೊಂದನ್ನು ಕಪ್ತಾನ ಕಿಡ್‌ನೆದುರಿಗಿಟ್ಟ. ಇಂಗ್ಲೆಂಡಿನ ಆಸೆಬುರುಕ ದೊರೆ ಮೂರನೇ ವಿಲಿಯಮ್‌ನ ಜತೆ ಸೇರಿ ಬೆಲಮೌಂಟ್ ಒಂದು ಸಿಂಡಿಕೇಟ್ ತಯಾರಿಸಿದ್ದ. ಅರಮನೆಯ ಕೋಶಾಧಿಕಾರಿ, ನೌಕಾದಳಾಧಿಪತಿ ಹಾಗೂ ಗೃಹಮಂತ್ರಿ ಕೂಡ ಈ ಸಿಂಡಿಕೇಟಿಗೆ ಸೇರಿದ್ದರು. ಸಮುದ್ರದಲ್ಲಿ ಯುದ್ಧದ ಹಡಗೊಂದನ್ನು ಕಳುಹಿಸಿ, ಹಣ ಮತ್ತು ಸಾಮಗ್ರಿಗಳಿಂದ ತುಂಬಿದ ಫ್ರೆಂಚ್ ಹಾಗೂ ಸ್ಪೇನಿನ ಹಡಗುಗಳನ್ನು ಕೊಳ್ಳೆ ಹೊಡೆಯುವುದೇ ಆ ಸಿಂಡಿಕೇಟ್‌ನ ಯೋಜನೆ. ಸಿಂಡಿಕೇಟ್‌ನ ಶರ್ತುಗಳ ಪ್ರಕಾರ ಕೊಳ್ಳೆಯನ್ನು ೪೦ ಭಾಗ ಮಾಡಿ ಹಂಚಲಾಗುತ್ತಿತ್ತು. ಎಲ್ಲಕ್ಕಿಂತ ಹೆಚ್ಚು ಭಾಗ ಬಾದಶಹನಿಗೆ ಸಲ್ಲುತ್ತಿತ್ತು.

ಬಹಳಷ್ಟು ಒತ್ತಡ ಹೇರಿದ ಮೇಲೆ ಕಪ್ತಾನ ಕಿಡ್ ಸಿಂಡಿಕೇಟಿನ ಸದಸ್ಯನಾಗಲು ಒಪ್ಪಿದ. ಬಹುಬೇಗನೆ ಅವನಿಗೆ ೨೮೨ ಟನ್ ಭಾರದ ಹಾಗೂ ೩೪ ತೋಪುಗಳಿಂದ ಸುಸಜ್ಜಿತವಾದ 'ಎಡ್ವೆಂಚರ್ ಗೇಲೀ' ಎಂಬ ಹಡಗನ್ನು ಒಪ್ಪಿಸಲಾಯಿತು. ಹಡಗುಗಳ್ಳರನ್ನೂ ಶತ್ರುಪಕ್ಷದ ಹಡಗುಗಳನ್ನೂ ಕೊಳ್ಳೆ ಹೊಡೆಯುವ ಅನುಮತಿ ಪತ್ರವನ್ನು ಅವನಿಗೆ ನೀಡಲಾಯಿತು.

ಕಪ್ತಾನ ಕಿಡ್ ಜೈಲು, ಜೂಜು ಮನೆ ಹಾಗೂ ವೇಶ್ಯಾಲಯಗಳಿಂದ ದುಷ್ಟ ಹಾಗೂ ಪೋಲಿ ಯುವಕರನ್ನು ಕರೆತಂದು ತನ್ನ ಹಡಗಿಗೆ ಸೇರಿಸಿಕೊಂಡು ಕೊಳ್ಳೆ ಹೊಡೆಯಲು ಹೊರಬಿದ್ದ.

ಮುಂದಿನ ಕೆಲ ತಿಂಗಳಲ್ಲಿ ಕಪ್ತಾನ ಕಿಡ್ ಒಂದು ಫ್ರೆಂಚ್ ಹಾಗೂ ನಾಲ್ಕು ಸ್ಪೇನಿಶ್ ಹಡಗುಗಳನ್ನು ಹಿಡಿದು ಅವುಗಳಲ್ಲಿದ್ದ ಐದು ಲಕ್ಷ ಡಾಲರಿಗೂ ಹೆಚ್ಚು ಬೆಲೆಯ ಬಂಗಾರದ ಪ್ಲೇಟುಗಳನ್ನೂ ಬೆಳ್ಳಿಯ ನಾಣ್ಯಗಳನ್ನೂ ವಶಪಡಿಸಿಕೊಂಡ.

ಆ ಬಳಿಕ ಆತ ಭೂಮಧ್ಯ ಸಾಗರದಲ್ಲೇ ಆಫ್ರಿಕದತ್ತ ಸಾಗಿದ. ಹಲವು ವಾರಗಳ ಪ್ರಯಾಣದ ನಂತರ, ದೂರದಲ್ಲೊಂದು ಹಡಗು ಕಾಣಿಸಿದಾಗ ಎಲ್ಲ ನಾವಿಕರೂ ಅದನ್ನು ಕೊಳ್ಳೆ ಹೊಡೆಯಲು ಮುಂದಾದರು.

ಹತ್ತಿರ ಬಂದಾಗ ಅದು ಇಂಗ್ಲೆಂಡಿನ ಹಡಗೆಂದು ತಿಳಿಯಿತು. ಅದನ್ನು ಕೊಳ್ಳೆ ಹೊಡೆಯುವಂತೆ ಇಲ್ಲವಷ್ಟೇ? ಆದರೆ 'ಎಡ್ವೆಂಚರ್ ಗೇಲೀ'ಯ ಬಿಲಮೂರ್ ಎಂಬ ತೋಪು ಹೊಡೆಯುವಾತ ಆ ಹಡಗಿನಲ್ಲಿರುವ ಗ್ರೀಕ್ ಪ್ರವಾಸಿಗನನ್ನಾದರೂ ಕೊಳ್ಳೆ ಹೊಡೆಯುವೆನೆಂದು ಪಟ್ಟು ಹಿಡಿದ.

ಕಪ್ತಾನ ಕಿಡ್ ಅವನ ಉದ್ಧಟತನದಿಂದ ಸಿಡಿಮಿಡಿಗೊಂಡ. ಅವನು ಹತ್ತಿರವೇ ಇದ್ದ ಕಬ್ಬಿಣದ ಬಕೆಟ್ಟನ್ನೆತ್ತಿ ಬಿಲಮೂರ್‌ನಿಗೆ ಹೊಡೆದಾಗ ತಲೆಯೊಡೆದು ಅವನು ಅಲ್ಲೇ ಕುಸಿದು ಬಿದ್ದ. ಕಪ್ತಾನ ಕಿಡ್ ಅಡಗಿಸಿಟ್ಟ ಅಪಾರ ಸಂಪತ್ತು

ಇತರರಿಗಷ್ಟೇ ಅಲ್ಲ- ಸ್ವತಃ ಕಿಡ್‌ನಿಗೂ ಉಪಯೋಗಕ್ಕೆ ಬರದೆ ಹೋಗಲಿ-ಎಂದು ಆತ ಸಾಯುವ ವೇಳೆ ಶಾಪವಿತ್ತ. "ಆ ಸಂಪತ್ತಿಗೆ ಕೈ ಹಚ್ಚುವವರೂ ಸಾವಿಗೀಡಾಗಲಿ"- ಎಂದೂ ಸೇರಿಸಿದ.

ಬಲಮೂರನ ಸಾವಿನ ಬಳಿಕ ನಾವಿಕರು ಶಾಂತರಾದರು. ಕಪ್ತಾನ ಕಿಡ್‌ನ ಅದೃಷ್ಟ ಮತ್ತೆ ಖುಲಾಯಿಸಿತು. ಕೆಲಸಮಯದ ಬಳಿಕ ೧೬೯೮ರ ಫೆಬ್ರುವರಿಯಲ್ಲಿ ಕೊಚ್ಚಿಯಿಂದ ಸುಮಾರು ೧೦ ಮೈಲು ದೂರು ಅರಬೀ ಸಮುದ್ರದಲ್ಲಿ ಕಪ್ತಾನ ಕಿಡ್‌ನಿಗೆ 'ಬೇದಾಗ್ ಮರ್ಚೆಂಟ್' ಎಂಬ ವಿಶಾಲವಾದೊಂದು ಹಡಗು ಸಿಕ್ಕಿತು. ಅದಕ್ಕೆ ೧೦ ತೋಪುಗಳು ಜೋಡಿಸಲ್ಪಟ್ಟಿದ್ದವು. ಹಡಗಿನ ಮೇಲೆ ಹಿಂದುಸ್ತಾನದ ಮೊಗಲ್ ಬಾದಶಹ ಔರಂಗಜೇಬನ ಧ್ವಜ ಹಾರುತ್ತಿತ್ತು.

ಕಪ್ತಾನ ಕಿಡ್ ಹಡಗನ್ನು ತಡೆದು ಅದರ ಕಾಗದ ಪತ್ರಗಳನ್ನು ಪರೀಕ್ಷಿಸುವಂತೆ ನಟಿಸಿದ. ಆ ಕಾಗದಗಳಲ್ಲಿ ಫ್ರೆಂಚ್ ಸಂರಕ್ಷಣೆಗೆ ಸಂಬಂಧಿಸಿದ ಪತ್ರನೋಡಿ ಆವನಿಗೆ ಆನಂದವಾಯಿತು. ಫ್ರಾನ್ಸ್ ಮತ್ತು ಬ್ರಿಟನ್ ಪರಸ್ಪರ ಶತ್ರುಗಳಷ್ಟೇ!

"ಒಳ್ಳೇದು.... ಫ್ರೆಂಚರ ಮಿತ್ರರೆ.... ಮಹಾಧಿಪತಿ ಮೂರನೇ ವಿಲಿಯಮ್ ದೊರೆಯ ಹೆಸರಿನಲ್ಲಿ ನಾನು ಇಡೀ ಹಡಗನ್ನು ಜಪ್ತುಮಾಡುತ್ತಿದ್ದೇನೆ. ಯಾರಾದರೂ ಅಡ್ಡಿಪಡಿಸಿದರೆ ಇಡೀ ಹಡಗನ್ನೇ ಮುಳುಗಿಸಿ ಬಿಡಲಾಗುವುದು" ಎಂದನವನು.

ಮುಸಲ್ಮಾನ ಕಪ್ತಾನ ಏನೂ ಮಾಡದಾದ. ಈ ಹಡಗಿನಲ್ಲಿ ಕಪ್ತಾನ ಕಿಡ್‌ನಿಗೆ ಅಪಾರ ಸಂಪತ್ತು ದೊರೆಯಿತು. ಹಡಗಿನಲ್ಲಿ ವಜ್ರವೈಡೂರ್ಯ ಹಾಗೂ ಬೆಳ್ಳಿಯ ಗಟ್ಟಿಗಳಿದ್ದವು. 'ಬೇದಾಗ್ ಮರ್ಚೆಂಟ್' ತುಂಬ ಸುಂದರವಾದ ಹಡಗು. ಕಿಡ್ ತನ್ನ ಹಳೆಯ 'ಎಡ್ವೆಂಚರ್ ಗೇಲೀ' ಹಡಗನ್ನು ತೊರೆದು 'ಬೇದಾಗ್ ಮರ್ಚೆಂಟ್'ಅನ್ನೇ ಉಪಯೋಗಿಸತೊಡಗಿದ.

ಇದೇ ರೀತಿಯ ಮೋಸದಿಂದ ಆತ ಇನ್ನೂ ಹಲವು ಹಡಗುಗಳನ್ನು ಕೊಳ್ಳೆಹೊಡೆದ. ಔರಂಗಜೇಬ್ ಸಿಟ್ಟಿಗೆದ್ದು ಮೂರನೇ ವಿಲಿಯಮ್ ದೊರೆಗೊಂದು ಖಾರವಾದ ಪತ್ರ ಬರೆದ. ಅದರಲ್ಲಿ ಕಿಡ್ ಕೊಳ್ಳೆ ಹೊಡೆದ ಎಲ್ಲ ಸಂಪತ್ತಿನ ವಿವರವೂ ಇತ್ತು. ಇಂದಿನ ಬೆಲೆಯಂತೆ ಅದು ಕೋಟ್ಯಂತರ ರೂಪಾಯಿ ಆಗುತ್ತಿತ್ತು.

ಕಿಡ್ ಸೌಭಾಗ್ಯದ ಶಿಖರಕ್ಕೇರಿ, ಅಲ್ಲಿಂದ ಅಷ್ಟೇ ರಭಸವಾಗಿ ಕೆಳಗುರುಳತೊಡಗಿದ. ಬಹಳಷ್ಟು ಕಾಲ ಕಳೆದರೂ ಕಿಡ್ ಮರಳದಾದಾಗ, ಚಿಂತಿತನಾದ ಮೂರನೇ ವಿಲಿಯಮ್ ಅವನ ಶೋಧಕ್ಕೆ ನೌಕಾಪಡೆಯ ಹಡಗುಗಳನ್ನು ಕಳುಹಿಸಿದ. ಅವು ಇಡೀ ಭೂಮಧ್ಯ ಸಾಗರವನ್ನು ಹುಡುಕುತ್ತಿದ್ದವು. ಬಿರುಗಾಳಿಯ ಹೊಡೆತ ಹಾಗೂ ದುರಸ್ತಿಯ ಅಭಾವದಿಂದಾಗಿ 'ಬೇದಾಗ್ ಮರ್ಚೆಂಟ್'ದ ಸ್ಥಿತಿ ಹದಗೆಡುತ್ತ ಹೋಯಿತು. ಅದರ ಕೂವೆಮರ ಒಡೆಯಿತು. ಹಡಗಿನಲ್ಲಿ ಆಹಾರ ಸಾಮಗ್ರಿ ಹಾಗೂ ಕುಡಿಯುವ ನೀರು ಮುಗಿದುಹೋಗಿತ್ತು. ನಾವಿಕರ ಉತ್ಸಾಹವೂ ಬರಿದಾಗಿತ್ತು. 'ಬೇದಾಗ್ ಮರ್ಚೆಂಟ್'ದಲ್ಲಿ ಕೋಟ್ಯಂತರ ರೂಪಾಯಿ ಬೆಲೆ ಬಾಳುವ ರೇಶ್ಮೆ ಬಟ್ಟೆ, ಬೆಳ್ಳಿ, ಬಂಗಾರ, ವಜ್ರ ವೈಢೂರ್ಯ ಹಾಗೂ ಅತ್ತರ್ ತುಂಬಿಕೊಂಡಿದ್ದರೂ ರಾಜನ ಭಯದಿಂದಾಗಿ ಯಾರೂ ಅವರಿಗೆ ಆಶ್ರಯ ಕೊಡಲೊಪ್ಪಲಿಲ್ಲ. ಹಸಿವು ನೀರಡಿಕೆಯಿಂದ ರೊಚ್ಚಿಗೆದ್ದ ನಾವಿಕರು ಕಪ್ತಾನ್ ಕಿಡ್‌ನನ್ನೇ ಮುಗಿಸಿಬಿಡುವ ಸಂಚು ಹೂಡಿದರು.

ಸಂಕಟಗಳಿಗೀಡಾದ ಕಪ್ತಾನ ಕಿಡ್ ಸುಸ್ತಾಗಿದ್ದರೂ ಗಾಬರಿಯಾಗಲಿಲ್ಲ. ಅವನ ಮಿದುಳು ಹಿಂದಿನಂತೆಯೇ ಕೆಲಸ ಮಾಡುತ್ತಿತ್ತು. ನಿರಂತರ ಓಡುತ್ತಿದ್ದ ಬಳಿಕ ಆತ ಮಧ್ಯ ಅಮೇರಿಕದ 'ಹೀಗೆ' ನದೀ ಮುಖಜ ಪ್ರದೇಶದಲ್ಲಿ ಹಡಗುಗಳ್ಳರ ಅಡಗುದಾಣದಲ್ಲಿ ಆಶ್ರಯಪಡೆದ. ಅಲ್ಲಿ ಅವನು 'ಸೆಂಟ್ ಸ್ಥನೀ' ಎಂಬೊಂದು ಪುಟ್ಟ ಹಡಗನ್ನು ಕೊಂಡುಕೊಂಡು ತನ್ನೆಲ್ಲ ಸಂಪತ್ತನ್ನೂ ಅದರಲ್ಲಿ ತುಂಬಿಸಿದ; ಮತ್ತು ಕೆಲವೇ ಮಂದಿ ನಾವಿಕರ ಜತೆ ನ್ಯೂಯಾರ್ಕಿನತ್ತ ಸಾಗಿದ.

ದಾರಿಯಲ್ಲಿ ಆತ 'ನ್ಯೂಜರ್ಸಿ' ಮತ್ತು 'ಡೇಲವೇಯರ್'ದ ಅಮೇರಿಕನ್ ತೀರದಲ್ಲಿ ಹಲವು ತಾಸು ತಂಗಿದ. ಒಂದು ಪುಟ್ಟ ದೋಣಿ'ಯಲ್ಲಿ ಆತ ಬೊಕ್ಕಸದ ಪೆಟ್ಟಿಗೆಗಳೊಂದಿಗೆ ದಡಕ್ಕೆ ಹಲವು ಸಲ ಹೋಗಿ ಬಂದ. ಪ್ರತಿ ಸಲವೂ ಆತ ಒಬ್ಬ ನಾವಿಕನನ್ನು ಜತೆಗೆ ಕರೆದೊಯ್ಯುತ್ತಿದ್ದ. ಮರಳುವಾಗ ಆ ನಾವಿಕ ಅವನ ಜತೆಗಿರುತ್ತಿರಲಿಲ್ಲ. ಇತರ ನಾವಿಕರು ಕೇಳಿದರೆ, ಆತ ಅದೆಲ್ಲಿಗೋ ಓಡಿಹೋ

ದನೆಂದು ಸುಳ್ಳು ಹೇಳುತ್ತಿದ್ದ. ಕಪ್ತಾನ ಕಿಡ್ ಪ್ರತಿಸಲವೂ ಒಬ್ಬೊಬ್ಬ ನಾವಿಕನನ್ನು ಗುಂಡಿಟ್ಟು ಕೊಲ್ಲುತ್ತಿದ್ದ. ತಾನು ಅಡಗಿಸಿಟ್ಟ ಖಜಾನೆಯ ಬಗೆಗೆ ಅವರು ಇತರರಿಗೆ ಹೇಳಬಾರದೆಂದೇ ಈ ಕ್ರೂರ ಶಿಕ್ಷೆ ವಿಧಿಸುತ್ತಿದ್ದ. ಈ ರೀತಿ ಎಲ್ಲ ಸಂಪತ್ತನ್ನೂ ಅಡಗಿಸಿಟ್ಟು ಆತ ಬೆಲಮೌಂಟ್‌ನನ್ನು ಭೇಟಿಯಾಗಲು ಬಂದ.

ಬೆಲಮೌಂಟ್ ಬಹುಕಾಲದಿಂದ ಕಿಡ್‌ನ ಹಾದಿ ಕಾಯುತ್ತಿದ್ದ. ಕಿಡ್ ಕೊಳ್ಳೆಗಾರನೆಂದು ಘೋಷಿಸಿ, ಅವನಿಗೆ ಗಲ್ಲಿನ ಶಿಕ್ಷೆ ವಿಧಿಸಬೇಕೆಂದೂ ಕೊಳ್ಳೆಯ ಎಲ್ಲ ಸಂಪತ್ತನ್ನು ತಾನು ಹಾಗೂ ಮಹಾರಾಜರು ಹಂಚಿಕೊಳ್ಳಬೇಕೆಂದೂ ಆತ ಲೆಕ್ಕ ಹಾಕಿದ್ದ. ಸಿಂಡಿಕೇಟಿನ ಸದಸ್ಯರಿಗೆ ಒಂದಿಷ್ಟು ಹಣಕೊಟ್ಟು ಅವರ ಬಾಯಿ ಮುಚ್ಚಿಸುವುದೇನೂ ಕಷ್ಟದ ಕೆಲಸವಲ್ಲ.

ಕೊಳ್ಳೆ ತಾನಾಗಿಯೇ ಬಂದುದನ್ನು ಕಂಡ ಬೆಲಮೌಂಟ್ ಕಿಡ್‌ನ ಭೇಟಿಗೆ ಅಷ್ಟೇನೂ ಅವಸರ ತೋರಲಿಲ್ಲ. ಕಿಡ್ ಮೂರುದಿನ ಅವನ ಭೇಟಿಗಾಗಿ ಕಾಯಬೇಕಾಯಿತು. ನಾಲ್ಕನೇ ದಿನ ಅವನನ್ನು ಅರಮನೆಗೆ ಕರೆಯಿಸಿದಾಗ ಅಲ್ಲಿ ನ್ಯಾಯಾಲಯದ ದೃಶ್ಯ ಕಾಣಿಸಿತು. ಬೆಲಮೌಂಟ್ ಸರಕಾರೀ ನಿಲುವಂಗಿ ಧರಿಸಿ, ಎತ್ತರವಾದ ಕುರ್ಚಿಯ ಮೇಲೆ ವಿರಾಜಿಸುತ್ತಿದ್ದ. ಇಕ್ಕೆಲಗಳಲ್ಲೂ ಅವನ ಕೌನ್ಸಿಲ್ ಸದಸ್ಯರಿದ್ದರು. ಬೆಲಮೌಂಟ್ ನೇರವಾಗಿ ಕಿಡ್‌ನೊಡನೆ ಕೊಳ್ಳೆಯ ಎಲ್ಲ ಸಂಪತ್ತಿನ ವಿವರ ಕೇಳಿದ. ಕಿಡ್ ಮಹಾ ಚತುರ. ಬಹಳಷ್ಟು ಒತ್ತಡ ಹೇರಿದರೂ ತಾನು ಬರೇ ೪೦ ಸಾವಿರ ಪೌಂಡ್ ಸುಲಿಗೆ ಮಾಡಿದುದಾಗಿ ಹೇಳಿದ.

ಒಂದು ದಿನ ಸಂಜೆ ಕತ್ತಲಾಗುತ್ತಲೇ ಕಿಡ್‌ನ ಹೊಟೇಲ್ ಕೋಣೆಯ ಹೊರಗೆ ಸದ್ದಾಯಿತು. ಬಾಗಿಲು ತೆರೆದಾಗ ಬೋಸ್ಟನ್ನಿನ ಶೆರೀಫ್ ಮುಂದೆ ಬಂದು ಅವನನ್ನು ಬಂಧಿಸಿದ. ವಾರಂಟಿಗೆ ಸ್ವತಃ ಬೆಲಮೌಂಟ್ ಸಹಿಮಾಡಿರುವುದನ್ನು ಕಂಡು ಕಿಡ್ ಸ್ತಬ್ಧನಾದ. ಅವನ ಬಳಿಯಿದ್ದ ಸಾಮಾನುಗಳ ಜತೆ ಸರಕಾರೀ ಅನುಮತಿ ಪತ್ರವನ್ನೂ ಜಪ್ತುಮಾಡಲಾಯಿತು.

ಆ ಬಳಿಕ, ಆರು ತಿಂಗಳ ತನಕ ಅವನ ಮೇಲೆ ಯಾವೊಂದು ಆರೋಪವನ್ನು ಹೊರಿಸದೆ ಅವನನ್ನು ಬೋಸ್ಟನ್ ಜೈಲಿನಲ್ಲಿ ಕೊಳೆ ಹಾಕಲಾಯಿತು. ಈ ನಡುವೆ ಲಂಡನ್ನಿನ 'ಹೌಸ್ ಆಫ್ ಕಾಮನ್ಸ್'ದಲ್ಲಿ ಸದಸ್ಯರು ಕಿಡ್‌ನನ್ನು ಸದನೆದುರು ಹಾಜರುಪಡಿಸಬೇಕೆಂದು ಒತ್ತಾಯಿಸುತ್ತಿದ್ದರು. ಈ ಸದಸ್ಯರಿಗೆ ಬಹುಶಃ ಈ ಪ್ರಕರಣದಲ್ಲಿ ಸಿಂಡಿಕೇಟ್ ಸದಸ್ಯರ ಹಾಗೂ ದೊರೆಯ ಕೈವಾಡವಿದೆಯೆಂಬ ಅಸ್ಪಷ್ಟ ಸುಳಿವು ಸಿಕ್ಕಿರಬೇಕು.

ಆ ರೀತಿ ಕಿಡ್ 'ಸಭೆ'ಗೆ ಬಂದಿದ್ದರೆ ಎಲ್ಲ ರಹಸ್ಯಗಳೂ ಬಯಲಾಗುವ ಭಯವಿತ್ತು. ಎಂತಲೇ ಆಗಿನ ಜಾಣ ಗೃಹಮಂತ್ರಿ ಏನಾದರೂ ನೆಪವೊಡ್ಡಿ, ಅದನ್ನು ತಪ್ಪಿಸಿಕೊಳ್ಳುತ್ತಿದ್ದ. ಸದ್ಯದಲ್ಲೇ ಕರೆಯಿಸುವುದಾಗಿ ಸಭೆಗೆ ಆಶ್ವಾಸನೆ ನೀಡುತ್ತ ಕಾಲ ತಳ್ಳುತ್ತಿದ್ದ. 'ಹೌಸ್ ಆಫ್ ಕಾಮನ್ಸ್'ದ ಅಧಿವೇಶನ ಮುಗಿದ ಮೇಲೆಯೇ ಕಿಡ್‌ನನ್ನು ಲಂಡನ್ನಿಗೆ



" 'ಜನಸಂಖ್ಯೆ ದಿನಾಚರಣೆ'ಯನ್ನು ಯಾಕೆ ಆಚರಿಸುತ್ತಾರೆ?"



"ಭಾರತ ಜನಸಂಖ್ಯೆಯಲ್ಲಿ ಇನ್ನೂ ಹೆಚ್ಚಿನ ಪ್ರಗತಿ ಸಾಧಿಸಲಿ ಅಂತ...."

ಕರೆತರಲಾಯಿತು. ಕೆಲದಿನಗಳ ಬಳಿಕ ಅವನನ್ನು 'ಓಲ್ಡ್ ಬೇಲೀ' ನ್ಯಾಯಾಲಯದಲ್ಲಿ ಹಾಜರುಪಡಿಸಲಾಯಿತು. ಕೇಸು ಸುಮಾರು ಒಂದು ವರ್ಷ ನಡೆಯಿತು. ಬಿಲಮೂರ್ ಹಾಗೂ ಇತರ ನಾವಿಕರ ಕೊಲೆ, ರಾಜಾಜ್ಞೆಯಿಲ್ಲದೆ ಅಪಾರ ಸಂಪತ್ತಿನ ಸುಲಿಗೆ ಮೊದಲಾದ ಅಪರಾಧಗಳಿಗಾಗಿ ಕಿಡ್‌ನಿಗೆ ಮರಣದಂಡನೆ ವಿಧಿಸಲಾಯಿತು.

ಬಾದಶಹನನ್ನು ಸಾಕ್ಷಿಗಾಗಿ ನ್ಯಾಯಾಲಯಕ್ಕೆ ಕರೆಯಿಸುವ ಪ್ರಶ್ನೆಯೇ ಇಲ್ಲವಷ್ಟೇ. ಬೆಲಮೌಂಟ್ ಕೂಡ ಹಾಜರಾಗಲಿಲ್ಲ. ಕಿಡ್‌ನ ಬಳಿಯಿದ್ದ ಯಾವುದೇ ಸರಕಾರೀ 'ಅನುಮತಿ ಪತ್ರ'ವನ್ನೂ ತಾನು ವಶಪಡಿಸಿಕೊಂಡಿಲ್ಲವೆಂದು ಅವನು ತನ್ನ ಲಿಖಿತ ಹೇಳಿಕೆಯಲ್ಲಿ ನುಡಿದ. ಇದೇ ರೀತಿ ಗೃಹಮಂತ್ರಿಯೂ ನುಣುಚಿಕೊಂಡ. ಸಿಂಡಿಕೇಟಿನ ಎಲ್ಲ ಸದಸ್ಯರೂ ಕಿಡ್‌ನ ಸಂಪರ್ಕ ತಮಗಿಲ್ಲವೆಂದೇ ಕೋರ್ಟಿನಲ್ಲಿ ಹೇಳಿಕೆಯಿತ್ತರು.

೨೩-೫-೧೭೦೧ ರಂದು ಕಿಡ್‌ನನ್ನು ಲಂಡನ್ನಿನ ಥೇಮ್ಸ್ ನದೀ ತೀರದಲ್ಲಿ ಗಲ್ಲಿಗೇರಿಸಲಾಯಿತು. ಗಲ್ಲಿಗೇರುವ ಹಿಂದಿನ ದಿನ ಒಬ್ಬ ಏಜೆಂಟ್ ಜೈಲಿನಲ್ಲಿ ಕಿಡ್‌ನನ್ನು ಭೇಟಿಯಾದ. ಇಡೀ ಖಜಾನೆ ಎಲ್ಲಿದೆಯೆಂದು ಹೇಳಿದರೆ ಬಾದಶಹರು ತಮ್ಮ ವಿಶೇಷಾಧಿಕಾರವನ್ನು ಬಳಸಿ ಮರಣದಂಡನೆಯನ್ನು ರದ್ದುಗೊಳಿಸುವರೆಂದು ನುಡಿದನವನು. ಆದರೆ ಕಿಡ್ ಕೊನೆಯವರೆಗೂ ೪೦ ಸಾವಿರ ಪೌಂಡ್ ಮೊತ್ತವನ್ನು ಮಾತ್ರ ಒಪ್ಪಿಕೊಂಡ.

ಕಿಡ್‌ನ ಮರಣಾನಂತರ ಮೂರನೇ ವಿಲಿಯಮ್ ದೊರೆ ಆ ಖಜಾನೆಯ ಶೋಧಕ್ಕೆ ಹಡಗುಪಡೆಯನ್ನೇ ಕಳುಹಿಸಿದ. ಅದು ವಿಫಲವಾದುದಷ್ಟೇ ಅಲ್ಲ, ಬಿರುಗಾಳಿಗೆ ಸಿಕ್ಕು ನಾಶವಾಯಿತು. ಅನಂತರವೂ ಎಷ್ಟೋ ಸಾಹಸಿಗಳು ಪತ್ತೆ ಕಾರ್ಯವನ್ನು ಮುಂದುವರಿಸಿದರು. ಅವರೆಲ್ಲರೂ ಒಂದಿಲ್ಲೊಂದು ರೀತಿಯ ದೈವೀಕೋಪಕ್ಕೆ ಈಡಾದರು!

ಕಪ್ತಾನ ಕಿಡ್‌ನ ಬಹುದೊಡ್ಡ ಖಜಾನೆ ಎಲ್ಲೋ ಸುರಕ್ಷಿತವಾಗಿದೆಯೆಂದು ಅಮೆರಿಕೆಯ ಹಳೆಯ ಜನ ಈಗಲೂ ನಂಬಿದ್ದಾರೆ. ಆದರೆ ಬಿಲಮೂರ್‌ನ ಶಾಪದಿಂದಾಗಿ, ಅದು ಯಾರ ಕೈಗೂ ಸಿಕ್ಕಿಲ್ಲ. ಬಹುಶಃ ಮುಂದೆಯೂ ಸಿಗುವಂತಿಲ್ಲ! ●

# ನಮ್ಮ ಊರಿನ ಪುಣ್ಯ ಜೀವಿಗಳು

"ನಿಮ್ಮ ಹೆಸರು ಅಮೃತಶಿಲೆಯ ಮೇಲೆ ಕೆತ್ತುವಂತಾಗಬಾರದು.ಅಚ್ಚಳಿಯದ ಸವಿನೆನಪಾಗಿ ಹೃದಯಗಳ ಮೇಲೆ ಒತ್ತುವಂತಾಗಬೇಕು," ಎಂದ ಚಾರ್ಲ್ಸ್ ಎಚ್. ಸ್ಪರ್ಜಿಯನ್

ಹೀಗೆ ಹೃದಯಗಳ ಮೇಲೆ ಒತ್ತುವಂತಾಗಿ

## ಮಹಾದಾನಿ

ಅಚ್ಚಳಿಯದ ಸವಿನೆನಪಾಗಿ ಉಳಿದ ಒಬ್ಬ ಪುಣ್ಯಜೀವಿ ಇದ್ದರು. ಈಗ್ಗೆ ಸುಮಾರು ೧೨೫ ವರ್ಷಗಳ ಹಿಂದೆ ಹುಟ್ಟಿ, ಸಮಸುಮ ೫೦ ವರ್ಷಗಳ ಹಿಂದೆ ತೀರಿಕೊಂಡವರು ಅವರು. ಕೀಲಾರು ರಾಮಚಂದ್ರಯ್ಯನವರು.

ಈಗಿನ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲೂಕಿನ ಸಂಪಾಜೆ ಗ್ರಾಮ, ಕೊಡಗು ಜಿಲ್ಲೆಯ ಮಡಿಕೇರಿ ತಾಲೂಕಿನ ಸಂಪಾಜೆ ಗ್ರಾಮ ಹೀಗೆ ಗಡಿ ಸಂಧಿಸುವ ಎರಡೂ ಗ್ರಾಮಗಳಲ್ಲಿಯೂ ಸ್ಥಿರಾಸ್ತಿಯನ್ನು ಹೊಂದಿ, ಆರ್ಥಿಕವಾಗಿಯೂ ನಿಜವಾದ ಅರ್ಥದಲ್ಲಿಯೂ ಶ್ರೀಮಂತರೆನ್ನಿಸಿಕೊಂಡು ಹೃದಯವಂತರಾಗಿದ್ದವರು ಕೀಲಾರು' ರಾಮಚಂದ್ರಯ್ಯ.

ಬಾಲ್ಯದಲ್ಲಿಯೇ ಹೆತ್ತವರನ್ನು ಕಳೆದುಕೊಂಡು, ಸೋದರಮಾವ ಮಂಗಲ್ಪಾಡಿ ಕೃಷ್ಣಯ್ಯನವರ ಸುಪರ್ದಿಯಲ್ಲಿ ಇವರು ಬೆಳೆದವರು. (ಯಕ್ಷಗಾನ

ಅರ್ಥಗಾರಿಕೆಯಲ್ಲಿ ಖ್ಯಾತಿವಂತರಾದ, ಶ್ರೀರಾಮ ಚರಿತಂ, ಶ್ರೀಮನ್ ಮಹಾಭಾರತ, ಯಕ್ಷಗಾನ ವಿವೇಚನೆ ಇತ್ಯಾದಿ ಗ್ರಂಥಗಳನ್ನು ರಚಿಸಿದ ಪ್ರಸಿದ್ಧ ದೇರಾಜೆ ಜೆ.ಎಂ.ಸೀತಾರಾಮಯ್ಯನವರು ಇದೇ ಕೃಷ್ಣಯ್ಯನವರ ಮಗ.) ಪ್ರಾಯ ಪ್ರಬುದ್ಧರಾದಾಗ ವಹಿವಾಟುಗಳನ್ನು ತಾವೇ ವಹಿಸಿಕೊಂಡರು.

ಆ ಸರಹದ್ದಿನಲ್ಲಿ ಅಂದಿನ ಆ ಕಾಲದಲ್ಲಿ ಅನುಕೂಲವಂತರಾದ ಬ್ರಾಹ್ಮಣರ ಮನೆ ಕೀಲಾರು ಮಾತ್ರವೆ. ಸಾರಿಗೆ ವ್ಯವಸ್ಥೆಯ ಅಭಾವದ ಆ ಕಾಲದಲ್ಲಿ ದಾರಿಹೋಕರ ಸಂಖ್ಯೆ ಅಪಾರ. ಯಾರೇ ಬರಲಿ, ಜಾತಿಭೇದವಿಲ್ಲದೆ ಬಂದವರಿಗೆಲ್ಲ ಊಟವಿಕ್ಕಿದ ಮನೆ ಅದು. ಎಷ್ಟೇ ಹೊತ್ತಿಗೆ ಬಂದರೂ ಊಟವಾಗಿದೆಯೆ ಎಂಬುದು ಮೊದಲ ಪ್ರಶ್ನೆ. ಸಂಪಾಜೆಯ ಸುತ್ತಮುತ್ತಲಿನ ಬೆಟ್ಟದ ಸೆರಗಲ್ಲಿ ಆರ್ಥಿಕ ಬೆಳೆಯಾದ ಏಲಕ್ಕಿಯನ್ನು ಬೆಳೆದ ದಕ್ಷಿಣ ಕನ್ನಡದ ಬ್ರಾಹ್ಮಣ ಸಮುದಾಯಕ್ಕೆ

ಆ ಕಾಲದಲ್ಲಿ ನಿರ್ಗತಿಕ ಬ್ರಾಹ್ಮಣ ಮಕ್ಕಳಿಗೆ ಉಪನಯನ ಮಾಡಿಸುವುದು, ಜಾತಿ ಭೇದವಿಲ್ಲದೆ ಮಗಳ ಮದುವೆ ಮಾಡಿಕೊಡಲು ಅನುಕೂಲವಿಲ್ಲವೆಂದು ಬರುವ ಕನ್ಯಾ ಪಿತೃಗಳಿಗೆ ತನ್ನ ಮನೆಯಲ್ಲಿಯೇ ತನ್ನ ಖರ್ಚಿನಲ್ಲಿ ಮದುವೆ ಮಾಡಿಸಿ ಕಳಿಸಿಕೊಡುವುದು, ಗತಿಯಿಲ್ಲದೆ ಸತ್ತವರ ಉತ್ತರಾಧಿಕಾರಿಗಳಾರೆಂದು ಕಂಡು ಹಿಡಿದು ಕರ್ಮಾಂತರ ಮಾಡಿಸುವುದು ಅಯ್ಯನವರ ಸಮಾಜ ಸೇವೆಯ ಒಂದು ಕ್ರಮ. ಅಂದಿನ ಕಾಲಕ್ಕೆ ಇದೆಲ್ಲಾ ಒಂದು ಪುಣ್ಯ ಕೆಲಸ ಎಂಬ ನಂಬಿಕೆಯಿತ್ತು.

ಮಲೇರಿಯದ ಕೊಂಪೆಯಾಗಿದ್ದ ಸಂಪಾಜೆಗೆ ಆಸ್ಪತ್ರೆ ತರಿಸುವಲ್ಲಿ (ವಾರಕ್ಕೊಮ್ಮೆ ಡಾಕ್ಟರರ ಸಂದರ್ಶನ) ಶಾಲೆಯ ಕಟ್ಟಡ ಕಟ್ಟಿಸಿ ವಿದ್ಯಾ ಪ್ರಸಾರದ ಕಾಯಕದಲ್ಲಿ ಸಹಕಾರೀ ಸಂಘಗಳನ್ನು ನಿರ್ಮಿಸುವಲ್ಲಿ, ಊರಿನ ಅಭಿವೃದ್ಧಿ ಕಾರ್ಯದಲ್ಲಿ ತನ್ನನ್ನು ತಾನೇ ತೊಡಗಿಸಿಕೊಂಡವರು, ಅಯ್ಯ. ಸತ್ಯಾಗ್ರ

# ಕೀಲಾರು ರಾಮಚಂದ್ರಯ್ಯನವರು

ಇದು ತಂಗುದಾಣ. ಅವರ ಅಕ್ಕಿಯ ದಾಸ್ತಾನು ಏಲಕ್ಕಿ ಬೆಳೆಯನ್ನು ತಂದು ಜೋಡಣೆ ಮಾಡುವ ಉಗ್ರಾಣ ಎಲ್ಲವೂ ಕೀಲಾರು ಮನೆಯ ವಿಶಾಲವಾದ ಕೊಟ್ಟಿಗೆ. ಕಾಸರಗೋಡು ಕಡೆಯಿಂದ ಬಂದು ಕಾಡು, ಕಾಡಿನ ಬಿದಿರು, ಕಡಿಯುವ ಕಂಟ್ರಾಕ್ಟಿನ ಮಾಪಿಳ್ಳೆಯವರಿಗೆ, ಅವರ ಅನುಕೂಲಕ್ಕೆ ದಿಮ್ಮಿಗಳನ್ನು ನೂಕಲು ತರುವ ಸಾಕಾನೆಗಳ ಹಿಂಡಿಗೆ ಆಶ್ರಯ ಕೀಲಾರು. ಸಮೀಪದಲ್ಲಿ ಹರಿಯುವ ಹೊಳೆ ಪಯಸ್ವಿನಿಯ ಮೂಲ ಆನೆಗಳಿಗೆ ಅನುಕೂಲವಾಗಿತ್ತು. ಇಂದಿನ "ಯೇನಪೆಪೋಯ" ಎಂಬ ಮಂಗಳೂರಿನ ಬೃಹತ್ ಉದ್ಯಮದ ಆದಿಪುರುಷ ವೈ.ಎಂ.ಕೆ. ಅಂದಿನ ಕಿರಿಯ ಕಂಟ್ರಾಕ್ಟುದಾರನಾಗಿ ಮೊದಲು ಬಂದು ತಳವೂರಿ ಬೆಳೆದದ್ದು ಕೀಲಾರಿನಲ್ಲಿ. 'ಕೀಲಾರು ಅಯ್ಯ' ಎಂದೇ ಅವರ ಪ್ರಸಿದ್ಧರಾಗಿದ್ದರು ರಾಮಚಂದ್ರಯ್ಯ.

ಹಮಾಡಿ ಕಾರಾಗೃಹವಾಸಕ್ಕೆ ಹೋಗದಿದ್ದರೂ ಸದಾ ಖಾದೀಧಾರಿಯಾಗಿ, ಹೊಸ ದೃಷ್ಟಿಕೋನದ ಹರಿಕಾರನಾಗಿ ಈ ಹಳ್ಳಿಯ ಕೊಂಪೆಯನ್ನು ಬೆಳಗಿದವರು. ಮೌಢ್ಯಮೀರಿ ನಿಂತವರು ಈ ಅಯ್ಯ. ಸಹಕಾರಿ ಪಿತಾಮಹ ಮುಳ್ಳಹಳ್ಳಿ ಶಿವರಾಯರು, ಮದರಾಸಿನ ಮಾಜಿ ಮಂತ್ರಿ ಕೆ.ಆರ್. ಕಾರಂತರು, ಜ್ಞಾನಪೀಠ ಪ್ರಶಸ್ತಿ ವಿಜೇತ ಕೋಟ ಶಿವರಾಮ ಕಾರಂತರು, ಮಡಿಕೇರಿಯ ಜಡ್ಜ್ ಮುದ್ದಪ್ಪನವರು ಆಗಾಗ ಕೀಲಾರು ರಾಮಚಂದ್ರಯ್ಯನವರ ಮನೆಯಲ್ಲಿ ಅತಿಥಿಗಳಾಗಿ ಬಂದು ಹೋಗುತ್ತಿದ್ದವರು.

ಇವರು ಮಾಡಿದ ಪರೋಪಕಾರ, ದಾನ ಧರ್ಮಗಳಿಗೆ ಹೆಸರುಗಳ ಫಲಕವಿಲ್ಲ. ಆದರೆ ಜನರ ಹೃದಯದ ಚಿಲಕದೊಳಗೆ ಅದರ ನೆನಪು ಉಳಿದಿದೆ.

• ಸರವು ರಾಮಭಟ್ಟ

# ಆಸ್ತಿಕತೆ, ಪುನರಾವರ್ತನೆ, ಅತೀಂದ್ರಿಯತೆ

## ಮತ್ತು

# ಐ-ಚಿಂಗ್ ಹೋರಾಶಾಸ್ತ್ರ

## ಮನೋವಿಜ್ಞಾನಿ ಕಾರ್ಲ್ ಜಿ.ಜಂಗ್‌ನ ದೃಷ್ಟಿಯಲ್ಲಿ

"ಆಕಸ್ಮಿಕ ಯಾವುದು? ಅತೀಂದ್ರಿಯ ಗ್ರಹಣ ಶಕ್ತಿಗೆ ಕಾರಣವೇನು? ಎಲ್ಲ ಘಟನೆಗಳಿಗೂ 'ಕಾಲ ಮತ್ತು ಉದ್ದೇಶ'ಗಳ ಸಂಬಂಧವಿದೆಯೆ?" –ಈ ಪ್ರಶ್ನೆಗಳಿಗೆಲ್ಲ ಇಲ್ಲಿ ಉತ್ತರವಿದೆ.

• ಟಿ.ಬಿ. ಗುರುನಂಜಯ್ಯ

ಎರಡು ವರ್ಷಗಳ ಹಿಂದೆ ಕಳೆದು ಹೋಗಿದ್ದ ವಸ್ತುವೊಂದು ನಿಮಗೆ ಮರಳಿ ಸಿಕ್ಕಿದರೆ ಅದನ್ನು ಆಕಸ್ಮಿಕವೆನ್ನುವಿರಾ? ಅಥವಾ ನಿಮ್ಮ ಸ್ನೇಹಿತನ ಇಲ್ಲವೆ ಬಂಧುವಿನ ತಲೆಗೆ ಏಟುಬಿದ್ದಾಗ ಅದೇ ಸಮಯಕ್ಕೆ ನಿಮ್ಮ ತಲೆಯಲ್ಲಿ ನೋವು ಕಾಣಿಸಿ ಕೊಂಡರೆ ಅದೂ ಆಕಸ್ಮಿಕವೇ?

ಕೆಲವು ವರ್ಷಗಳ ಹಿಂದೆ ಅಮೆರಿಕದ ಜಾರ್ಜ್ ಬಿ.ಬ್ರೈಸನ್ ಎಂಬೊಬ್ಬ ವ್ಯಾಪಾರಿ ಸೇಂಟ್ ಲೂಯಿಸ್ ನಗರದಿಂದ ನ್ಯೂಯಾರ್ಕಿಗೆ ಪ್ರಯಾಣಿಸುತ್ತಿದ್ದ. ಆದರೆ ಪ್ರಯಾಣದ ಮಧ್ಯೆ ಲೂಯಿಸ್ ವಿಲ್ಲೆ ಎಂಬ ನಗರದಲ್ಲಿ ಇಳಿದು ಒಂದು ಹೊಟೇಲಿನಲ್ಲಿ ತಂಗಿದ. ಆತನೋ ಆ ನಗರಕ್ಕೆ ಹೊಸಬ. ಹೊಟೇಲಿನಲ್ಲಿ ಅವನಿಗೆ ೩೦೭ನೇ ರೂಮನ್ನು ನೀಡಲಾಗಿತ್ತು. ಕಾಲಕಳೆಯಲು ಬ್ರೈಸನ್ ಕೆಳಗೆ ಬಂದಾಗ, ಸ್ವಾಗತ ಕಾರಿಣಿ "ನಿಮಗೊಂದು ಪತ್ರವಿದೆ," ಎಂದು ಕವರೊಂದನ್ನು ಆತನಿಗೆ ನೀಡಿದಳು. ಕವರಿನ ಮೇಲೆ 'ಮಿ

ಜಾರ್ಜ್ ಬಿ.ಬ್ರೈಸನ್, ರೂಂ ನಂ '೩೦೭,' ಎಂದಿತ್ತು. ಅಚ್ಚರಿಗೊಂಡ ಆತ ವಿಚಾರಿಸಿದ ನಂತರ ತಿಳಿದು ಬಂದಿದ್ದೇನೆಂದರೆ, ಅದೇ ಹೆಸರಿನ ವ್ಯಕ್ತಿಯೊಬ್ಬ, ಆ ಹೊಟೇಲಿನ ೩೦೭ನೇ ರೂಮಿನಲ್ಲಿ ವಸತಿಮಾಡಿ ಹೋಗಿದ್ದ. ಇದು ಕೂಡ ಆಕಸ್ಮಿಕವೋ ಅಥವಾ.... ಇನ್ನೂ ಒಂದು ಪ್ರಸಂಗ ಕೇಳಿ. ಶ್ರೀಮತಿ ಎಕ್ಸ್ ಎಂಬಾಕೆ, ನವಂಬರ್ ೧೮ನೇ ತಾರೀಖಿನಂದು ಬೆಳಗ್ಗೆ ಎದ್ದಾಗ, "ನನ್ನ ಮಗ ಜಾಕ್ ಸತ್ತಿದ್ದಾನೆ," ಎಂದು ಬಡಬಡಿಸತೊಡಗಿದಳು. ಅವಳ ಮಗ ಜಾಕ್ ಸೈನಿಕನಾಗಿ ಯುದ್ಧಕ್ಕೆ ತೆರಳಿದ್ದ. ನವಂಬರ್ ೨೩ನೇ ದಿನಾಂಕ, ಹಾಸಿಗೆಯಿಂದ ಎದ್ದು "ನನ್ನ ಮಗ ಖಂಡಿತವಾಗಿಯೂ ಸತ್ತಿದ್ದಾನೆ," ಎಂದು ಪರಿತಪಿಸತೊಡಗಿದಳು. ತುಸು ಹೊತ್ತಿನಲ್ಲೇ ಜಾಕ್ ತಾನು ಸೌಖ್ಯವಾಗಿದ್ದೇನೆಂದು ತಿಳಿಸಿ ಬರೆದ ಪತ್ರವೂ ತಲುಪಿತ್ತು. ಆದರೂ ಆಕೆಯ ಮನಸ್ಸಿನ ತಳಮಳ ಕಡಿಮೆಯಾಗಲಿಲ್ಲ. ಅದೇ ದಿನ ಸಂಜೆ, "ಜಾಕ್ ನವಂಬರ್ ೧೭ನೇ ತಾರೀಖಿನಂದು ಯುದ್ಧದಲ್ಲಿ ತೀರಿಕೊಂಡ," ಎಂಬ ತಂತಿ ಸಂದೇಶ ಮಿಲಿಟರಿ ಕೇಂದ್ರಸ್ಥಾನದಿಂದ ಬಂದಿತ್ತು.

ಇಂತಹ ವಿಚಿತ್ರ ಅನುಭವಗಳು ನಿಮಗೂ ಆಗಿರಬಹುದು. ಇಂತಹ ಸಂದರ್ಭಗಳನ್ನು ನಾವು ಆಕಸ್ಮಿಕವೆಂದೋ ಅಥವಾ ವಿಧಿಲಿಖಿತವೆಂದೋ ಹೇಳಿಕೊಂಡು ಸುಮ್ಮನಾಗಿಬಿಡುತ್ತೇವೆ. ಹತ್ತೊಂಬತ್ತನೇ ಶತಮಾನದ ಕೊನೆ ಮತ್ತು ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ, ವಿಜ್ಞಾನಿಗಳೂ ಮತ್ತು ಅನೇಕ ವೇದಾಂತಿಗಳೂ "ಈ ಘಟನೆಗಳು, ಬರೀ ಆಕಸ್ಮಿಕವೋ? ಅಥವಾ ಅದರಲ್ಲಿ ಹೆಚ್ಚಿನ ವಿಶೇಷ ವೇನಾದರೂ ಉಂಟೋ?" ಎಂಬುದಾಗಿ ಚಿಂತಿಸತೊಡಗಿದರು. ಇಂತಹ ಘಟನೆಗಳನ್ನು ಮನೋವಿಜ್ಞಾನಿಗಳು ಪರಿಶೀಲಿಸಿ, ಇವು ಕೇವಲ ಆಕಸ್ಮಿಕವಲ್ಲ ಎಂಬ ಸಿದ್ಧಾಂತಕ್ಕೆ ಬಂದರು. ಅವರ ಅನಿಸಿಕೆಯಂತೆ, 'ಅತೀಂದ್ರಿಯ ಗ್ರಹಣ ಶಕ್ತಿ'ಯನ್ನು ಪಡೆದಿರುವ ಕೆಲವೇ ವ್ಯಕ್ತಿಗಳು ಇಂತಹ ಅನುಭವಗಳನ್ನು ಪಡೆಯಬಲ್ಲರು. ಅಲ್ಲದೇ ಬೇರೆಯವರ ಮನಸ್ಸಿನಲ್ಲಿರುವ 'ಆಲೋಚನೆ'ಗಳನ್ನು ಮತ್ತು 'ಇಂಗಿತ'ವನ್ನು ಅರಿಯುವ (ಅಂತಃಚಕ್ಷು) ಶಕ್ತಿಯನ್ನೂ ನಾವು ಕೆಲವರಲ್ಲಿ ಕಾಣುತ್ತೇವೆ. ಮತ್ತೆ ಕೆಲವರು, ನಡೆದಿರಬಹುದಾದ ಘಟನೆಯನ್ನೋ ಅಥವಾ ಭವಿಷ್ಯದಲ್ಲಿ ನಡೆಯಬಹುದಾದ ಘಟನೆಯನ್ನೋ ಮುಂಚೆಯೇ ತಿಳಿಯುವ 'ಅತೀಂದ್ರಿಯ ಗ್ರಹಣ ಶಕ್ತಿ' ಪಡೆದಿರುವುದನ್ನೂ ಕಾಣುತ್ತೇವೆ. ಆದ್ದರಿಂದ ಘಟನೆಗಳಿಗೂ ಮತ್ತು ಮನಸ್ಸಿಗೂ ಸಂಬಂಧವಿರಲೇಬೇಕೆಂಬ ನಂಬಿಕೆಗೆ ಬಂದರು. ಇದನ್ನು ಅವರು "ಮಾನಸಿಕ ಚಲನೆ" ಎಂದರು. " 'ಅಂತಃಚಕ್ಷು' ಮನುಷ್ಯನ ಅಪೂರ್ಣ ತಿಳಿವಳಿಕೆಯನ್ನು ಪೂರ್ಣಗೊಳಿಸಲು ಪೂರಕವಾಗಿದೆ" ಎಂದೂ ಅಭಿಪ್ರಾಯಪಟ್ಟರು.

೧೯೩೦ರಲ್ಲಿ ಮನೋವಿಜ್ಞಾನಿ ಮೆಕ್‌ಡೂಗಲ್ ಈ ಮನಃಶಕ್ತಿಯನ್ನು "ಸುಪ್ತಮನಸ್ಸಿನ ಜಾಗೃತಾವಸ್ಥೆ" ಎಂದ.

ಫ್ರಾನ್ಸಿನ ತತ್ವಜ್ಞಾನಿ ಬರ್ಗ್‌ಸನ್ ಹೇಳುವ ಹಾಗೆ "ನಮ್ಮ ನಾಗರಿಕತೆ ತನ್ನ ಅನೇಕ ಸಂಕೀರ್ಣಗಳಿಂದ ರಚನೆಯಾಗಿರುವ ಕಾರಣ, ಅತೀಂದ್ರಿಯ ಗ್ರಹಣ ಶಕ್ತಿಯು ಕೆಲವು ಮಾನವರಲ್ಲಿ ಕಂಡುಬರುತ್ತದೆ. ಆಗು-ಹೋಗುಗಳು, ಕಾಲ ಮತ್ತು ಅಂತರಗಳ ಸಂಬಂಧಗಳಿಲ್ಲದೇ ಮನುಷ್ಯನ ಸುಪ್ತ ಮನಸ್ಸಿನಲ್ಲಿ ಅಡಗಿಕುಳಿತಿರುತ್ತವೆ."

## ಈ ವಿಜ್ಞಾನಿಗಳ ದೃಷ್ಟಿಯಲ್ಲಿ

"ನಮ್ಮ ಪಂಚೇಂದ್ರಿಯಗಳು ನಮ್ಮ ಜ್ಞಾನ ಸಂಪಾದನೆಗೆ ನಿಯಮಿತವಾಗಿ ಕೆಲಸ ನಿರ್ವಹಿಸುತ್ತವೆ. ಮಾನವನ ಇಂದ್ರಿಯಗಳು ಅನುಭವ ಸಮೃದ್ಧ ಹಾಗೂ ವೈವಿಧ್ಯಮಯವಾಗಿದ್ದರೂ, ಅವುಗಳು ವಸ್ತುವಿನ ಅಥವಾ ಮನುಷ್ಯನ ಬಾಹ್ಯ ರೂಪವನ್ನು ಮಾತ್ರ ವರ್ಣಿಸಬಲ್ಲವು. ಮಾನವನ ಮನಸ್ಸಿನ ಅಂತರಾಳವನ್ನು ಮತ್ತು ಅದರ ನೈಜ ರೂಪವನ್ನು ಅಳೆಯಲು ಇಂದ್ರಿಯಗಳಿಗೆ ಅಸಾಧ್ಯವಾಗಿದೆ. ಜ್ಞಾನ ಮತ್ತು ಅರಿವು ಮಾತ್ರ, ಮನಸ್ಸಿನ ಅಂತರಾಳವನ್ನು ಅಳೆಯಲು ದಾರಿತೋರಿಸಬಲ್ಲವು. ಅಂತಃಚಕ್ಷು ಸುಪ್ತ ಮನಸ್ಸಿನಲ್ಲಿ ಕಾರ್ಯನಿರ್ವಹಿಸುತ್ತಿರುತ್ತದೆ. ಅದರ ಯೋಚನಾಶಕ್ತಿ ಅಂತರಿಕವಾಗಿ ಮತ್ತು ಗುಪ್ತವಾಗಿ ಕಾರ್ಯನಿರ್ವಹಿಸುತ್ತಿರುತ್ತದೆ. ಮನಸ್ಸಿನ ಪ್ರತಿಭಾ ಶಕ್ತಿ, ಭೂತ ಕಾಲದ ಅನುಭವಗಳನ್ನು ವರ್ತಮಾನದ ವಿಚಾರಗಳಿಗೆ ಜೋಡಿಸಿ ಹಳೆಯದನ್ನು ಹೊಸರೂಪದಲ್ಲಿ ತೋರಿ

**ಕಾರಣ**

ಮೊನ್ನೆ
ಗಣೇಶ ಚತುರ್ಥಿಯ ಸಂಜೆ
ಆತ ತನ್ನ ಹೆಂಡತಿಯ ಮುಖ
ನೋಡಲಿಲ್ಲ-
'ಚಂದ್ರಮುಖಿ' ಎಂದಾಕೆಯ
ಹೆಸರಿದ್ದುದರಿಂದ

• ಯಬ್ಬಂಕ

ಸುತ್ತದೆ. ಅದು ಇರುವಿಕೆಗೂ ಮತ್ತು ಇಲ್ಲದಿರುವಿಕೆಗೂ ಕೊಂಡಿಯಾಗಿರುತ್ತದೆ. ಅದು ಇಂದ್ರಿಯ ಶಕ್ತಿಗಳನ್ನು ವಿವೇಚನಾಶಕ್ತಿಗೆ ಜೋಡಿಸಿ ಅಸದೃಶ ಪವಾಡಶಕ್ತಿಯನ್ನೇ ಪಡೆಯಬಲ್ಲದು. ಇಂತಹ ಒಂದು ವಿಚಾರಧಾರೆಯ ಸಾಮ್ಯವನ್ನು ಜೈನ ಧರ್ಮದಲ್ಲಿ "ಇಂದ್ರಿಯಗಳು ಮತ್ತು ಜ್ಞಾನ" ಇವುಗಳ ಬಗ್ಗೆ ಇರುವ ತಿಳಿವಳಿಕೆಯಲ್ಲಿ ನಾವು ಕಾಣಬಹುದು.

ಇವುಗಳಿಗೆಲ್ಲಾ ಸೂಕ್ತ ಉತ್ತರ ಕಂಡುಕೊಂಡ ಮೊದಲನೆಯ ಮನೋವಿಜ್ಞಾನಿ ಸಿ.ಜಿ.ಜಂಗ್. ಘಟನೆಗಳ ಪುನರಾವರ್ತನೆಯಲ್ಲಿ ಆಕಸ್ಮಿಕತೆ ಮತ್ತು ಅತೀಂದ್ರಿಯ ಶಕ್ತಿಗೂ ಸಂಬಂಧವಿದೆ ಎಂದು ಆತ ಸಾಧಿಸಿದ. "ಘಟನೆಗಳಲ್ಲಿ ಸಾಮ್ಯ ಕಂಡು ಬರುವಂತೆ, ಅತೀಂದ್ರಿಯ ಶಕ್ತಿಯೂ ಮತ್ತು ವಿಶ್ವದ ಎಲ್ಲಾ ವಸ್ತುಗಳೂ ಪರಸ್ಪರ ಜಾಲ ಬಂಧನಕ್ಕೆ ಒಳಪಟ್ಟಿವೆ. ಅಲ್ಲಿ ಪರಸ್ಪರ ಹೆಣೆದ ಸಂಬಂಧವಿದ್ದು ಪರಸ್ಪರ ವರ್ತಿಸುತ್ತಿವೆ. 'ಎಷ್ಟು ಉನ್ನತವೋ, ಅಷ್ಟೇ ಕೀಳು' ಎಂಬ ಪ್ರಾಚೀನ ಮಾಂತ್ರಿಕ ಸಿದ್ಧಾಂತ ಈ ಸಂಬಂಧಗಳ ಮೇಲೆ ಬೆಳಕು ಚೆಲ್ಲುತ್ತದೆ," ಎಂದಾತ ಸಾರಿದ.

"ಹಾಗಾದಲ್ಲಿ ಈ ಅತೀಂದ್ರಿಯರು ಯಾವುದೇ ಘಟನೆಗಳಲ್ಲಿ ತಮ್ಮ ಪ್ರಭಾವ ಬೀರಬಲ್ಲರೇ?"

ಸಿ.ಜಿ. ಕಾರ್ಲ್ ಜಂಗ್ ಇಂತಹ ಘಟನೆಗಳ ಬಗ್ಗೆ ಗಮನಹರಿಸಿ ಪರಿಶೀಲನೆಗೆ ತೊಡಗಿದ. ಅನೇಕ ವರ್ಷಗಳ ಸತತ ಅಭ್ಯಾಸದಲ್ಲಿ ತನಗೂ ತನ್ನ ರೋಗಿಗಳಿಗೂ ಇಂತಹ ಅರ್ಥಪೂರ್ಣವಾದ ಪುನರಾವರ್ತನೆ ಅಥವಾ ಸಾಮ್ಯ ಇರುವ ಘಟನೆಗಳ ಅನುಭವಗಳನ್ನು ಪಡೆದ.

ಕಾರ್ಲ್‌ಜಂಗನ ಪ್ರತಿಪಾದನೆಯಂತೆ,

"ಎಲ್ಲಾ ಘಟನೆಗಳೂ 'ಕಾಲ ಮತ್ತು ಉದ್ದೇಶ'ಗಳಿಗೆ ಸಂಬಂಧಿಸಿದುವೇ ಹೊರತು, ಕಾರಣ ಮತ್ತು ಪರಿಣಾಮ'ದ ಸಿದ್ಧಾಂತದಿಂದಲ್ಲ. ಇಂತಹ ಘಟನೆಗಳಲ್ಲಿ ಸಾಮ್ಯದ ಅನುಭವ, ಪರಸ್ಪರ ಹೋಲಿಕೆಯ ವಿಘಟನೆಗಳಲ್ಲಿನ ಪುನರಾವರ್ತನೆಗಳು, ಮನುಷ್ಯನ ಸುಪ್ತಾವಸ್ಥೆಯ ಭಾವನೆಗಳಾಗಿ ಅಡಗಿ ಕುಳಿತು ಯಾವುದೋ ಒತ್ತಡ ಅಥವಾ ಸಂದರ್ಭಗಳಲ್ಲಿ ಬಹಿರ್ಮುಖವಾಗಿ ಕಾಣಿಸಿಕೊಳ್ಳುತ್ತವೆ" ಎಂಬ ತಿಳಿವಳಿಕೆಗೆ ಬಂದ. ತನ್ನ ಜೀವನದಲ್ಲಿ ನಡೆದ ಘಟನೆಗಳನ್ನೇ ಉದಾಹರಣೆ ನೀಡಿ ವಿವರಿಸಿ ಹೇಳಿದ.

ಒಂದು ದಿನ ಸಂಜೆ ಕಾರ್ಲ್‌ಜಂಗ್ ಮನೆಗೆ ರೈಲಿನಲ್ಲಿ ವಾಪಸ್ಸು ಬರುತ್ತಿರುವಾಗ ತಟ್ಟನೇ ಅವನ ಮನಸ್ಸಿನಲ್ಲಿ, "ಯಾರೋ ನೀರಿನಲ್ಲಿ ಮುಳುಗುತ್ತಿದ್ದಾರೆ" ಎಂಬ ಭಾವನೆ ಉಂಟಾಯಿತು. ಅದು ಅವನಿಗೇನೋ ಕಸಿವಿಸಿಯುಂಟು ಮಾಡಿತು. ಏನೋ ಅನಾಹುತ ನಡೆದಿರಲೇಬೇಕು ಎಂದು ಯೋಚಿಸುತ್ತಾ ಮನೆ ತಲುಪಿದ. ತಕ್ಷಣವೇ ಅವನ ಮೊಮ್ಮಕ್ಕಳು ಆತನನ್ನು ಮುತ್ತಿಕೊಂಡರು.

"ತಾತಾ! ನಿನ್ನ ಚಿಕ್ಕ ಮೊಮ್ಮಗ ಸರೋವರದಲ್ಲಿ ಮುಳುಗಿ ಸಾಯುತ್ತಲಿದ್ದ. ಹೇಗೋ ದೊಡ್ಡಣ್ಣ ಅವನನ್ನು ಬಚಾವ್ ಮಾಡಿದ," ಎಂದರು. ವಿಚಾರಿಸಿ ಕೇಳಿದಾಗ ಅನಾಹುತ ನಡೆದ ಸಮಯ ಮತ್ತು ಕಾರ್ಲ್‌ಜಂಗ್‌ನ ಮನಸ್ಸಿನಲ್ಲಿ ಅಂಥ ಅನಿಸಿಕೆ ಉಂಟಾದ ಸಮಯ ಒಂದೇ ಆಗಿತ್ತು.

## ಐ-ಚಿಂಗ್ ಪ್ರಶ್ನಶಾಸ್ತ್ರ ಮತ್ತು ಕಾರ್ಲ್ ಜಂಗ್

ಐ-ಚಿಂಗ್ ಪುರಾತನ ಚೀನದ ಒಂದು ಗ್ರಂಥ. ಕ್ರಿ.ಪೂ. ೧೧೪೩ರಲ್ಲಿ ಕಿಂಗ್‌ಸನ್ ಮತ್ತು ತದ ನಂತರ ಅವನ ಮಗ ಚಾ ಎಂಬುವರು ಈ ಗ್ರಂಥಕ್ಕೆ ಒಂದು ವ್ಯವಸ್ಥಿತ ರೂಪ ನೀಡಿದರು. ಈ ಐ-ಚಿಂಗ್ ಗ್ರಂಥ, ಚೀನಾದ ಎರಡು ಧರ್ಮಗಳಾದ ಕನ್‌ಫ್ಯೂಷಿಯಸ್ ಮತ್ತು ತಾವೋ

> ತ್ಮವಿಶ್ವಾಸವನ್ನು ಹೆಚ್ಚಿಸಿಕೊಳ್ಳುವ ರೀತಿ ಏನು ಗೊತ್ತೆ? ಯಾವ ಕೆಲಸ ಭಯಾವಹವೆನಿಸುತ್ತದೆಯೋ ಅದನ್ನೇ ಮಾಡಲು ತೊಡಗಿ ಮುಂದುವರಿಯುವುದು.
>
> • ಡೇಲ್ ಕಾರ್ನೆಗಿ

ನಂಬಿಕೆಗಳ ಮೇಲೆ ಅಪಾರ ಪ್ರಭಾವ ಬೀರಿತ್ತು. ಈಗಲೂ ಈ ಗ್ರಂಥಕ್ಕೆ ಗೌರವ ನೀಡಿ ದೈನಂದಿನ ಸಮಸ್ಯೆಗಳಿಗೆ ಸಲಹೆ ಕೇಳುವವರುಂಟು. ೧೮೮೨ರಲ್ಲಿ, ಈ ಗ್ರಂಥವನ್ನು ಇಂಗ್ಲಿಷ್‌ಗೆ ಅನುವಾದಿಸಿದ ನಂತರ, ಪಾಶ್ಚಾತ್ಯ ದೇಶಗಳಲ್ಲಿ ಬಹಳ ಜನ ಇದರ ಅನುಯಾಯಿಗಳಾದರು. ಅವರುಗಳಲ್ಲಿ ಮನೋವಿಜ್ಞಾನಿ ಕಾರ್ಲ್‌ಜಂಗ್ ಸಹ ಒಬ್ಬನಾಗಿದ್ದ. ಈ ಪ್ರಶ್ನಶಾಸ್ತ್ರ ಮಾದರಿಯ ಗ್ರಂಥವನ್ನು ಆತ ಆಳವಾಗಿ ಅಭ್ಯಾಸಮಾಡಿದ.

"ಮಾನವ ಮತ್ತು ಅವನನ್ನು ಸುತ್ತುವರೆದಿರುವ ಬ್ರಹ್ಮಾಂಡ ಇವೆರಡರ ಐಕ್ಯದ ನಂಬಿಕೆಯ ಮೇಲೆ ರಚನೆಯಾಗಿದೆ ಈ ವಿಶ್ವ ಈ ಐ-ಚಿಂಗ್ ಗ್ರಂಥ ಎರಡು ಸಮಾನಾಂತರ ಮತ್ತು ಪರಸ್ಪರ ಪೂರಕವಾಗಿರುವ ಶಕ್ತಿಗಳಿಂದ ಕೂಡಿದೆ. ಅವುಗಳೇ 'ಯೂಂಗ್' ಮತ್ತು 'ಯಿನ್'. ಯೂಂಗ್-ಚುರುಕಾದ ಚೇತನಸ್ವರೂಪದ ತತ್ವಗಳನ್ನು ಹೊಂದಿ ಧ್ರುವಗುಣಗಳನ್ನು ಪ್ರತಿಬಿಂಬಿಸುತ್ತದೆ. 'ಯಿನ್'- ಜಡಸ್ವಭಾವ ಹೊಂದಿ, ಋಣ ಗುಣಗಳನ್ನು ಪಡೆದಿದೆ. ಯೂಂಗ್-ಸಾತ್ವಿಕ ಗುಣದ್ದಾದರೆ, ಯಿನ್ ತಾಮಸ ಗುಣದ್ದು. ವಿಶ್ವದ ಪ್ರತಿಯೊಂದು ಅಂಶವೂ ಈ 'ಯೂಂಗ್-ಯಿನ್' ತತ್ವಗಳಿಂದ ಕೂಡಿದೆ. ಆದರೂ ಅವುಗಳು ಒಂದೇ ಸಮನಾಗಿರುವುದಿಲ್ಲ. ಆದ್ದರಿಂದಲೇ, ಪ್ರತಿಯೊಂದು ವಸ್ತು, ಮಾನವ-ಪ್ರಾಣಿ, ಗಿಡ-ಮರಗಳಲ್ಲಿಯೂ ನಾವು ವ್ಯತ್ಯಾಸ ಕಾಣುತ್ತೇವೆ. ಈ ಎರಡು ಗುಣಗಳ ಪರಸ್ಪರ ಪ್ರಕ್ರಿಯೆಯಿಂದಾಗಿಯೇ ಈ ತಾರತಮ್ಯಗಳು ಕಂಡು ಬಂದಿವೆ" ಎಂದು ಪುರಾತನ ಚೀನೀಯರು ನಂಬಿದ್ದರು.

'ಐ-ಚಿಂಗ್' ಗ್ರಂಥ, ಒಂದು ರೀತಿ ಜ್ಯೋತಿಷ್ಯ ಗ್ರಂಥವೆಂದೇ ಹೇಳಬಹುದು. ನಮ್ಮಲ್ಲಿರುವ 'ಪ್ರಶ್ನಲಗ್ನ' ಅಥವಾ 'ಹೋರಾ ಶಾಸ್ತ್ರ'ದ ಮಾದರಿಯಲ್ಲಿದೆ ಇದು.

ಈ ಗ್ರಂಥದಲ್ಲಿ ೬೪ ಆಕೃತಿಗಳಿದ್ದು ಅವುಗಳಲ್ಲಿ ಪ್ರತಿಯೊಂದೂ ಷಡಾಕೃತಿಯ ರೂಪದ್ದು. ಆರು ತುಂಡಾದ ಮತ್ತು ಆರು ತುಂಡಾಗದ ಅಡ್ಡ ಗೆರೆಗಳ ಸಂಯೋಜನೆ ಇದಾಗಿದೆ.



ತುಂಡಾದ ಗೆರೆಗಳು 'ಯಿನ್' ಗುಣವನ್ನೂ, ತುಂಡಾಗದ ಉದ್ದನೆ ಗೆರೆಗಳು 'ಯೂಂಗ್' ಗುಣವನ್ನೂ ಪ್ರತಿನಿಧಿಸುತ್ತವೆ. ಪ್ರತಿಯೊಂದು ಷಡಾಕೃತಿಯೂ ಬೇರೆ-ಬೇರೆ ರೀತಿಯದ್ದಾಗಿದ್ದು, ಪ್ರತಿಯೊಂದಕ್ಕೂ ಪ್ರತ್ಯೇಕ ಗುರುತಿನ ಚಿಹ್ನೆ ನೀಡಿದ್ದಾರೆ. ಈ ಚಿಹ್ನೆಗಳು ಮಾನವ ಜೀವನದ ೬೪ ವಿವಿಧ ಸ್ಥಿತಿಗಳನ್ನು ವ್ಯಕ್ತಪಡಿಸುತ್ತವೆ. ಪ್ರತಿಯೊಂದು ಆಕೃತಿಯ ಕೆಳಗೆ ಒಂದು ಟಿಪ್ಪಣಿ ಮತ್ತು ವಿವರಣೆ ಇರುತ್ತದೆ. ಪ್ರತಿಯೊಂದು ಗೆರೆಗೂ ಬೇರೆ-ಬೇರೆ ಅರ್ಥ ನಿರೂಪಣೆ ನೀಡುತ್ತಾರೆ.

'ಐ-ಚಿಂಗ್' ಗ್ರಂಥದಲ್ಲಿ ಸಲಹೆ ಪಡೆಯಬೇಕಾದರೆ, ಪ್ರಶ್ನಿಸುವ ವ್ಯಕ್ತಿಯ ಕೈಯಿಂದ ಮೂರು ನಾಣ್ಯಗಳನ್ನು (ನಮ್ಮಲ್ಲಿ ಕವಡೆಗಳನ್ನು ಉಪಯೋಗಿಸುವಂತೆ) ಆರು ಬಾರಿ ಚಿಮ್ಮಿಸುತ್ತಾರೆ. ತಲೆ ಬಿದ್ದಲ್ಲಿ, ಒಂದು 'ಯೂಂಗ್' ಗೆರೆಯನ್ನೂ 'ಬುಡ' ಬಿದ್ದಲ್ಲಿ ಒಂದು 'ಯಿನ್' ಗೆರೆಯನ್ನೂ ಎಳೆದು ಷಡಾಕೃತಿಯನ್ನು ರಚಿಸುತ್ತಾರೆ. ಹೀಗೆ ಆರು ಬಾರಿ ನಾಣ್ಯಗಳನ್ನು ಚಿಮ್ಮಿಸಿ ಗೆರೆಗಳ ಷಡಾಕೃತಿ ರಚಿಸಿ, ಗ್ರಂಥದಲ್ಲಿ ಅಂತಹ ಗೆರೆಗಳಿಂದ ರಚಿಸಲ್ಪಟ್ಟ ಷಡಾಕೃತಿಯ ಕೆಳಗೆ ಬರೆದಿರುವ ನಿರೂಪಣೆಯನ್ನು ಓದಿ ಸೂಕ್ತ ಅರ್ಥ ನೀಡಿ ಕಳಿಸುತ್ತಾರೆ. ಇಲ್ಲಿ ಪ್ರಶ್ನೆ ಕೇಳುವ ಸಮಯ ಮುಖ್ಯವಾಗಿರುತ್ತದೆ.

ಈ 'ಐ-ಚಿಂಗ್' ಗ್ರಂಥದ ಸಿದ್ಧಾಂತದಂತೆ-ಈ ವಿಶ್ವದ ಯಾವುದೇ ವಸ್ತು ಅಥವಾ ಮನುಷ್ಯನ ಭವಿಷ್ಯ ಶಾಶ್ವತ ರೂಪಿಯಲ್ಲ, ಈ ಗ್ರಂಥ ಭವಿಷ್ಯ ಹೇಳುವ ಗ್ರಂಥವಲ್ಲ, ಮಾನವನಿಗೆ ಸಮಯೋಚಿತವಾಗಿ ಮೌಲ್ಯಾಧಾರಿತ ದಾರಿ

ತೋರಿ, ಆತ ಸೂಕ್ತ ಮಾರ್ಗ ಹಿಡಿದು ತನ್ನ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಸಹಾಯ ಮಾಡುತ್ತದೆ. ಆದರೆ, ಇದರ ಗುಟ್ಟು ಇರುವುದು ಪ್ರತಿ ಷಡಾಕೃತಿಯ ಕೆಳಗಿನ ಟಿಪ್ಪಣಿ ಮತ್ತು ವಿವರಣೆಗಳನ್ನು ಅರ್ಥೈಸಿಕೊಳ್ಳುವುದರಲ್ಲಿ ಎನ್ನಬಹುದು. ಜ್ಞಾನರೂಪಕ ವ್ಯವಸ್ಥೆಯಾಗಿರುವ 'ಐ-ಚಿಂಗ್' ಗ್ರಂಥ ಮಾನವನ ನೈತಿಕ ದೃಷ್ಟಿಕೋಣ, ಆಂತರಿಕ ಒಳಸೋಟಗಳನ್ನು ತಿಳಿದು ಪ್ರಶ್ನೆಗಾರನಿಗೆ ಸರಿಯಾದ ಮಾರ್ಗ ತೋರಿಸುತ್ತದೆ.

### ಅರ್ಥಪೂರ್ಣ ಆಕಸ್ಮಿಕ ಘಟನೆಗಳ ಕುರಿತ ತರ್ಕ ಮತ್ತು ಕಲ್ಪನೆ

ಮಾನವನ ನೆನಪುಗಳಲ್ಲಿ, ಕನಸುಗಳಲ್ಲಿ ಅಥವಾ ಪುನರಾವರ್ತಿತ ಘಟನೆಗಳಲ್ಲಿ 'ಐ-ಚಿಂಗ್' ವಶೀಕರಣವಿದೆ, ಎಂದು ಕಾರ್ಲ್ ಜಂಗ್ ನಂಬಿದ್ದ. ೧೯೨೦ರಿಂದ ಈ ಬಗ್ಗೆ ಸಾಮ್ಯ ತೋರುವ ಘಟನೆಗಳನ್ನು ನಿರೀಕ್ಷಿಸಿದ. 'ಐ-ಚಿಂಗ್' ಗ್ರಂಥದಲ್ಲಿದ್ದಂತೆ, ಷಡಾಕೃತಿಗಳನ್ನು ರಚಿಸಿ ಪರಿಣಾಮಗಳನ್ನು ನೂರಾರು ಘಟನೆಗಳ ಸಂಬಂಧದಲ್ಲಿ ಪರೀಕ್ಷಿಸಿದ. ತಾನು ಗಮನಿಸಿದ ಉತ್ತರಗಳಲ್ಲಿ ಯಾವುದನ್ನೂ ತಿರಸ್ಕರಿಸುವಂತಿರಲಿಲ್ಲ. 'ಐ-ಚಿಂಗ್' ವಿವರಣೆಗಳನ್ನು ನಂಬಬೇಕೆ ಅಥವಾ ಬಿಡಬೇಕೆ ಎಂಬ ಸಮಸ್ಯೆಗೆ ಉತ್ತರ ಕಂಡುಕೊಳ್ಳುವುದರಲ್ಲಿ ನಿರತನಾದ. ಈ 'ಐ-ಚಿಂಗ್' ಉತ್ತರಗಳು ಅಷ್ಟು ಪ್ರಾಮುಖ್ಯವಾಗಿದ್ದಲ್ಲಿ ಮಾನಸಿಕ ಅನುಭವಕ್ಕೂ ಬೌದ್ಧಿಕ ವಸ್ತುಗಳಿಗೂ ಸಂಬಂಧ ಹೇಗೆ ಏರ್ಪಟ್ಟಿದೆ? ಒಬ್ಬ ಪ್ರಚ್ಛುಕನ ಮನಸ್ಸಿನಲ್ಲಿ ಉದ್ಭವಿಸಿರುವ ಸಮಸ್ಯೆಗೆ 'ಐ-ಚಿಂಗ್' ಷಡಾಕೃತಿಯ ಗೆರೆಗಳು ನೀಡುವ ಅರ್ಥ ವಿವರಣೆ ಹೇಗೆ ಸಮಜಾಯಿಷಿ ನೀಡಬಲ್ಲದು? ನಂತರ 'ಐ-ಚಿಂಗ್' ಪದ್ಧತಿಯನ್ನು ತನ್ನ ಮನೋರೋಗಿಗಳ ಮೇಲೆ ಪ್ರಯೋಗ ಮಾಡಿ ನೋಡಿದ.

ಬಹಳಷ್ಟು ಪ್ರಕರಣಗಳಲ್ಲಿ ಸೂಕ್ತ ಹಾಗೂ ಸರಿಯಾದ ಅರ್ಥವಿವರಣೆ ಸಿಕ್ಕಿತು.

ಸುಂದರಿಯಾದ ಕನ್ಯೆಯನ್ನು ಮದುವೆಯಾಗಲು ಆರಿಸಿದ್ದ ಓರ್ವ ಯುವಕನಿಗೆ ಅದೇಕೋ ಮನಸ್ಸಿಗೆ ಸಮಾಧಾನವೇ ಇರಲಿಲ್ಲ. ಅವನು ಮಾತೃತ್ವದ ಸಂಕೀರ್ಣತೆಯಿಂದ ನರಳುತ್ತಿದ್ದ. ಅವನ ಮನಸ್ಸಿನಲ್ಲಿ ತಾನು ಮತ್ತೊಂದು ಹೆಣ್ಣಿನ ಮಾತೃಛಾಯೆಯಲ್ಲಿ ಸಿಕ್ಕಿ ನರಳುತ್ತೇನೋ? ಎಂಬ ಅಳುಕು ಪ್ರಾರಂಭವಾಗಿತ್ತು. 'ಐ-ಚಿಂಗ್' ಪದ್ಧತಿಯಲ್ಲಿ ಪ್ರಶ್ನೆಮಾಡಿ ಕೇಳಿದ. ಉತ್ತರ ಅವನ ಮನಸ್ಸಿನಲ್ಲಿದ್ದ ಅನುಮಾನವನ್ನು ದೃಢೀಕರಿಸಿತ್ತು.

"ಈ ಕನ್ಯೆ ಬಹಳ ಪ್ರಭಾವಶಾಲಿ. ಇಂತಹ ಕನ್ಯೆಯನ್ನು ಮದುವೆಯಾಗಬಾರದು" ಎಂದು ವಿವರಣೆ ಬಂದಿತ್ತು. ಕಾರ್ಲ್ ಜಂಗ್‌ನ ಅನುಭವದಂತೆ 'ಐ-ಚಿಂಗ್' ವಿವರಣೆಗಳು ಮತ್ತು ಅರ್ಥಪೂರ್ಣ ಆಕಸ್ಮಿಕ ಘಟನೆಗಳು ಒಂದೇ ರೀತಿಯಾಗಿ ತೋರಿಬರುತ್ತವೆ ಎಂದು ತಿಳಿದ. ನಾವು ಕಂಡಂತೆ ಘಟನೆಗಳು, ಕಾಲ ಮತ್ತು ಉದ್ದೇಶಗಳು ಪರಸ್ಪರ ಹೊಂದಿಕೊಂಡಿರುತ್ತವೆ. ಆದರೆ ಘಟನೆಗಳು, ಎಲ್ಲರೂ ಭಾವಿಸಿದಂತೆ, 'ಕಾರಣ ಮತ್ತು ಪರಿಣಾಮ'ಗಳಿಗೆ ಸಂಬಂಧಿಸಿಲ್ಲ ಎಂದು ಪ್ರತಿಪಾದಿಸಿದ. ಆಕಸ್ಮಿಕ ಮತ್ತು ಪುನರಾವರ್ತಿಸುವ ಘಟನೆಗಳು, ಯಾವುದೋ ಒಂದು ರೀತಿಯಲ್ಲಿ ಪರಸ್ಪರ ಅವಲಂಬಿತವಾಗಿರುತ್ತವೆ. ವಿಶಾಲವಾಗಿ ಹೆಣೆದ ಬಲೆಯಲ್ಲಿ ಅವು ಬಂಧಿಸಲ್ಪಟ್ಟಿವೆ. ಇದಕ್ಕೂ ನಮ್ಮ ಬಾಳಿಗೂ (ಮನಸ್ಸಿಗೆ ಅಥವಾ ವ್ಯಕ್ತಿಯ ಮನಸ್ಸಿನ ಸಂಬಂಧ ಸ್ಥಿತಿಗೆ) ಸಂಬಂಧವಿದೆ ಎಂದು ಆತ ತಿಳಿಸಿದ.

### ಆಕಾರ-ಆಕೃತಿ

ಮೊಂಡಾಗಿರುವ ರೇಸರನ್ನು (ಕತ್ತಿ) ಸಣ್ಣದಾಗಿ ರಚಿತವಾದ 'ಪಿರಮಿಡ್' ಮಾದರಿಯ ಆಕೃತಿಯಲ್ಲಿ ಇಟ್ಟದ್ದಾದರೆ, ಅದರ ಅಲಗು ತನ್ನಷ್ಟಕ್ಕೆ ತಾನೆ ಹರಿತವಾಗುತ್ತದೆಯಲ್ಲ, ಯಾಕೆ?

ಗಾಯಗೊಂಡ ಇಲಿಯನ್ನು ದುಂಡನೆಯ ಬೋನಿನಲ್ಲಿಟ್ಟಾಗ ಅದರ ಗಾಯ ಬೇಗನೇ ವಾಸಿಯಾಗುವುದಾಗಿ ಕಂಡುಬಂದಿದೆ. ಇದಕ್ಕೇನು ಕಾರಣ?

ವಸ್ತುಗಳ ಆಕಾರ ಅಥವಾ ಆಕೃತಿ ಅನೇಕ ಸಂದರ್ಭಗಳಲ್ಲಿ ತಮ್ಮದೇ ಆದ ಪ್ರಭಾವ ಬೀರುತ್ತವೆ. ಚೌಕಾಕಾರದ ರೂಮಿನಲ್ಲಿ ಮಲಗುವುದು ಆರೋಗ್ಯಕ್ಕೆ ಒಳ್ಳೆಯದೆನ್ನುತ್ತಾರೆ ವಾಸ್ತುಶಾಸ್ತ್ರಪರಿಣತರು. ಆದರೆ ನಾವು ಇವುಗಳಿಗೆಲ್ಲಾ ಯಾಕೆಂದು ವಿವರ ನೀಡಲಾರೆವು. ಒಂದು ವೇಳೆ, ಪ್ರತಿ

ಯೊಂದು ಘಟನೆಯನ್ನು 'ಕಾರಣ ಮತ್ತು ಪರಿಣಾಮ'ಗಳ ದೃಷ್ಟಿಕೋನದಲ್ಲಿ ನೋಡಿದ್ದಾದರೆ ಅವು ನಮ್ಮನ್ನೆಲ್ಲಿಗೆ ಎಳೆದೊಯ್ಯುತ್ತವೆ ಎಂಬುದನ್ನು ಬಲ್ಲಿರಾ? ಆಗ ನಾವು ಇಂತಹ ಆಕಸ್ಮಿಕ ಘಟನೆಗಳಿಗೆ ಕಾರಣಗಳ ಜಾಡನ್ನು ಹಿಡಿದು, ಸಾಧ್ಯತೆಗಳ ಸಂಗಡ ಆಟವಾಡಲು ಆದರೆ ಉತ್ತರ ಮಾತ್ರ ಸಿಗಲಿಕ್ಕಿಲ್ಲ. ನಮ್ಮ ಪ್ರಕೃತಿಯಲ್ಲಿ ಅನೇಕ ವಸ್ತುಗಳು ನಾನಾ ರೀತಿಯ ಆಕೃತಿಯಲ್ಲಿ ಕಾಣಿಸಿಕೊಂಡಿವೆ. ಒಂದು 'ಟಂಗ್‌ಸ್ಟನ್' ಅಣುವನ್ನು ಎರಡು ಮಿಲಿಯಪಟ್ಟು ಹಿಗ್ಗಿಸಿ **(Magnify)** ನೋಡಿದಲ್ಲಿ ಅದು ನಮ್ಮ ಆಕಾಶದ ನಕ್ಷತ್ರ ಪುಂಜದಂತೆ ಗೋಚರಿಸುವುದು.

ಹದಿನೆಂಟನೇ ಶತಮಾನದಲ್ಲಿ, ಈರಷ್ಟ್ ಎಫ್.ಚ್ಲಾಡ್ನಿ ಎಂಬ ವಿಜ್ಞಾನಿ, ಒಂದು ಮರಳು ಪದರು ಹರಡಿದ ಲೋಹದ ತಟ್ಟೆಯನ್ನು ಒಂದು ಪಿಟೀಲಿಗೆ ಜೋಡಿಸಿ ಅದರ ತಂತಿಗಳ ಮೇಲೆ ಕಮಾನು**(Bow)** ಆಡಿಸಿದ್ದಾದರೆ ತಟ್ಟೆಯ ಮೇಲಿರುವ ಮರಳು ಕಣಗಳು ತಮ್ಮಷ್ಟಕ್ಕೆ ತಾವೇ ಪ್ರಾಣವಿರುವ ಜೀವಿಯ ಆಕಾರವನ್ನು ಪಡೆಯುತ್ತವೆ ಎಂಬುದನ್ನು ಕಂಡುಕೊಂಡ. ಅಂತೆಯೇ, ನಮ್ಮ ವಿಶ್ವದಲ್ಲಿರುವ ಪ್ರತಿಯೊಂದು ಆಕೃತಿ ಮತ್ತು ರಚನೆಗಳಿಗೂ ಸೂಕ್ಷ್ಮವಾದ ಜಾಳಿಗೆ ಅಥವಾ ಸಂಬಂಧ ಕಂಡುಬಂದಿದೆ ಎಂಬುದನ್ನು ಅರಿತನು.

ಇದೇ ರೀತಿ, "ಯಾವುದೇ ಘಟನೆಯ ಕುರಿತು ಈ ರೀತಿಯಾಗಿಯೆ ಯೋಚಿಸಬಹುದಲ್ಲವೇ? ಯಾವುದೇ ಒಂದು ಕಾಲದ ಘಟನೆಯ ನಿದರ್ಶನದಲ್ಲಿ ಆಗುವ ಒಂದು ಸೂಕ್ಷ್ಮ ಬದಲಾವಣೆ, ಆ ನಿದರ್ಶನದ ಮಾದರಿಯನ್ನೇ ಒಟ್ಟಾರೆಯಾಗಿ ಬದಲಾಯಿಸಿ, ಅದು ಒಂದು ಹೊಸ ನಮೂನೆಯಾಗಿಯೇ ನಿಲ್ಲಬಹುದಾದರೆ, ನಾಣ್ಯಗಳನ್ನೋ ಅಥವಾ ಕವಡೆಗಳನ್ನೋ ಚಿಮ್ಮಿ ಪ್ರಶ್ನೆಗಳಿಗೆ ಬರುವ ಉತ್ತರ ಸಹ, ಮನುಷ್ಯನ ಪ್ರಶ್ನೆ ಕಾಲದ ಪರಿಸ್ಥಿತಿಯನ್ನು ಒಟ್ಟಾರೆ ಬದಲಾಯಿಸಿ, ಅವನನ್ನು ಒಂದು ಹೊಸ ಪರಿಸ್ಥಿತಿಗೆ ಕೊಂಡೊಯ್ಯುವುದು ಸಾಧ್ಯವಿಲ್ಲವೆ?" ಎಂದು ಮತ್ತು "ಈ ನೂತನ ನಿದರ್ಶನಗಳು, ಎಲ್ಲಿಯೋ ದೂರದಲ್ಲಿ ಜರುಗಿದ, ಬೇರೆ-ಬೇರೆ ಘಟನೆಗಳಿಗೆ ಮತ್ತು ಸಂದರ್ಭಗಳಿಗೆ, ಸಂಬಂಧ ಕಲ್ಪಿಸಬಲ್ಲವೇ?" ಮುಂತಾದ ಪ್ರಶ್ನೆಗಳು ಕಾರ್ಲ್‌ಜಂಗ್‌ನನ್ನು ಕಾಡುತ್ತಿದ್ದವು. ಅಂತಿಮವಾಗಿ ಆತ ಈ ಪ್ರಶ್ನೆಗಳಿಗೆ ಉತ್ತರ ಕಂಡುಕೊಂಡ. ಅವನ ಸಿದ್ಧಾಂತದಂತೆ--

"ಆಳವೂ ಸಂಕೀರ್ಣವೂ ಆದ ಮಾನವನ ಮನಸ್ಸು ಒಂದು ಸಂಗ್ರಹಿತ ಸುಪ್ತಾವಸ್ಥೆಯ ರೂಪದಲ್ಲಿರುತ್ತದೆ. ಈ ಸಂಗ್ರಹ ತಲೆ-ತಲಾಂತರದಿಂದ ವಂಶಪಾರಂಪರ್ಯವಾಗಿ ಬಂದು, ನೆನಪುಗಳು ಮನುಷ್ಯನ ಸುಪ್ತಮನಸ್ಸಿನಲ್ಲಿ ಆಳವಾಗಿ ಬೇರೂರಿದೆ. ಈಗಿನ ವೈಯಕ್ತಿಕ ಅನುಭವಗಳು, ಈ ಸಂಗ್ರಹಕ್ಕೆ ಹೊರತಾಗಿವೆ. ಆದರೆ, ಮುಂದಿನ ಜನಾಂಗದಲ್ಲಿ ಈಗಿನ ಅನುಭವಗಳು ಸಂಗ್ರಹದ ಕೋಠಿಗೆ ಸೇರುತ್ತವೆ. ಈ ಮನುಷ್ಯನ ಸುಪ್ತಮನಸ್ಸಿನಲ್ಲಿನ ಪ್ರಾಚೀನ ಸಂಗ್ರಹ, ಸಾವಿರಾರು ವರ್ಷಗಳಿಂದ, ವಂಶಪಾರಂಪರ್ಯವಾಗಿ ಛಟ್ಟಿ ಇಳಿಸಿದ ನೆನಪುಗಳ ವರ್ಗಾವಣೆ ಎನ್ನಬಹುದು. ಇದೆಲ್ಲಾ ಪ್ರಾಚೀನ ಮಾನವ ಜೀವಿಗಳ ಸಾಮಾನ್ಯ ಅನುಭವಗಳಿಂದ ಶೇಖರಗೊಳ್ಳುತ್ತ ಬಂದಂಥವಾಗಿವೆ. ಆದರೆ ಅವುಗಳನ್ನು ನಾವು ನಮ್ಮ ಬಾಯಿ ಮಾತಲ್ಲಿ ಹೇಳಲಾಗದಿದ್ದರೂ, ನಮಗೆ ನಿಲುಕದ ಸಂಕೇತ ರೂಪವಾಗಿ, ಪುರಾಣ ಕತೆಗಳಲ್ಲಿ ಬರುವ ಚಿಹ್ನೆ ಅಥವಾ ಆಕೃತಿಗಳ ರೂಪದಲ್ಲಿ ಸುಳಿವು ನೀಡುತ್ತವೆ. ಮಾನವ ಯಾವುದೋ ಒತ್ತಡದ ಸನ್ನಿವೇಶಗಳಲ್ಲಿದ್ದಾಗ, ಅಪಾಯದ ಪರಿಸ್ಥಿತಿ ಎದುರಾದಾಗ, ಮನಸ್ಸಿನ ತಿಕ್ಕಾಟಗಳಲ್ಲಿ, ಸಾವಿನ ಸಮಯದಲ್ಲಿ, ಪ್ರೀತಿ-ಪ್ರೇಮಗಳ ಉತ್ಕಟತೆಗಳಲ್ಲಿ, ಈ ಪ್ರಾಚೀನ ಸಂಗ್ರಹಿತ ಸುಪ್ತಾವಸ್ಥೆಯಲ್ಲಿನ ನೆನಪುಗಳು ಅಥವಾ ಅನುಭವಗಳು, ಅವನ ನಡೆವಳಿಕೆಯಲ್ಲಿ ಬಂದು ದಾರಿ ದೀಪವಾಗಿ ನಿಲ್ಲುತ್ತವೆ."

ಕಾರ್ಲ್ ಜಂಗನ ಅನಿಸಿಕೆಯಂತೆ, ಯಾವ ಮಾನವ ಘಟನೆಯೂ 'ಆಕಸ್ಮಿಕ'ವಲ್ಲ. ಮಾನವ, ಈ ಪ್ರಾಚೀನ ಸಂಗ್ರಹಿತ, ಸುಪ್ತಮನಸ್ಸಿನಲ್ಲಿನ ಅನುಭವಗಳನ್ನು ಗುರುತಿಸಿ ತನ್ನನ್ನು ತಾನು ತಿಳಿದುಕೊಂಡು ಪೂರ್ಣತ್ವವನ್ನು ತಲುಪುವತ್ತ ಸ್ವಯಂ ಸಾಧನೆ ಮಾಡಿಕೊಳ್ಳಬಹುದಾಗಿದೆ. ಮನುಷ್ಯನ ಸುಪ್ತ ಮನಸ್ಸಿನ ಆಳತೆಗೋಲಿಗೆ ಮತ್ತು ಪ್ರಕೃತಿಯ ಮಹಾ ಶಕ್ತಿಗಳಿಗೆ ಮಾನವ ಜನಾಂಗ ಹತ್ತಿರವಾಗಿದೆ. ನಾವು ಈಗ ಪ್ರಕೃತಿಯಿಂದ ದೂರ ಸರಿ

ಯುತ್ತಿರುವ ಕಾರಣ, ಈ ಅತೀಂದ್ರಿಯ ಶಕ್ತಿಯನ್ನು ಕಳೆದುಕೊಂಡಿದ್ದೇವೆ ಎನ್ನಬಹುದು. ಹಾಗಾಗಿ ಮನುಷ್ಯ ತನ್ನ ಚೇತನವನ್ನು ಕಳೆದುಕೊಂಡಿದ್ದಾನೆ. ಮನುಷ್ಯ ಪ್ರಕೃತಿಗೆ ಹತ್ತಿರವಾಗಿ ಆ ಮೂಲಕವಾಗಿ ಅತೀಂದ್ರಿಯ ಶಕ್ತಿಯನ್ನು ಗಳಿಸಿಕೊಂಡಲ್ಲಿ ಏನೆಲ್ಲವೂ ಸಾಧ್ಯವಾಗಬಹುದಲ್ಲವೆ? ಹದಿಮೂರನೆಯ ಶತಮಾನದಲ್ಲಿ ಅತೀಂದ್ರಿಯ ಶಕ್ತಿಯುಳ್ಳವನಾಗಿದ್ದ ಆಲ್ಬರ್ಟ್ ಮ್ಯಾಗ್ನಸ್ ಎಂಬಾತ-

"ಪ್ರತಿಯೊಬ್ಬನೂ ಮಹತ್ತಾದ ಅಧಿಕತ್ವಕ್ಕೆ ಇಳಿದುದಾದಲ್ಲಿ, ವಿಶ್ವದ ಎಲ್ಲ ವಸ್ತುಗಳ ಮೇಲೂ ಈ ಶಕ್ತಿಯ ಮೂಲಕ ಪ್ರಭಾವ ಬೀರಬಹುದು," ಎಂದು ತಿಳಿಸಿದ.

ಇದೇ ರೀತಿಯಾಗಿ ನಾವು ಮನಸ್ಸಿನ ಆಳವಾದ ಸುಪ್ತಾವಸ್ಥೆಗೆ ಪ್ರವೇಶ ಮಾಡಿದ್ದಾದರೆ, ಅಲ್ಲಿನ ಪ್ರಾಚೀನ ಸಂಗ್ರಹಿತ ಅನುಭವಗಳಿಗೆ ಮರು ಚೇತನಗೊಳಿಸಿ, ಅತೀಂದ್ರಿಯತೆ ಸಂಪಾದಿಸಬಹುದೆಂದು ಕಾರ್ಲ್ ಜಂಗ್ ಪ್ರತಿಪಾದಿಸಿದ.

ಇದು ಒಂದು ರೀತಿಯಲ್ಲಿ ವಿದ್ಯುತ್ ಸಂಪರ್ಕದ ರೀತಿಯೇ ಎನ್ನಬಹುದು. ಸರ್ಕ್ಯೂಟ್‌ನ ಸಂಪರ್ಕವಾಗದಿದ್ದರೆ ಯಾವುದೇ ಶಕ್ತಿ ಪ್ರವಹಿಸಲಾರದು. ಒಮ್ಮೆ ಸಂಪರ್ಕ ಕಲ್ಪಿಸಿದ್ದಾದಲ್ಲಿ ತಕ್ಷಣವೇ ವಿದ್ಯುಚ್ಛಕ್ತಿ ತಂತಿಯ ಮೂಲಕ ಹರಿಯುವಂತೆ, ಮನುಷ್ಯನ ಸ್ವಂತ ಅನುಭವಗಳ ಮೂಲಕ ಆಳವಾಗಿರುವ ಸುಪ್ತಮನಸ್ಸಿನ ಪ್ರಾಚೀನ ಸಂಗ್ರಹವನ್ನು ಮಾನಸಿಕ ಮಟ್ಟದಲ್ಲಿ ಸಂಪರ್ಕಿಸಿದ್ದಾದಲ್ಲಿ, ಅತೀಂದ್ರಿಯ ಗ್ರಹಣ ಶಕ್ತಿಯನ್ನು ಪಡೆಯಬಹುದು ಎಂದು ತಿಳಿಸಿದ.

ಇಂತಹ ಸಂಪರ್ಕ ಮನುಷ್ಯನಿಗೂ ಪ್ರಕೃತಿಗೂ ಹಾಗೂ ತನ್ನ ಜೀವನಕ್ಕೂ ಚೇತನ ರೂಪದ ಅರ್ಥಪೂರ್ಣ ಸಂಬಂಧಗಳನ್ನು ಕಲ್ಪಿಸಬಲ್ಲದು. ಈ ಶಕ್ತಿಯನ್ನು ಸಂಪಾದಿಸುವ ವ್ಯಕ್ತಿಯೇ ಮತ್ತೊಬ್ಬರ ಮನಸ್ಸಿನ ಗುಟ್ಟುಗಳನ್ನು ಮತ್ತು ಇಂಗಿತಗಳನ್ನು ಅರಿಯುವ ಜ್ಞಾನ ದೃಷ್ಟಿ ಪಡೆಯಬಲ್ಲವನಾಗುತ್ತಾನೆ.

ಪ್ರಕೃತಿಯ ವೈಶಿಷ್ಟ್ಯ ಹಾಗೂ ಆಕರ್ಷಣೆಯ ಕೊಡುಗೆಗಳಲ್ಲಿ ಒಂದು ನಾವು ಕಾಣುವ ಚಕ್ರಾಕಾರದ ಸುಳಿ ಅಥವಾ ತಿರುಗಣೆ ನಮ್ಮ ವಿಶ್ವದ ಆಕಾಶಗಂಗೆ ಕೊನೆಗಾಣದ ಅಂತರದಲ್ಲಿ ಸುಳಿಯಾಕಾರದಲ್ಲಿ ಎಡದಿಂದ ಬಲಕ್ಕೆ ಸುತ್ತುತ್ತಿದೆ ಎಂಬುದನ್ನು ನಾವು ಅರಿತಿದ್ದೇವೆ. ಇದರ ಪ್ರಭಾವವನ್ನು ನಮ್ಮ ಸುತ್ತಮುತ್ತಲಿನ ದೈನಂದಿಕ ಬದುಕಿನಲ್ಲಿಯೂ ನೋಡುತ್ತೇವೆ. ತಗ್ಗಿನೆಡೆ ಹರಿಯುವ ನೀರು, ಸುಳಿಯಾಕಾರದಲ್ಲಿ ಎಡದಿಂದ ಬಲಕ್ಕೆ ತಿರುಗುವುದನ್ನು ನೋಡಬಹುದು. ನಮ್ಮ ನೆತ್ತಿಯ ಮೇಲೆ ಕೂದಲು ಸುಳಿಯಾಕಾರದಲ್ಲಿ ಎಡದಿಂದ ಬಲಕ್ಕೆ ತಿರುಗಿರುವುದನ್ನು ಕಾಣಬಹುದು. ಕಾಡಿನಲ್ಲಿ ನಾವು ಕಾಣುವ 'ಡೈಸಿ' ಹೂವಿನಲ್ಲಿ 'ಎರಡು ಸುಳಿ'ಗಳಿರುತ್ತವೆ. ಜೀವದ ಉತ್ಪತ್ತಿಗೆ ಮೂಲಭೂತವಾಗಿ ಬೇಕಾದ ಡಿಎನ್‌ಎ ಅಣುಗಳೂ ಎರಡು ಸುಳಿಗಳ ಆಕಾರದಲ್ಲಿ ಸಂಘಟಿತವಾಗಿವೆ. ಹೀಗೆ ಪ್ರಕೃತಿ ತನ್ನ ಆಕೃತಿಗಳ ಮತ್ತು ಮಾದರಿಗಳ ಮೂಲಕ ತನ್ನದೇ ಒಂದು ಭಾಗವಾಗಿರುವ ಮಾನವನ ಮೇಲೆ ದೈಹಿಕವಾಗಿಯೂ ಮಾನಸಿಕವಾಗಿಯೂ ಪ್ರಭಾವ ಬೀರಿ, ಮನುಷ್ಯನ ಮತ್ತು ವಿಶ್ವದ ಪರಸ್ಪರ ಸಂಬಂಧಗಳನ್ನು ದೃಢೀಕರಿಸುವುದನ್ನು ಕಾರ್ಲ್ ಜಂಗ್ ಅರಿತ. ಈ ತಿಳಿವಳಿಕೆಯ ಆಧಾರದ ಮೇಲೆ ಮಾನವನ ಜಾಗೃತ ಮನಸ್ಸು, ವಿಶಾಲವಾದ ಮತ್ತು ಅಭಿವೃದ್ಧಿ ಹೊಂದುತ್ತಿರುವ ಸುಪ್ತಮನಸ್ಸಿನ ಪ್ರಪಂಚವನ್ನು ಸಂಪರ್ಕಿಸಿ, ಓರ್ವ ವ್ಯಕ್ತಿಯ ಬದುಕಿನಲ್ಲಿ ಹೇಗೆ ಪ್ರಮುಖಪಾತ್ರವನ್ನು ವಹಿಸುತ್ತದೆ ಎಂಬುದನ್ನು ಪ್ರತಿಪಾದಿಸಿದ. ●

---



ನ್ಸೆಸ್ ಓಲ್ಡ್‌ಫೀಲ್ಡ್ ಎಂಬ ೫೫ ವರ್ಷದ ಬ್ರಿಟಿಶ್ ಶಿಕ್ಷಕಿಯೊಬ್ಬಳು ಮಕ್ಕಳನ್ನು ಹದ್ದುಬಸ್ತಿಯಲ್ಲಿಡಲು ಕೂಗಿಕೊಂಡು ಕೂಗಿಕೊಂಡು ಧ್ವನಿಯನ್ನೇ ಕಳೆದುಕೊಂಡಳು. ಮಧುರವಾದ ಆಕೆಯ ಧ್ವನಿ ಪಿಸುಧ್ವನಿಯ ಮಟ್ಟಕ್ಕಿಳಿಯಿತು. ಈ ಕಾರಣದಿಂದ ನಿವೃತ್ತಗೊಳ್ಳಲು ಸರಕಾರ ಒತ್ತಾಯಿಸಿತು. ಆಕೆ ಕೋರ್ಟಿಗೆ ಹೋದಳು. ಅದು 'ಕೈಗಾರಿಕಾ ನಷ್ಟ'ವೆಂದು ತೀರ್ಪಿತ್ತ ಕೋರ್ಟು ಆಕೆಗೆ ಅದಕ್ಕಾಗಿ ಬೃಹತ್ ಮೊತ್ತದ ಪರಿಹಾರ ಧನ ನೀಡಬೇಕೆಂದು ಆದೇಶಿಸಿತು.




ನಾನು ೧೬-೧೭ ವರುಷದವನಿರುವಾಗ ಒಮ್ಮೆ ನನ್ನ ಸ್ನೇಹಿತನ ಜೊತೆ ಅವನ ಊರಿಗೆ ಹೋಗಿದ್ದೆ. ಆ ಊರು ಕನಕಪುರ ತಾಲೂಕಿನ ಒಂದು ಸಣ್ಣ ಹಳ್ಳಿ. ಕನಕೋಟೆ ಕಾಡಿನ ಅಂಚಿನಲ್ಲಿದ್ದು ಸುಂದರ ನೈಸರ್ಗಿಕ ಪರಿಸರ ಹೊಂದಿರುವಂಥದು. ನಾವು ಊರು ತಲುಪಿದಾಗ ಸಂಜೆ ಆಗಿತ್ತು. ಈಗಿನಂತೆ ವಿದ್ಯುಚ್ಛಕ್ತಿ ದೀಪಗಳಿಲ್ಲದೆ ತಿಂಗಳ ಬೆಳಕಿನಲ್ಲಿ ಆಗೊಮ್ಮೆ ಈಗೊಮ್ಮೆ ಪಕ್ಕದಲ್ಲೇ ಇದ್ದ ಕಾಡಿನಿಂದ ಕೇಳಿಬರುತ್ತಿದ್ದ ಕಾಡುಕೋಳಿಗಳ ಕೂಗು ಹಾಗೂ ಇತರೆ ಪ್ರಾಣಿಗಳ ಶಬ್ದಗಳನ್ನು ಬಿಟ್ಟರೆ ನಿಶ್ಯಬ್ದತೆಯ ಮಡಿಲಲ್ಲಿ ನಿದ್ರಿಸಿರುವಂತೆ ಕಾಣುತ್ತಿತ್ತು. ನನ್ನ ಸ್ನೇಹಿತರ ಸಂಬಂಧಿಕರ ಮನೆಯಲ್ಲಿ ಊಟ ಮಾಡಿ, ಬೆಳಗಿನ ಮಬ್ಬಿನಲ್ಲೇ ಕಾಡಿಗೆ ಹೋಗಿ, ಕಾಡು ಹಕ್ಕಿಗಳನ್ನು ಹಿಡಿಯಬೇಕೆಂದುಕೊಂಡು ಮಲಗಿದೆವು. 'ಓಟೇರ್' ಎಂದು ಕರೆಯಲ್ಪಡುವ ಆ ಹಕ್ಕಿಯನ್ನು ಹಿಡಿದುತಂದು ಅದರ ಮಾಂಸದಿಂದ ಅಡಿಗೆ ಮಾಡಿ ಅಂದು ರಾತ್ರಿಯೆ ನಮಗೆ ಉಣಬಡಿಸಿದ್ದರು.

ಮಾರನೆ ದಿನ ಬೆಳಿಗ್ಗೆ ದಾರಿಯಲ್ಲಿ ಮೂಡಲ ಬಾನಿನಲ್ಲಿ ಹರಡಿದ್ದ ಹೊಂಬಣ್ಣದ ವಿವಿಧ ವಿನ್ಯಾಸಗಳನ್ನು ನೋಡಿ ಆನಂದಿಸುತ್ತಾ, ಸೂರ್ಯೋದಯದ ಕಂಪನ್ನು ಹೀರುತ್ತಾ, ಕಾಡು ಕೋಳಿ, ಮೈನಾ, ಗಿಣಿ, ಕೋಗಿಲೆ ಮತ್ತು ಇತರ ಪಕ್ಷಿಗಳ ಕೂಗು ಕೇಳುತ್ತಾ, ಪೊದೆ ಪೊದೆಗಳನ್ನು ಕೈಯಿಂದ ಜರುಗಿಸಿ, ಪೊದೆಗಳಡಿ ಕಾಡು ಪಕ್ಷಿಗಳನ್ನು ಹುಡುಕುತ್ತಾ ಹೊರಟೆವು.

ಹೀಗೆ ನಾನು ಮುಂದೆ ಮುಂದೆ ಹೋಗುತ್ತಾ, ಅಕ್ಕಪಕ್ಕದಲ್ಲಿನ ಪೊದೆಗಳನ್ನು ಕೈಯಿಂದ ಸರಿಸಿ ಇಣಕಿ ನೋಡುತ್ತಾ ಸಾಗಿದ್ದೆ. ಸ್ನೇಹಿತ ನನ್ನನ್ನೇ ಹಿಂಬಾಲಿಸುತ್ತಿದ್ದ. ನಾನು ಒಂದು ಪಕ್ಕದಲ್ಲಿನ ಪೊದೆಯನ್ನು ನೋಡಿದೆ. ಅದು ಗುಡಿಸಲಿನೋಪಾದಿ ಇದ್ದು ಅದರ ಒಂದು ಪಕ್ಕದ ಕೆಳಗಡೆ ಸ್ವಲ್ಪ ಸಣ್ಣ ಬಾಗಿಲಿನೋಪಾದಿ ತೆರೆದಿತ್ತು. ನನ್ನ ತಲೆ ಮತ್ತು ದೇಹದ ಸ್ವಲ್ಪ ಭಾಗವನ್ನು ಆ ಪೊದೆಯ ಕಿಂಡಿಯಲ್ಲಿ ತೂರಿಸಿ ಇಣಕಿ ಹಕ್ಕಿಗಳಿವೆಯೇನೋ ಎಂದು ಕಣ್ಣುಹಾಯಿಸಿದಾಗ ಅದರಲ್ಲಿ ಎರಡು ಹಾವುಗಳು ಒಂದನ್ನೊಂದು ಸುತ್ತಿಕೊಂಡು ನೆಲದಿಂದ ಸುಮಾರು ಎರಡು ಅಡಿ ಎತ್ತರಕ್ಕೆ ನಿಂತಿದ್ದುವು! ತಕ್ಷಣ ಈ ರೀತಿ ಹಾವುಗಳು ಬೆರೆತು ರತಿಕ್ರೀಡೆ ಆಡುತ್ತಿರುವುದನ್ನು ನೋಡಿದರೆ ಅವುಗಳಿಗೆ ಕೋಪ ಬಂದು ಅಟ್ಟಿಸಿಕೊಂಡು ಬರುವವು ಎಂದು ಇತರರು ಹೇಳುತ್ತಿದ್ದುದು ಜ್ಞಾಪಕಕ್ಕೆ ಬಂತು. ಕೂಡಲೇ ಮಾತಾಡದೇ ಊರಿನ ಕಡೆಗೆ ದೌಡಾಯಿಸಿದೆ. ಕಾರಣ ತಿಳಿಯದ ನನ್ನ ಸ್ನೇಹಿತನೂ ನನ್ನ ಹಿಂದೆಯೇ ಧಾವಿಸಿದ. ಒಂದು ಅರ್ಧ ಫರ್ಲಾಂಗ್ ದೂರ ಓಡಿದಮೇಲೆ ಹಿಂದಿರುಗಿ ನೋಡಿದೆ. ಒಂದು ಹಾವು ನಮ್ಮ ಹಿಂದೆ ಅಟ್ಟಿಸಿಕೊಂಡು ಬರುತ್ತಿರುವುದು ಕಂಡಂತಾಯಿತು. ಮತ್ತೂ ಜೋರಾಗಿ ಓಟಕಿತ್ತೆವು. ಊರಿನ ಹತ್ತಿರಕ್ಕೆ ಬಂದು ಮತ್ತೆ ತಿರುಗಿ ನೋಡಿದೆವು. ಯಾವ ಹಾವೂ ಕಾಣಲಿಲ್ಲ. ಈ ಘಟನೆಯನ್ನು ಜ್ಞಾಪಿಸಿಕೊಂಡರೆ ಈಗಲೂ ಮೈನವಿರೇಳುತ್ತದೆ.

• ಸಿ.ಕೆ. ರಾಮು

ದಕ್ಷಿಣ ಕನ್ನಡ ಜಿಲ್ಲೆಯ ಉಜಿರೆಯ ಸಿದ್ಧವನದಲ್ಲಿದ್ದ ಸರಕಾರಿ ಬುನಾದಿ ಶಿಕ್ಷಣ ತರಬೇತಿ ಶಾಲೆಯಲ್ಲಿ ಶಿಕ್ಷಕರಾಗಿದ್ದಾಗ ೧೯೫೪ರಲ್ಲಿ ನಾವು ಮೂವರು ಶಿಕ್ಷಕರು ಜೋಗ, ಬೇಲೂರು ಮತ್ತು ಹಳೆಬೀಡುಗಳನ್ನು ನೋಡಿಕೊಂಡು ಬರಲು ಹೋಗಿದ್ದೆವು. ಆಗ ರಾತ್ರಿಯನ್ನು ಕಳೆಯಲು ಜೋಗದಲ್ಲಿ ಸರಕಾರಿ ಗೆಸ್ಟ್‌ಹೌಸಿನಲ್ಲಿ ರೂಮು ಬಾಡಿಗೆಗೆ ಪಡೆದು ತಂಗಿದೆವು. ಮರುದಿನ ಬೆಳಗ್ಗೆ ಆರು ಗಂಟೆಗೆ ಬಸ್ಸಿಗೆ ಅವಸರವಸರವಾಗಿ ಹೊರಟಾಗ ರೂಮುಕೊಟ್ಟ ಕಾವಲುಗಾರ ಸಿಗದಿದ್ದರಿಂದ ಒಂದೂವರೆ ರೂಪಾಯಿ ಬಾಡಿಗೆ ಕೊಡಲು ಸಾಧ್ಯವಾಗದೆ ಹಾಗೆಯೆ ಹೋಗಿಬಿಟ್ಟೆವು.

ಮರುದಿನ ಡಾ. ಶಿವರಾಮ ಕಾರಂತರು ಅದೇ

ಗೆಸ್ಟ್‌ಹೌಸಿನಲ್ಲಿ ಬಾಡಿಗೆಗೆ ನಿಂತಾಗ, ಕಾವಲುಗಾರ ದಕ್ಷಿಣಕನ್ನಡ ಜಿಲ್ಲೆಯವರು ಬಾಡಿಗೆ ಕೊಡದೆ ಹೋದುದಾಗಿ ದೂರಿಕೊಂಡ. ಡಾ. ಕಾರಂತರು ಕೂಡಲೇ ಆ ಹಣವನ್ನು ತಾವೇ ಕೊಟ್ಟು ತಮ್ಮ ಜಿಲ್ಲೆಯ ಅಜ್ಞಾತ ಪ್ರಯಾಣಿಕರ ಋಣ ತೀರಿಸಿದರು.

ಈ ಕುರಿತು ಅನಂತರ ಯಾವುದೋ ಶಾಲಾ ವರ್ಧಂತಿಯಲ್ಲಿ ಅವರು ಪ್ರಸ್ತಾಪಿಸಿದ್ದು ನಮಗೆ ಗೊತ್ತಾದಾಗ ಬಾಡಿಗೆ ತೀರಿಸದೆ ಹಾಗೆಯೇ ಬಂದದ್ದಕ್ಕೆ ಪಶ್ಚಾತ್ತಾಪವಾಯಿತಲ್ಲದೆ ಡಾ. ಕಾರಂತರ ಹೃದಯ ವೈಶಾಲ್ಯ ಹಾಗೂ ತಮ್ಮ ಜಿಲ್ಲೆಯ ಮೇಲಿನ ಅಭಿಮಾನದಿಂದಾಗಿ ಅವರ ಮೇಲೆ ಅಪಾರ ಗೌರವ ಉಂಟಾಯಿತು.

● ಪಿ.ವಿ. ಭಟ್

ನನ್ನ ಸ್ನೇಹಿತೆಯೊಬ್ಬಳು ಖಾದ್ಯ ತೈಲ ಉತ್ಪಾದನಾ ಕಂಪನಿಯೊಂದರಲ್ಲಿ ಉದ್ಯೋಗಿ. ತಿಂಡಿ ತಿನಿಸುಗಳನ್ನು ಕರಿಯಲು ಉಪಯೋಗಿಸುವ ಎಣ್ಣೆಯನ್ನು ಹೆಚ್ಚಾಗಿ ಪ್ರಚಾರ ಮಾಡುವ ಉದ್ದೇಶವೇ ಆ ಕಂಪನಿಯ ಮುಖ್ಯ ಗುರಿಯಾಗಿದ್ದಿತು. ಜನಗಳಿಗೆ ಉಚಿತವಾಗಿ ಅದೇ ಎಣ್ಣೆಯಿಂದ ಜಾಮೂನು, ಪೂರಿ, ವಡೆಯನ್ನು ಕರಿದು ತೋರಿಸಿ ಉಚಿತವಾಗಿ ತಿನ್ನಲೂ ಕೊಡುತ್ತಿದ್ದರು. ನನ್ನ ಗೆಳತಿ ಈ ಕೆಲಸಕ್ಕೆ ನಿಯುಕ್ತಳಾಗಿದ್ದಳು. ಕ್ಯಾಂಟೀನು, ಮಹಿಳಾ ಸಂಘ ಸಂಸ್ಥೆಗಳಲ್ಲಿ ಇದರ ಉಚಿತ ಪ್ರದರ್ಶನ ನಡೆಸುತ್ತಿದ್ದಳು. ಈ ತೈಲಕ್ಕೆ ಒಳ್ಳೆಯ ಪ್ರಚಾರವೂ ದೊರಕಿದ್ದಿತು.

ಒಂದು ಸಲ ನಗರದ ಸುಪ್ರಸಿದ್ಧ ಮಹಿಳಾ ಸಮಾಜದ ಅಧ್ಯಕ್ಷಿಣಿಯಿಂದ ಖಾದ್ಯತೈಲದ ಡೆಮಾನ್‌ಸ್ಟ್ರೇಶನ್‌ಗೆ ಕೇಳಿಕೆ ಬಂದಿತು. ಕಂಪನಿಯವರು ಒಪ್ಪಿಕೊಂಡು ನನ್ನ ಗೆಳತಿಯನ್ನೇ ಡೆಮಾನ್‌ಸ್ಟ್ರೇಷನ್ ಮಾಡಲು ಕಳಹಿಸಿದರು. ಮಹಿಳಾ ಸಮಾಜದಲ್ಲಿ ನೀರು, ಜಾಗದ ವ್ಯವಸ್ಥೆ ಸರಿಯಿಲ್ಲದ್ದರಿಂದ ಅಧ್ಯಕ್ಷಿಣಿಯ ಮನೆಯಲ್ಲೇ ಮಾಡುವುದು ಎಂದು ಗೊತ್ತಾಗಿದ್ದಿತು. ಸುಮಾರು ೨೫೦ ಜನ ಸದಸ್ಯೆಯರು ಇದ್ದರೂ ಹಾಜರಿ ೫೦ ರಿಂದ ೬೦ರವರೆಗೆ ಇರುತ್ತದೆಂದೂ ಹೇಳಿದ್ದರು.

ಸರಿ, ನನ್ನ ಗೆಳತಿ ಸುಮಾರು ೫೦ ರಿಂದ ೬೦ ಜನರಿಗೆ ಆಗುವಷ್ಟು ಸಾಮಾನುಗಳನ್ನು ತೆಗೆದುಕೊಂಡು ಸಹಾಯಕಿಯೊಡನೆ ಟೆಂಪೋವಿನಲ್ಲಿ ಅಧ್ಯಕ್ಷಿಣಿಯ ಮನೆಗೆ ಹೋದಳು. ಡೆಮಾನ್‌ಸ್ಟ್ರೇಷನ್ ಮೂರು ಗಂಟೆಗೆ ಎಂದು ತಿಳಿಸಿದ್ದರೂ ಇನ್ನೂ ಯಾರೂ ಬಂದಿಲ್ಲವೆಂದು ಹೇಳಿದರು. ಅದೂ ಅಲ್ಲದೆ ಅವತ್ತು ಯಾವುದೋ ಒಂದು ಹಬ್ಬ ಬೇರೆ ಇದ್ದಿತು. ಅಧ್ಯಕ್ಷಿಣಿ, "ನೀವು ಎಲ್ಲಾ ಸಿದ್ಧಮಾಡಿಕೊಳ್ಳಿ. ಅಷ್ಟು ಹೊತ್ತಿಗೆ ಬರುತ್ತಾರೆ," ಎಂದರು. ನನ್ನ ಗೆಳತಿ ಎಲ್ಲಾ ಸಿದ್ಧಪಡಿಸಿಕೊಂಡಳು. ಕರಿಯಲೂ ಶುರುಮಾಡಿದಳು. ಅಧ್ಯಕ್ಷಿಣಿಯೂ ಸೇರಿ ೪-೫ ಜನ ಸದಸ್ಯೆಯರು ಮಾತ್ರ ಇದ್ದರು. ಅವರುಗಳಿಗೇ ಮಾಡುವ ವಿಧಾನವನ್ನೂ ತಿಳಿಸಿಕೊಟ್ಟಳು.

ಜಾಮೂನು, ಪೂರಿ, ಸಾಗು, ಚಿಪ್ಸ್ ಇಷ್ಟು ವಿಧಗಳನ್ನು ಮಾಡಿಕೊಂಡು ನನ್ನ ಗೆಳತಿ ಸದಸ್ಯೆಯರಿಗಾಗಿ ಕಾಯುತ್ತಾ ಕುಳಿತಳು. ಅಧ್ಯಕ್ಷಿಣಿ ಹೇಳಿದಂತೆ ಸುಮಾರು ೫೦-೬೦ ಜನಕ್ಕೆ ಆಗುವಷ್ಟು ತಿಂಡಿ ಮಾಡಿದ್ದಳು.

"ಡೆಮಾನ್‌ಸ್ಟ್ರೇಶನ್ ಮಾಡಿದ ದಾಖಲೆಗಾಗಿ ಸಮಾಜದ ಹೆಸರು, ವಿಳಾಸ, ಸ್ಥಳ, ಹಾಜರಿದ್ದ ಸದಸ್ಯೆಯರ ಹೆಸರು ಮುದ್ರಿತ ಫಾರಂಗಳಿಗೆ ಸಹಿಮಾಡಿ" ಎಂದು ಬಂದಿದ್ದ ಸದಸ್ಯೆಯರಿಗೆ ಫಾರಂ ಕೊಟ್ಟು ವಿನಂತಿಸಿಕೊಂಡಾಗ ಸದಸ್ಯೆಯರು ಕಕ್ಕಾಬಿಕ್ಕಿ. ಅವರಿಗೆ ಈ ಡೆಮಾನ್‌ಸ್ಟ್ರೇಶನ್ ವಿಷಯ ತಿಳಿದೇ ಇರಲಿಲ್ಲವಂತೆ. ಅಧ್ಯಕ್ಷಿಣಿ ಬಂದು ಫಾರಂ ತೆಗೆದುಕೊಂಡು, "ಮೇಡಂ, ನಾಳೆ ನಮ್ಮ ಸದಸ್ಯೆಯರ ಹತ್ತಿರ ಸಹಿ ಮಾಡಿಸಿ ನಿಮ್ಮ ಕಚೇರಿಗೆ ಕಳುಹಿಸಿಕೊಡುತ್ತೇನೆ," ಎಂದರಂತೆ. ನನ್ನ ಗೆಳತಿ "ಆಗಲಿ" ಎಂದು ತನ್ನ ಸಹಾಯಕಿಯ ಜೊತೆ ಹೊರಟಳು. ೫೦-೬೦ ಜನರಿಗಾಗುವ ರುಚಿ ರುಚಿಯಾದ ತಿಂಡಿ ಅಲ್ಲಿಯೇ ಇತ್ತು.

ಅಧ್ಯಕ್ಷಿಣಿಯ ಮನೆಯನ್ನು ದಾಟಿ ಬರುವಾಗ ಅವರ ಸಿಂಗರಿಸಿದ್ದ ಹಾಲ್‌ನಲ್ಲಿ ಬರೆದಿದ್ದ ಬರಹ ಕಣ್ಣಿಗೆ ಬಿದ್ದಿತು, "ಹ್ಯಾಪಿ ಬರ್ತ್‌ಡೇ ಟು ನೀತಾ."

● ಶಾರದಾ ಶಾಮಣ್ಣ

# ಮದನಕಾಮನ ಕಥೆಗಳು

೨

ಹೆಣ್ಣಿನ ದ್ವೇಷವು ಹಾವಿನ ವಿಷಕ್ಕಿಂತ ಭೀಕರವಾದುದು. ಹಾವಿನ ವಿಷ ವ್ಯಕ್ತಿಯ ಜೀವನವನ್ನೇ ನಾಶಗೊಳಿಸುತ್ತದೆ; ಆದರೆ ಹೆಣ್ಣಿನ ದ್ವೇಷ ಅವನ ಜೀವನದ ಭವಿಷ್ಯತ್ತನ್ನೇ ಕರಾಳ ಕತ್ತಲೆಯಲ್ಲಿ ಮುಳುಗಿಸಿಬಿಡುತ್ತದೆ.

ಕೆಣಕಿದ ಹೆಣ್ಣು ಹುಲಿಯಂತೆ ಗುರು ಪುತ್ರಿ ಕಡುಕೋಪದಿಂದ ರಾಜಕುವರ ಮದನಕಾಮನನ್ನು ಅಲ್ಲಿಯೇ ತೂರೆದು ಮನೆಗೆ ನಡೆದಳಷ್ಟೇ. ಮನೆ ಸಮೀಪಿಸುತ್ತಿದ್ದಂತೆಯೇ ಅವಳ ಕೋಪ ಸೇಡಿನಲ್ಲಿ ಮಾರ್ಪಾಡು ಹೊಂದತೊಡಗಿತು. ತನ್ನ ಇಚ್ಛೆಯನ್ನು ಹೃದಯಹೀನನಂತೆ ನಿರಾಕರಿಸಿದವನನ್ನು ಎಂತಾದರೂ ಕೊಂದೇ ತೀರಬೇಕೆಂದವಳು ದಂತೆ ಮಾಡಿ ತುಟಿ ಕಚ್ಚಿದಳು. ನಂತರ ಸೀರೆಯನ್ನು ತುಸು ಎತ್ತಿ ಹಿಡಿದುಕೊಂಡು ರಾಜಕುಮಾರನಿದ್ದ ದಿಕ್ಕಿಗೆ ಹೊರಳಿ ತಲೆ ಕೊಡಹಿದಳು. ನಂತರ ಒಮ್ಮೆಲೇ ಮೈಯಲ್ಲಿ ಗಾಳಿ ತುಂಬಿದವರಂತೆ ಭರ್ರನೆ ಹೊರಳಿ ಮುಚ್ಚಿದ ಬಾಗಿಲನ್ನೊದ್ದಾಗ ಬಾಗಿಲು ಧಡಾರನೆ ತೆರೆಯಿತು. ರಾಜಗುರು ಏನಾಯಿತೆಂದು ಮುಖ ಮೇಲೆತ್ತುವದರಲ್ಲಿಯೇ ತನ್ನ ಮುದ್ದಿನ ಮಗಳು ತನ್ನ ಪಾದಗಳೆರಡನ್ನೂ ಗಟ್ಟಿಯಾಗಿ ಹಿಡಿದುಕೊಂಡು ನೆಲದ ಮೇಲೆ ಸಾಷ್ಟಾಂಗ ಬಿದ್ದಿರುವದನ್ನು ಕಂಡು ಚಕಿತನಾದನು.

ಏನೋ ಆಗಬಾರದ್ದಾಗಿದೆಯೆಂದರಿತ ಅವನು ಎರಡೂ ಕೈಗಳಿಂದವಳನ್ನೆತ್ತಿ ನಡುಗುವ ದನಿಯಲ್ಲಿ,

# ರಾಜಕುಮಾರ ಪಾರಾದ

ನಿರ್ಧರಿಸಿದಳು. ತನ್ನ ಕಣ್ಣು ನೋಟದಿಂದಲೇ ಪಕ್ಷಿಯನ್ನು ಸುಟ್ಟುಹಾಕಿದ ಉಪನಿಷತ್ತಿನಲ್ಲಿಯ ವಟುವಿನಂತೆ ತನ್ನಲ್ಲಿಯೂ ತಪಃಶಕ್ತಿಯಿದ್ದಿದ್ದರೆ ರಾಜಕುಮಾರನನ್ನಲ್ಲಿಯೇ ಸುಟ್ಟು ಬೂದಿ ಮಾಡಿ ಬಿಡುತ್ತಿದ್ದೆನೆಂದುಕೊಂಡಳು. ರಾಜಕುಮಾರನು ಇಡೀ ರಾಜ್ಯಕ್ಕೆ ಒಡೆಯನಾಗಿದ್ದರೂ ಆ ಕ್ಷಣಕ್ಕೇ ಅವಳಿಗವನು ಮಳೆಹುಳಕ್ಕಿಂತ ಕ್ಷುಲ್ಲಕನೆನಿಸಿದನು.

ರಾಜಗುರುವಿನ ಮನೆಯ ಬೆಳಕಿಂಡಿಗಳಿಂದ ಹಾದು ಬರುತ್ತಿದ್ದ ಹೊಗೆಯನ್ನು ನೋಡಿದರೆ ಅವನಿನ್ನೂ ತನ್ನ ಪೂಜೆಯನ್ನು ಮುಗಿಸಿರಲಿಲ್ಲವೆಂಬುದು ಯಾರಿಗೂ ಕಂಡುಬರುವಂತಿತ್ತು. ಅವಳು ಮನೆಗೆ ಬಂದಾಗ ಪೂಜೆ ನಡೆದಿದ್ದ ಕೋಣೆಯ ಬಾಗಿಲಿನ್ನೂ ಮುಚ್ಚಿರುವುದನ್ನು ಕಂಡಳು. ಅರೆನಿಮಿಷ ಅಲ್ಲಿಯೇ ನಿಂತು ಏನೋ ವಿಚಾರಮಾಡಿ

"ಕಂದಾ ನಿನಗೇನಾಯಿತು? ಏನಾಯಿತು ಹೇಳಮ್ಮಾ" ಎಂದನು.

ಕಾರಣವು ತಿಳಿಯುವ ಮೊದಲೇ ತಂದೆ ತನ್ನ ಮಗುವಿನ ಬಗ್ಗೆ ಸಹಾನುಭೂತಿ ತಳೆಯಲಾರಂಭಿಸುವದೊಂದು ವೈಚಿತ್ರ್ಯವೆಂದೇ ಹೇಳಬೇಕು. ಅಂತೆಯೇ ಏನೋ ತನ್ನ ಮಗಳು ತುಟಿ ಬಿಚ್ಚುವ ಮೊದಲೇ ಅವಳ ಮನಃಸ್ಥಿತಿಯನ್ನು ರಾಜಗುರುವು ಊಹಿಸಿದ್ದನು.

ನೀರು ತುಂಬಿದ ಕಂಗಳಿಂದ ಆಕೆ ಹೇಳಲು ಪಕ್ರಮಿಸಿದಳು, "ಅಪ್ಪಾ ನಾನೇನು ಹೇಳಲಿ? ನಿಮ್ಮ ಶುಭ ಹೆಸರಿಗೆ ನಾನು ಅಳಿಸಲಾರದ ಕಪ್ಪು ಬಳಿದಿದ್ದೇನೆ. ನೀರು ತರಲು ನದಿಗೆ ಹೋಗುವೆನೆಂದು ನಾನು ನಿಮಗೆ ಆಗಲೆ ಹೇಳಲಿಲ್ಲವೆ? ಪೂಜೆಗೆಂದು ಎಲ್ಲ ಸಿದ್ಧತೆಗಳನ್ನೂ ಮಾಡಿರಿಸಿ

ಬೇಗನೇ ಮರಳಬೇಕೆಂದು ನಾನು ನದಿಗೆ ಹೋದೆನು. ಅಲ್ಲಿ ರಾಜಕುಮಾರನನ್ನು ಕಂಡು ಗೌರವಸ್ಥ ಸ್ತ್ರೀಯಂತೆ ಅವನಿಗೆ ತಲೆಬಾಗಿ ದೂರ ದಿಂದ ಹಾಯ್ದು ನಾನು ನೀರಿನೆಡೆಗೆ ನಡೆದೆ. ಆದರೆ ಅವನು ಸನಿಹದಲ್ಲಿ ಯಾರೂ ಇಲ್ಲದುದರ ಪ್ರಯೋಜನ ಪಡೆದುಕೊಂಡು ನನ್ನ ಹಿಂದೆಯೇ ಬಂದನು. ನಾನು ಕೂಗದಿರಲೆಂದು ನನ್ನ ಬಾಯನ್ನು ಗಟ್ಟಿಯಾಗಿ ಮುಚ್ಚಿ ತುಸು ದೂರದಲ್ಲಿಯ ಮರದ ನೆರಳಲ್ಲಿ ನನ್ನನ್ನೊಯ್ದು ಅಲ್ಲಿ ನನ್ನ ಮಾನಭಂಗ ಮಾಡಲವನು ಯತ್ನಿಸಿದನಾದರೂ ನಾನು ನಿರಾಕರಿಸಿದುದರಿಂದ ಕುಪಿತನಾದ ಅವನು ನನ್ನ ಬಟ್ಟೆಯನ್ನೆಲ್ಲ ಹರಿದು ನನ್ನನ್ನು ಸಿಕ್ಕಾಪಟ್ಟೆ ಹೊಡೆದು ಕಳಿಸಿದನು. ಓ! ತಂದೆಯೆ ಈಗ ನಾನೇನು ಮಾಡಲಿ? ನನ್ನನ್ನಾರು ಕೇಳುವವರು? ನಾನೆಲ್ಲಿ ಹೋಗಲಿ?"

ರಾಜಗುರುವಿನ ಸಿಟ್ಟು ನೆತ್ತಿಗೇರಲಾರಂಭಿಸಿತು.



ಅವನ ಬಿಳಿ ಮೀಸೆಗಳು ನಡುಗತೊಡಗಿದುವು; ಕಣ್ಣುಗಳು ಕೆಂಡ ಕಾರತೊಡಗಿದವು. ಅವನು ಪ್ರತಿರುದ್ರನೇ ಆದನು.

ಪ್ರೇಮವು ತರ್ಕಶಕ್ತಿಯನ್ನು ಕುಂಠಿತಗೊಳಿಸಿದರೆ ಸಿಟ್ಟು ವ್ಯವಹಾರ ಜ್ಞಾನವನ್ನೇ ತೊಡೆದು ಹಾಕುತ್ತದೆ. ಈಗ ರಾಜಗುರುವಿನ ಸ್ಥಿತಿಯೂ ಹಾಗೆಯೇ ಆಯಿತು. ತನ್ನ ಮಗಳಿಗೆ ಅನ್ಯಾಯವಾಗಿದೆ. ಅದನ್ನು ಮಾಡಿದವನು ಯಾವನೇ ಆದರೂ ಅವನಿಗೆ ತಕ್ಕ ಶಿಕ್ಷೆ ಆಗಲೇಬೇಕು ಎನ್ನುವದಿಷ್ಟೇ ಈಗ ಅವನ ಮನದೆದುರು ಕುಣಿಯತೊಡಗಿತ್ತು. ಅಂತೆಯೇ ಅವನು ದೇವತಾರ್ಚನೆಯನ್ನು ಕೂಡ ಪೂರ್ಣಗೊಳಿಸದೆ ಹಾಗೆಯೇ ಎದ್ದು ಬರಿಗಾಲಿನಿಂದಲೇ ಅರಮನೆಗೆ ನಡೆದನು. ದ್ವಾರಪಾಲಕರು ಅವನ ಅವತಾರವನ್ನು ನೋಡಿಯೇ ಬದಿಗೆ ಸರಿದು ದಾರಿಬಿಟ್ಟರು.

ಆಸ್ಥಾನದಲ್ಲಿಯ ಮಂತ್ರಿಗಳು ಹಾಗು ಇತರರು ಗೌರವಪೂರ್ವಕವಾಗಿ ಎದ್ದು ನಿಲ್ಲುತ್ತಿರುವಂತೆಯೆ ಅರಸ ಮಹೇಂದ್ರನು ಸಿಂಹಾಸನದಿಂದ ಕೆಳಗಿಳಿದು ಬಂದು ಗುರುವಿಗೆ ನಮಸ್ಕರಿಸಿ, "ಮಹಾರಾಜ, ಈ ರೀತಿ ಒಮ್ಮೆಲೇ ಧಾವಿಸಿ ಬಂದಿರುವುದಕ್ಕೆ ಕಾರಣವೇನು?" ಎಂದು ಕೇಳಿದನು.

"ನಾನು ಪಳಗಿಸಿದ ಹೋರಿ ನನ್ನೆದೆಯನ್ನೇ ಇರಿದಿದೆ. ಈಗ ನನಗನ್ಯಾಯವಾಗಿರುವುದು ನಿನ್ನ ಮಗನಿಂದ. ಅವನು ನನ್ನ ಮಗಳೊಂದಿಗೆ ಹೀನಾಯಾನವಾಗಿ ವರ್ತಿಸಿದ್ದಾನೆ. ನಿಮ್ಮ ರಾಜಗುರುವಾಗಿರುವುದಕ್ಕೆ ನನಗಿದೇ ಗುರುದಕ್ಷಿಣೆಯೇ? ಓ! ದೇವರೇ!"

"ಗುರುದೇವಾ, ನಿಮ್ಮ ಪಾದತಲದಲ್ಲಿ ನಾನು ಪಡೆದ ವಿದ್ಯೆ ವ್ಯರ್ಥವಲ್ಲ. ನನ್ನ ರಾಜ್ಯದಲ್ಲಿ ತಪ್ಪುಗಾರನು ಯಾರೇ ಇದ್ದರೂ ಅವನಿಗೆ ಶಿಕ್ಷೆ ಆಗಲೇಬೇಕು. ಕುಳಿತುಕೊಳ್ಳಿ. ಗುರುಗಳೆ, ನಿಮ್ಮ ಮಾತಿನ ಔಚಿತ್ಯವನ್ನು ನಾನು ಪ್ರಶ್ನಿಸುವುದಿಲ್ಲ. ತಪ್ಪುಗಾರನನ್ನು ಶಿಕ್ಷಿಸಲು ನಾನೀಗಲೇ ಆಜ್ಞೆ ವಿಧಿಸುತ್ತೇನೆ."

ಹೀಗೆಂದು ಹೇಳಿದವನೇ ಅರಸನು ಮಂತ್ರಿಯನ್ನು ಕರೆದು, ತನ್ನ ಮಗನನ್ನು ತಕ್ಷಣ ಹಿಡಿದು ತಂದು, ಅವನ ಹೀನ ಅಪರಾಧಕ್ಕಾಗಿ ಅವನ ತಲೆಯನ್ನು ಕಡಿದುಚೆಲ್ಲಬೇಕೆಂದು ಆಜ್ಞೆ ವಿಧಿಸಿದನು.

ದೈವವೇ ಪ್ರತಿಕೂಲವಿದ್ದಾಗ ಯಾರೇನು ಮಾಡಲು ಸಾಧ್ಯ? ಪ್ರತಿ ಬೃಹಸ್ಪತಿಯೇ ಎನಿಸಿದ್ದ ಮಂತ್ರಿಗೆ ಕೂಡ ಆಗ ತಪ್ಪು ಒಪ್ಪಿನ ವಿಚಾರವೇ ಹೊಳೆಯಲಿಲ್ಲ. ಅವನು ಮೂವರು ಕಟುಕರನ್ನು ಕರೆದು ರಾಜಾಜ್ಞೆಯನ್ನು ತಕ್ಷಣ ಪೂರೈಸುವಂತೆ ಆಜ್ಞಾಪಿಸಿದನು!

ರಾಜಕುಮಾರ ಮದನಕಾಮನನ್ನು ಹುಡುಕಲು ಕಟುಕರಿಗೇನೂ ಹೆಚ್ಚು ಸಮಯ ಹಿಡಿಯಲಿಲ್ಲ. ಅವನು ನದಿಯ ದಂಡೆಯ ಮೇಲೆ ಅರಮನೆಯಲ್ಲಿ ನಡೆದ ಕೋಲಾಹಲದ ಕಲ್ಪನೆ ಕಿಂಚಿತ್ತಾದರೂ ಇಲ್ಲದೆ ತನ್ನ ಮಿತ್ರ ಚಾತುರ್ಯನ ಬರವನ್ನೇ ಎದುರು ನೋಡುತ್ತ ಮರವೊಂದರ ನೆರಳಲ್ಲಿ ಪವಡಿಸಿದ್ದನು. ಅಂತೆಯೆ ಕಟುಕರು ತನ್ನೆದುರು ಬಂದು ನಿಂತು ವಂದಿಸಿದಾಗ ಅವನಿಗೆ ಆಶ್ಚರ್ಯವೇ ಆಯಿತು. "ನನ್ನಿಂದ ನಿಮಗೇನಾಗಬೇಕಿದೆ?" ಎಂದು ವಿಚಾರಿಸಿದನು. ಅವನ ಪ್ರಶ್ನೆಗೆ ಬಾಯಿ ಮಾತಿನಿಂದ ಉತ್ತರವೀಯದೆಯೇ ರಾಜಾಜ್ಞೆಯನ್ನೇ ಅವನ ಕೈಗಿತ್ತರು ಕಟುಕರು.

ಅದನ್ನು ಓದಿ ಮುಗಿಸಿದಾಗ, "ದೇವರೇ" ಎಂಬ ಒಂದೇ ಶಬ್ದ ಅವನ ಬಾಯಿಯಿಂದ ಹೊರಬಿತ್ತು. ಅವನ ಧ್ವನಿಯಲ್ಲಿ ದುಃಖದ ಛಾಯೆಯಿರಲಿಲ್ಲ; ನಾಡನ್ನಾಳುವವರ ಅಜ್ಞಾನದ ಬಗ್ಗೆ ಕಳವಳವಿತ್ತು. ಮಂತ್ರಿ, ಗುರು ಹಾಗು ತನ್ನ ಸ್ವಂತ ತಂದೆಯಂತಹ ಮಹಾ ಪಂಡಿತರು ಆರೋಪವನ್ನು ಮರುವಿಚಾರವಿಲ್ಲದೆಯೇ ಅದೆಂತು ನಂಬಿದರೆಂದವನಿಗೆ ಆಶ್ಚರ್ಯವಾಗತೊಡಗಿತು.

ಒಡನೆಯೆ ಧ್ವನಿಯಲ್ಲಿ ರಾಜಗಾಂಭೀರ್ಯವನ್ನು ಮತ್ತೆ ತಂದುಕೊಂಡು, "ನಾನು ರಾಜಾಜ್ಞೆಯನ್ನು ಶಿರಸಾವಹಿಸುತ್ತೇನೆ. ನೀವು ನನ್ನನ್ನು ವಧಾಸ್ಥಾನಕ್ಕೆ ಕರೆದೊಯ್ಯಬಹುದು. ಆದರೆ ನನ್ನದೊಂದೇ ಒಂದು ಇಚ್ಛೆಯನ್ನು ನೀವು ಪೂರೈಸಬೇಕು. ಸಾಯುವ ಮೊದಲು ಮಂತ್ರಿ ಕುಮಾರ ಚಾತುರ್ಯನನ್ನೊಮ್ಮೆ ಒಂದೇ ಕ್ಷಣದ ಮಟ್ಟಿಗಾದರೂ ನಾನು ಕಾಣಬೇಕಿದೆ," ಎಂದನು.

ಕಟುಕರು ಅದಕ್ಕೊಪ್ಪಿದರು. ಅವರಲ್ಲೊಬ್ಬ

---

(೧೨೨ನೇ ಪುಟಕ್ಕೆ)



ಜ್ಞಾನನಿಧಿ

ವಿದ್ಯಾರ್ಥಿ ಅಂಕಣ

# ಆ ಬಾಂಬು ದುರಂತ....

**೧೯೪೫**ರ ಆಗಸ್ಟ್ ೬ರ ದಿನ. ಎರಡನೆಯ ಜಾಗತಿಕ ಮಹಾಯುದ್ಧ (೧೯೩೯-೪೫) ಮುಗಿಯುವ ಹಂತದಲ್ಲಿತ್ತು. "ಸೂರ್ಯೋದಯದ ನಾಡು" ಎಂದೇ ಕರೆಯಲ್ಪಡುವ ಜಪಾನಿನ ಪ್ರಮುಖ ಪಟ್ಟಣಗಳಲ್ಲೊಂದಾದ ಹೀರೋಷೀಮಾದಲ್ಲಿ ಸೂರ್ಯೋದಯವಾಗಿ ಅಷ್ಟೇನೂ ಹೊತ್ತಾಗಿರಲಿಲ್ಲ. ಜನರು ಎಂದಿನಂತೆ ತಮ್ಮ ಚಟುವಟಿಕೆಗಳಲ್ಲಿ ನಿರತರಾಗಿದ್ದರು. ಬೆಳಗಿನ ೮-೨೦ರ ಸಮಯ. ಅಣುಬಾಂಬೊಂದು ಆ ಪಟ್ಟಣದಲ್ಲಿ ಆಸ್ಫೋಟಿಸಿ ತತ್ತರಿಸುವಂತೆ ಮಾಡಿತು.

"ಲಿಟಲ್ ಬಾಯ್" (ಚಿತ್ರ ನೋಡಿ) ಎಂಬ ಹೆಸರಿನ ಆ ಅಣುಬಾಂಬನ್ನು ಅಮೇರಿಕವು ಜಪಾನಿನ ಮೇಲೆ ಮೊಟ್ಟ ಮೊದಲ ಬಾರಿಗೆ ಪ್ರಯೋಗಿಸಿತ್ತು. ಬಿ-೨೯ ಯುದ್ಧ ವಿಮಾನದಿಂದ ೫೮೦ ಮೀಟರ್‌ಗಳಷ್ಟು ಎತ್ತರದಿಂದ ಪ್ರಯೋಗಿಸಿದ್ದ ಆ ಬಾಂಬಿನ ಉದ್ದ ಮೂರುಮೀಟರ್ ಮತ್ತು ಅಗಲ ೭೧ ಸೆಂಟಿಮೀಟರಿನಷ್ಟು ಆಗಿತ್ತು. ನಾಲ್ಕು ಟನ್ ತೂಕದ ಅದು ೧೨,೫೦೦ ಟನ್ ಟ್ರೈ-ನೈಟ್ರೋಟೊಲ್ವಿನ್ (TNT) ಸಿಡಿಮದ್ದಿನ ಸಾಮರ್ಥ್ಯ ಪಡೆದಿತ್ತು. (೪೭ನೇ ಪುಟಕ್ಕೆ)



'ಲಿಟಲ್ ಬಾಯ್' ಅಣುಬಾಂಬು



# ಬಸ್ಸಿನ ಬಳಕೆ ಹೇಗೆ ಬಂತು?

ಬಸ್ ಈಗ ಎಲ್ಲರಿಗೂ ಅನಿವಾರ್ಯ ಸಂಗಾತಿ. ಈ ವಾಹನಕ್ಕೆ 'ಬಸ್' ಎಂಬ ಹೆಸರು ಹೇಗೆ ಬಂತು? ಅದರ ಜನ್ಮ ಕಥೆ ಬಹಳ ರೋಚಕರಾದುದು.

ಈ ಬಸ್ ಎಂಬ ಪದ ಬೇರೆಯೇ ಅರ್ಥವನ್ನು ಹೊಂದಿರುವ ಒಂದು ಶಬ್ದದ ಅರ್ಧಭಾಗವಾಗಿದೆ. ನಿಜವಾಗಿ ನೋಡಿದರೆ ಕೇವಲ 'ಬಸ್' ಪದಕ್ಕೆ ಯಾವ ಅರ್ಥವೂ ಇಲ್ಲ, ಮಾತ್ರವಲ್ಲ, ಆ ಮೂಲ ಶಬ್ದಕ್ಕೂ. ಜನರನ್ನು ಕೊಂಡೊಯ್ಯುವ ಈ ವಾಹನಕ್ಕೂ ಅರ್ಥದಲ್ಲಿ ಯಾವ ಸಂಬಂಧವೂ ಇಲ್ಲ.

ಕಡಿಮೆ ಬಾಡಿಗೆ ಪಡೆದು ಪಟ್ಟಣದ ರಸ್ತೆಗಳ ಮೇಲೆ ಪ್ರಯಾಣಿಕರನ್ನು ಕೊಂಡೊಯ್ಯುವ ವಾಹನಗಳಿರಬೇಕು ಎಂಬ ವಿಚಾರ ಇಂದು ನಿನ್ನೆಯದಲ್ಲ. ಫ್ರಾನ್ಸಿನ ರಾಜನಾದ ೧೪ನೆಯ ಲೂಯಿ ೧೬೬೦ರಲ್ಲಿ ಪ್ಯಾರೀಸ್ ನಗರದ ಕೆಲ ನಿಗದಿತ ಮಾರ್ಗಗಳಲ್ಲಿ ಬಡ, ವೃದ್ಧ ಹಾಗೂ ವಿಕಲಾಂಗ ಜನರನ್ನು ಅತಿ ಕಡಿಮೆ ಬಾಡಿಗೆಯಲ್ಲಿ ಕೊಂಡೊಯ್ಯಲಾಗುವಂತೆ ಎಂಟು ಜನರು ಕುಳಿತುಕೊಳ್ಳಬಹುದಾದ ವಾಹನಗಳ ಅನುಕೂಲಮಾಡಿಕೊಟ್ಟ.

ಆ ಬಳಿಕ ಸುಮಾರು ೧೫೦ ವರ್ಷಗಳ ಕಾಲಾವಧಿಯ ನಂತರ ಸೈನ್ಯದಿಂದ ನಿವೃತ್ತಿ ಹೊಂದಿದ, ಪ್ಯಾರಿಸ್ಸಿನವನೇ ಆದ ಕರ್ನಲ್ ಸ್ಟಾನಿಸ್ಲಾಸ್ ಬಾವುದ್ರಿ ಎಂಬಾತ, ತನ್ನ ಬಿಸಿನೀರಿನ ಸ್ನಾನಗೃಹಕ್ಕೆ ಬರುತ್ತಿರುವ ಗಿರಾಕಿಗಳ ಅನುಕೂಲಕ್ಕಾಗಿ ೧೮೨೫ರಲ್ಲಿ ೧೫ ಮಂದಿ ಕುಳಿತು ತೆರಳುವಂತಹ ಕುದುರೆಗಾಡಿಗಳ ವ್ಯವಸ್ಥೆ ಮಾಡಿದ. ಪ್ಯಾರಿಸ್ಸಿನ ಮಧ್ಯವರ್ತಿ ಭಾಗದಿಂದ ಹೊರಡುತ್ತಿದ್ದ ಈ ಗಾಡಿಗಳು ಉಪನಗರದ ಕೆಲವು ಠಿಕಾಣೆಗಳಿಂದ ಗಿರಾಕಿಗಳನ್ನು ಕುಳ್ಳಿರಿಸಿಕೊಂಡು ಸ್ನಾನಗೃಹಕ್ಕೆ ತಂದು ಬಿಡುತ್ತಿದ್ದವು. ತನ್ನ ಸ್ನಾನಗೃಹದ ಗಿರಾಕಿಗಳಲ್ಲದಿದ್ದವರೂ ಈ ಗಾಡಿಗಳಲ್ಲಿ ಪ್ರಯಾಣಿಸುತ್ತಿದ್ದಾರೆ ಎಂಬುದಾಗಿ ಕರ್ನಲ್‌ನಿಗೆ ಆಮೇಲೆ ತಿಳಿದು ಬಂತು. ನಂತರ ಆತ ತನ್ನ ಗಾಡಿಯಲ್ಲಿ ಪ್ರಯಾಣಿಸುವ ಎಲ್ಲರಿಗೆ ಒಂದು ನಿರ್ದಿಷ್ಟ ಬಾಡಿಗೆಯನ್ನು ಗೊತ್ತುಪಡಿಸಿದ. ಈ ಗಾಡಿಗಳು ಕೊನೆಗೆ ಪ್ಯಾರಿಸ್ಸಿನ 'ಲಾ ಪ್ಲೇಸ್ ಡೂ ಕಾಮರ್ಸ್' ಎಂಬಲ್ಲಿ ಬಂದು ನಿಲ್ಲುತ್ತಿದ್ದುವು. ಅಲ್ಲೇ ಇದಿರಿಗೆ 'ಮಾನ್‌ಶಿಯರ್ ಆಮ್ನಿಬಸ್' ಎಂಬ ಅಂಗಡಿ ಇತ್ತು. ಆ ಅಂಗಡಿಯ ಹೊರಗೆ ಮೇಲುಗಡೆಯಲ್ಲಿ 'ಓಮ್ನೆಸ್ ಆಮ್ನಿ

ಬಸ್' ಎಂಬುದಾಗಿ ಬರೆದಿರುವ ಒಂದು ಹಲಗೆಯನ್ನು ತೂಗುಹಾಕಲಾಗಿತ್ತು. ಲ್ಯಾಟಿನ್ ಭಾಷೆಯ ಮೂಲದ ಈ 'ಆಮ್ನಿ' (OMNI) ಶಬ್ದದ ಅರ್ಥ ಫ್ರೆಂಚ್ ಭಾಷೆಯಲ್ಲಿ ಸರ್ವ, ಸರ್ವತ್ರ - ಎಂದಾಗುತ್ತದೆ. ಅಂದರೆ 'ಆಮ್ನಿಬಸ್ (OMNIBUS)ನ ಅರ್ಥ ಸರ್ವತರಹದ ಸರ್ವಜನರಿಗಾಗಿ ಎಂದಾಗುವುದು. ಬಾವುಡ್ರಿಗೆ ಈ ಶಬ್ದ ತುಂಬಾ ಹಿಡಿಸಿತು. ಆತ 'ಸರ್ವಜನರಿಗಾಗಿ ಇರುವ ಬಾಡಿಗೆ ವಾಹನ' ಎಂಬ ಅರ್ಥದಲ್ಲಿ ತನ್ನ ವಾಹನ ವ್ಯವಸ್ಥೆಗೆ 'ಆಮ್ನಿಬಸ್' ಎಂಬುದಾಗಿ ಹೆಸರಿಟ್ಟ. ಮೊದಲಿಗೆ ಈ ವಾಹನಗಳನ್ನು 'ಆಮ್ನಿಬಸ್ ಕ್ಯಾರಿಯೇಜ್' ಎಂಬುದಾಗಿ ಕರೆಯುತ್ತಿದ್ದರು. ಕ್ರಮೇಣ ಅದು 'ಆಮ್ನಿಬಸ್' ಆಯಿತು.

ಈ ರೀತಿ ಠಡಾವಿಕ ಪ್ರದೇಶಗಳಿಂದ ಜನರನ್ನು ಕೊಂಡೊಯ್ಯು ತಲುಪಿಸುವ ವಾಹನಗಳ ಅನುಕೂಲ ಇಂಗ್ಲಂಡ್, ಯುರೋಪಿನ ಇತರ ದೇಶಗಳಿಗೂ, ಅಮೇರಿಕಾ ದೇಶಕ್ಕೂ ಹಬ್ಬಿತು. ಈ ಎಲ್ಲಾ ಕಡೆ ಈ ವ್ಯವಸ್ಥೆಗೆ 'ಆಮ್ನಿಬಸ್ ಸರ್ವೀಸ್' ಎಂದೇ ಕರೆಯುತ್ತಿದ್ದರು. ಇತ್ತೀಚೆಗೆ, ಅಂದರೆ ೬೦-೭೦ ವರ್ಷಗಳ ಹಿಂದಷ್ಟೇ ಈ 'ಆಮ್ನಿಬಸ್' ಶಬ್ದ ಮೊಟಕುಗೊಂಡು 'ಬಸ್' ಎಂಬ ಪದ ರೂಢಿಗೆ ಬಂತು. ೧೯೦೫ರಿಂದ ಕುದುರೆಗಾಡಿಗಳ ಬದಲಿಗೆ ಪೆಟ್ರೋಲಿನಿಂದ ಚಲಿಸುವ ಇಂಜನ್ನಿನ ವಾಹನಗಳು 'ಆಮ್ನಿಬಸ್'ಗಾಗಿ ಉಪಯೋಗಿಸಲ್ಪಡಹತ್ತಿದವು. ಈಗ ಮಾತ್ರ ಸಂಚಾರ ವ್ಯವಸ್ಥೆ ಆಮೂಲಾಗ್ರವಾಗಿ ಬದಲಾಗಿದೆ.

• 'ಪ್ರಿಯತಮ'

# ನಿಮಗೆ ಗೊತ್ತೆ?

೧) ರೇಡಿಯೋ ಸಮಾಚಾರ ೧೯೨೭ರಲ್ಲಿ ಖಾಸಗಿಯಾಗಿ ಪ್ರಾರಂಭವಾಯಿತು. ೧೯೩೦ರಲ್ಲಿ ಭಾರತ ಸರಕಾರ ಇದನ್ನು ತನ್ನ ವಶಕ್ಕೆ ತೆಗೆದುಕೊಂಡು ನಡೆಸಲಾರಂಭಿಸಿತು.

೨) ೧೯೪೨ರಲ್ಲಿ ಮೈಸೂರಿನ ಪ್ರಾಧ್ಯಾಪಕ ಡಾ. ಎಂ.ವಿ. ಗೋಪಾಲಸ್ವಾಮಿ 'ಆಕಾಶವಾಣಿ' ಖಾಸಗಿ ಕೇಂದ್ರ ಆರಂಭಿಸಿದರು. ೧೯೫೦ರಲ್ಲಿ ಸರಕಾರ ಇದನ್ನು ವಹಿಸಿಕೊಂಡರೂ 'ಆಕಾಶವಾಣಿ' ಎಂಬ ಹೆಸರೇ ಶಾಶ್ವತವಾಗಿ ಉಳಿದುಕೊಂಡಿತು.

೩) ಭಾರತದಲ್ಲಿ ಟೆಲಿವಿಜನ್ ಪ್ರಸಾರ ಆರಂಭವಾದದ್ದು ೧೯೫೯ರಲ್ಲಿ ದಿಲ್ಲಿಯ ಮಂಡಿಹೌಸ್‌ನಲ್ಲಿ.

೪) ದೇಶದ ಅತ್ಯಂತ ಎತ್ತರವಾದ ಟಿ.ವಿ. ಪ್ರೇಷಕ ಕೇಂದ್ರ ಹೊಸದಿಲ್ಲಿಯ ಪೀತಾಂಬರ ಎಂಬಲ್ಲಿದೆ. ಎತ್ತರ ೨೩೫ ಮೀಟರುಗಳು.

೫) ನಮ್ಮ ದೇಶದ ಚುನಾವಣಾ ಆಯೋಗ ೧೯೫೦ರ ಜನವರಿ ೨೫ ರಂದು ಸ್ಥಾಪಿತವಾಯಿತು.

೬) ಭಾರತದಲ್ಲಿ ಚುನಾವಣೆಯ ಪ್ರಥಮ ಚುನಾವಣಾ ಮುಖ್ಯ ಅಧಿಕಾರಿ ಶಿವಕುಮಾರ ಸೇನ್. ಪ್ರಥಮ ಚುನಾವಣಾ ಮುಖ್ಯ ಆಯುಕ್ತರು ಟಿ.ವಿ.ಕೆ. ಸುಂದರಂ.

• ಎಸ್. ಮಂಜುನಾಥ

# ವಿಚಿತ್ರ ಆದರೂ ಸತ್ಯ

ಸ್ತ್ರೀಪುರುಷರಲ್ಲಿ ಯಾರು ಹೆಚ್ಚು ಮಾತನಾಡುತ್ತಾರೆ? ಎಂಬ ಪ್ರಶ್ನೆಗೆ 'ಸ್ತ್ರೀಯರು' ಎಂದೇ ನೀವು ಉತ್ತರಿಸುವಿರಲ್ಲವೆ? ಏಕೆಂದರೆ ಸ್ತ್ರೀಯರು ವಾಚಾಳಿಗಳೆಂದೇ ಪ್ರಸಿದ್ಧಿ. ಆದರೆ ಇದು ತಪ್ಪು. ಹಿಂದಿನ ಝೆಕೋಸ್ಲೋವಾಕಿಯಾದ ಸಮಾಜಶಾಸ್ತ್ರಜ್ಞರು ನಡೆಸಿದ ಅಧ್ಯಯನವೊಂದು ಸ್ತ್ರೀಯರು ವಾಚಾಳಿಗಳೆಂಬ ವಾದವನ್ನು ಅಲ್ಲಗಳೆದಿದೆ. ಇವರು ನಡೆಸಿದ ಸಮೀಕ್ಷೆಯಂತೆ ಹತ್ತರಿಂದ ಹನ್ನೆರಡು ವಯಸ್ಸಿನ ಮಕ್ಕಳು ಸ್ತ್ರೀಯರಿಗಿಂತ ಹೆಚ್ಚು ಮಾತನಾಡುತ್ತಾರೆ. ಅವರು ಪ್ರತಿನಿತ್ಯ ಸರಾಸರಿ ೧೪ ಸಾವಿರ ಪದಗಳನ್ನು ಬಳಸಿದರೆ ೧೮ ರಿಂದ ೨೫ರ ವಯೋಮಿತಿಯಲ್ಲಿ ಬರುವ ತರುಣರು ವಾಚಾಳಿತನದಲ್ಲಿ ದ್ವಿತೀಯ ಸ್ಥಾನದಲ್ಲಿ ಬರುತ್ತಾರೆ. ಇವರು ಪ್ರತಿನಿತ್ಯ ಸರಾಸರಿ ೧೦ ಸಹಸ್ರ ಪದಗಳನ್ನು ಬಳಸುತ್ತಾರಂತೆ. ನಂತರದ ಸ್ಥಾನ ಮಹಿಳೆಯರದು. ವಾಚಾಳಿಗಳೆಂಬ ಆಪಾದನೆಗೆ ಗುರಿಯಾಗಿರುವ ಮಹಿಳೆಯರಿಗೆ ಈಗಲಾದರೂ ಮುಕ್ತಿ ದೊರಕಿತೆ?

ಬ್ರಿಟನ್ನನ್ನು ಅತ್ಯಂತ ಹೆಚ್ಚು ಅವಧಿಯವರೆಗೆ ಆಳಿದ ಮಹಾರಾಣಿ ವಿಕ್ಟೋರಿಯಾಳಿಗೆ ಇಂಗ್ಲಿಷ್ ಭಾಷೆ ಚೆನ್ನಾಗಿ ಬರುತ್ತಿರಲಿಲ್ಲವಂತೆ. ಏಕೆಂದರೆ ಆಕೆಯ ಮಾತೃಭಾಷೆ ಜರ್ಮನ್ ಆಗಿತ್ತು.

ಕಪ್ಪು ಕನ್ನಡಕವನ್ನು ಧರಿಸಲು ಮೊಟ್ಟಮೊದಲು ಆರಂಭಿಸಿದವರು ಹಾಲಿವುಡ್ಡಿನ ನಟರು. ಆದರೆ ಅವರು ಬಿಸಿಲಿನಿಂದ ತಮ್ಮ ಕಣ್ಣುಗಳನ್ನು ರಕ್ಷಿಸಿಕೊಳ್ಳಲು ಕಪ್ಪುಕನ್ನಡಕ ಧರಿಸುತ್ತಿರಲಿಲ್ಲ. ಬದಲಾಗಿ ಚಿತ್ರೀಕರಣದ ಕಾಲಕ್ಕೆ ಬಳಸುವ ಫ್ಲಡ್‌ಲೈಟುಗಳ ತೀಕ್ಷ್ಣ ಬೆಳಕಿನಿಂದ ತಮ್ಮ ಕಣ್ಣುಗಳನ್ನು ರಕ್ಷಿಸಿಕೊಳ್ಳಲು ಕಪ್ಪು ಕನ್ನಡಕ ಧರಿಸುತ್ತಿದ್ದರು.

ಮಹಾರಾಷ್ಟ್ರದ ಔರಂಗಾಬಾದ್ ಜಿಲ್ಲೆಯಲ್ಲಿ 'ಕನ್ನಡ' ಎಂಬ ಹೆಸರಿನ ಒಂದು ತಾಲ್ಲೂಕು ಕೇಂದ್ರವಿದೆ.

ಪ್ರಪಂಚದಲ್ಲಿ ಮೂವರಲ್ಲಿ ಒಬ್ಬ ವ್ಯಕ್ತಿ ಶುದ್ಧವಾದ ಕುಡಿಯುವ ನೀರಿನ ಅಭಾವದಿಂದ ಬಳಲುತ್ತಿದ್ದಾನೆ. ಹೊಲಸು ನೀರನ್ನು ಕುಡಿಯುವುದರಿಂದ ಬರುವ ರೋಗಗಳಿಂದ ಪ್ರತಿವರ್ಷ ೧೫ ಲಕ್ಷ ಮಕ್ಕಳು ಸಾವಿಗೀಡಾಗುತ್ತವೆ. ಸ್ವಚ್ಛವಾದ ಕುಡಿಯುವ ನೀರನ್ನು ಒದಗಿಸಿದರೆ ನೂರಕ್ಕೆ ೮೦ ರಷ್ಟು ರೋಗಗಳಿಂದ ಮುಕ್ತಿ ಹೊಂದಬಹುದು.

ನಿಮಗೆ ಸರ್ಕಾರಿ ನೌಕರಿಯಿಲ್ಲವೆ? ಹಾಗಾದರೆ ನೀವೊಬ್ಬ 'ಈಡಿಯೆಟ್'. 'ಈಡಿಯೆಟ್' ಎಂದರೆ ಮೂರ್ಖ ಎಂಬುದು ಇಂಗ್ಲಿಷ್ ಶಬ್ದಕೋಶ ನೀಡುವ ಅರ್ಥ. ಆದರೆ ಈ ಪದ ಬಂದದ್ದು ಗ್ರೀಕ್ ಮೂಲದಿಂದ. ಗ್ರೀಕ್ ಭಾಷೆಯಲ್ಲಿ 'ಈಡಿಯೆಟ್ಸ್' ಎಂದರೆ ಸರ್ಕಾರಿ ಉದ್ಯೋಗವಿಲ್ಲದವನು ಅಂದರೆ ಖಾಸಗಿ ಉದ್ಯೋಗಸ್ಥ ಎಂದು ಅರ್ಥ.

ಸಂಗ್ರಹ:
**ಮುರಲೀಧರ ಕುಲಕರ್ಣಿ**

# ದಾಘೆಸ್ತಾನದ ಕಂಬಳಿ ಕಾವ್ಯ

"ರತ್ನಗಂಬಳಿಯ ನೇಯ್ಗೆಯೂ ಒಂದೇ; ಕಾವ್ಯ ರಚನೆಯೂ ಒಂದೇ. ನೇಕಾರಳು ನಿಜಕ್ಕೂ ಒಬ್ಬ ಕವಯಿತ್ರಿ," ಎಂಬುದು ದಾಘೆಸ್ತಾನದಲ್ಲಿನ ವಾಡಿಕೆಯ ಮಾತು. ಅಲ್ಲಿ ತಯಾರಾದ ರತ್ನಗಂಬಳಿಯ ನ್ನೊಮ್ಮೆ ನೋಡಿದರೆ ಅವುಗಳಲ್ಲಿ ಇಡೀ ಜಗತ್ತನ್ನೇ ಚಿತ್ರಗಳ ರೂಪದಲ್ಲಿ ಕಾಣಬ ಹುದು ಎಂಬ ಭಾವನೆ ಬಾರದಿರುವುದಿಲ್ಲ. ಅವುಗಳಲ್ಲಿ ಕೆಲವಂತೂ ಪ್ರಕೃತಿಯ ಪ್ರತಿಕೃತಿ ಗಳೇ ಸರಿ. ಎಲ್ಲ ರೀತಿಯ ಹಣ್ಣು, ಹೂವು, ಹುಲ್ಲುಗಾವಲುಗಳ ರಮ್ಯ ಮೋಹಕ ಚಿತ್ರಗ ಳಿಂದ ಅವು ರಮ್ಯ ಕಾವ್ಯದಂತೆಯೇ ಅವ ರ್ಣನೀಯವಾದ ಸೌಂದರ್ಯಾನುಭವ ನೀಡುತ್ತವೆ.

ದಾಘೆಸ್ತಾನದ ರತ್ನಗಂಬಳಿಗಳಲ್ಲಿ ಸಾಕಷ್ಟು ವೈವಿಧ್ಯವೂ ಉಂಟು. ಆ ಗಣತಂತ್ರದ ಒಂದೊಂದು ಭಾಗದಲ್ಲಿ ತಯಾರಾದದ್ದಕ್ಕೂ ಒಂದೊಂದು ವೈಶಿಷ್ಟ್ಯ. ಇವುಗಳ ಚಿತ್ರವಿನ್ಯಾ ಸದಲ್ಲಿ ಬೆಟ್ಟದ ಮೇಕೆಯ ಕೋಡು ಪ್ರಧಾನ ಅಂಶ. ಚೂಪಾದ ತುದಿಗಳು ಬಾಗಿ ಜೊತೆ ಗೂಡಿರುವ ಬಿಳಿ ಕೊಂಬುಗಳನ್ನು ಸುಂದರ ವಾಗಿ ಚಿತ್ರಿಸಲಾಗಿರುತ್ತದೆ. ಇವುಗಳ ಮಧ್ಯೆ ವಿವಿಧ ವರ್ಣಗಳ ಮುದ್ರಿಕೆಗಳಿರತ್ತವೆ. ಹಕ್ಕಿ ಗಳು, ಸಾಕು ಪ್ರಾಣಿಗಳು, ಬೇಸಾಯ ಸಲ ಕರಣೆಗಳು, ಲೋಲಾಕು, ಉಂಗುರ ಮುಂತಾದ ಮಹಿಳೆಯರ ಆಭರಣಗಳನ್ನೆಲ್ಲ ರತ್ನಗಂಬಳಿಯಲ್ಲಿ ಮೂಡಿಸಲಾಗಿರುತ್ತದೆ.

## ದಂತ ಕಥೆ

ಕಂಬಳಿಯ ರಚನೆಗೆ ಸಂಬಂಧಿಸಿದಂತೆ ದಾಘೆಸ್ತಾನದಲ್ಲಿ ಒಂದು ಸುಂದರ ದಂತ ಕಥೆ ಇದೆ. ಯುವತಿಯೊಬ್ಬಳು ಅನೇಕ ದಿನ ಅಹರ್ನಿಶಿಯಾಗಿ ದುಡಿದು ತನ್ನ ಇನಿಯನಿಗೆ ನೀಡಲೆಂದು ರತ್ನಗಂಬಳಿಯನ್ನು ನೇಯ್ದಳು. ಸಾವಿರಾರು ಗಂಟುಗಳನ್ನು ಹಾಕಿದಳು. ಅದು ಸಿದ್ಧವಾದಾಗ ಯಾಕೋ ಅದರ ಚಿತ್ರ ಮಾಸಿ ದಂತೆ, ಅದರಲ್ಲಿನ ಹೂಗಳು ಕಮರಿ ಹೋದಂತೆ ಅವಳಿಗೆ ಭಾಸವಾಯಿತು. ಹತಾ ಶಳಾದ ಅವಳ ಕಣ್ಣೀರು ಕೋಡಿಗಟ್ಟಿ ಹರಿ ಯಿತು. ಅದು ಕಣ್ಣುಗಳಿಂದಲ್ಲ, ಹೃದಯದಿಂ ದಲೇ ಹೊಮ್ಮಿ ಬರುವಂತಿತ್ತು. ಬರೀ ನೀರಾ ಗಿರದೆ ನೆತ್ತರಿನಿಂದ ಕೂಡಿದಂತಿತ್ತು. ಕಣ್ಣೀ ರಿನ ಹನಿ ರತ್ನಗಂಬಳಿಯ ಮೇಲೆ ಬಿದ್ದಂತೆ ಚಿತ್ರದಲ್ಲಿ ತಂತಾನೆ ಜೀವ ತುಂಬತೊಡ ಗಿತು. ಈಗದು ಪ್ರಿಯತಮನಿಗೆ ಅರ್ಪಿಸಬ ಹುದಾದ ಅಪೂರ್ವ ಕಾಣಿಕೆಯಾಗಿ ರೂಪು ತಳೆದಿತ್ತು. ಕೈಗಳಿಂದಲ್ಲ, ಪ್ರೇಮಲ ಹೃದಯ ದಿಂದ ಮೂಡಿಬಂದ ಕೃತಿಯಾಗಿದ್ದಿತ್ತದು.

## ಸೌಂದರ್ಯಾಭಿರುಚಿಯ ಪಾತ್ರ

ದಾಘೆಸ್ತಾನದ ನಿಸರ್ಗ ಸೌಂದರ್ಯ ಹಾಗೂ ಪರ್ವತಗಳಲ್ಲಿನ ಜೀವನ ಸೌಂದ ರ್ಯದ ಬಗೆಗಿನ ಅಲ್ಲಿನ ಜನರ ಅಭಿರುಚಿ ರೂಪುಗೊಳ್ಳುವುದರಲ್ಲಿ ದೊಡ್ಡ ಪಾತ್ರವಹಿ ಸಿದೆ. ಮುಗಿಲೆತ್ತರ ಎದ್ದುನಿಂತ ಗಿರಿ ಶಿಖರ ಗಳು, ಪ್ರಾತಃ ಸೂರ್ಯನ ಕೋಮಲ ವರ್ಣ ಗಳ ಓಕುಳಿಯಾಟಕ್ಕೆ ತೆರೆ ಹಿಡಿಯುವಂ ತೆಯೇ ಸಂಜೆ ಸೂರ್ಯನ ವರ್ಣರಂಜಕ ತೆಯ ಅವಧಿಯನ್ನೂ ಕುಗ್ಗಿಸುತ್ತವೆ. ಆದರೆ ಅದೇ ಹೊತ್ತಿನಲ್ಲಿ ಆ ಗಿರಿ ಶಿಖರಗಳ ಬಾಹ್ಯ



ರೇಖೆಗಳೂ ಸಂಜೆಗತ್ತಲಲ್ಲಿ ಕುಡಿಯೊಡೆವ ಸಮಷ್ಟಿ ನೋಟವೂ ಜನರಲ್ಲಿ ಒಂದು ರೀತಿಯ ಚಿಂತನೆಯ ಭಾವವನ್ನು ಬೆಳೆಸುತ್ತವೆ.

'ಯಾವತ್ತೂ ಆಕಾಶ ಅನಂತವಾದುದು. ಆದ್ದರಿಂದ ಅದರ ಪರಮಾವಧಿ ಪ್ರಯೋಜನ ಪಡೆಯಬೇಕು' ಎಂಬ ಭಾವನೆಯು ಸಹಜವಾಗಿಯೆ ಪರ್ವತವಾಸಿಗಳಲ್ಲಿ ಉದಿಸುತ್ತದೆ. ಅದರ ಫಲವಾಗಿಯೇ ಇಲ್ಲಿನ ಕಲಾವಿದರು ಆಕಾರ, ವರ್ಣ ಸಂಯೋಜನೆಯ ಪ್ರಮಾಣ, ಲಯಗಳ ಬಗೆಗೆ ತಮ್ಮವೇ ಆದ ವಿಚಾರಗಳನ್ನು ರೂಪಿಸಿಕೊಂಡಿದ್ದಾರೆ. ಇವರ ಚಿತ್ರಗಳು ವರ್ಣಮಯವಾಗಿದ್ದರೂ ಬಿಡಿ ಬಣ್ಣದ ಕೃತಿಗಳೂ ಹೆಚ್ಚಿನ ಸೂಕ್ಷ್ಮತೆಗಳಿಂದ ವೈವಿಧ್ಯದಿಂದ ಕೂಡಿರುತ್ತವೆ.

ಕಾಕಸಸ್ ಪರ್ವತ ಪ್ರದೇಶಗಳಲ್ಲೂ ದಾಘೆಸ್ತಾನದಲ್ಲೂ ರತ್ನಗಂಬಳಿಯ ತಯಾರಿಕೆಗೆ ಬಹಳ ಹಳೆಯ ಪರಂಪರೆಯಿದೆ. ಸುಮಾರು ಹನ್ನೆರಡುನೂರು ವರ್ಷಗಳಿಂದಲೂ ಇಲ್ಲಿಯ ಜನ ರತ್ನಗಂಬಳಿಗಳನ್ನು ನೇಯುವುದರಲ್ಲಿ ಮೌಲಿಕತೆಯನ್ನು ಉಳಿಸಿಕೊಂಡು ಬಂದಿದ್ದಾರೆ. ದಾಘೆಸ್ತಾನದಲ್ಲಿ 'ಕವಯಿತ್ರಿ'ಯರು ರತ್ನಗಂಬಳಿಗಳ ಮೂಲಕ ಕಾವ್ಯಗಳನ್ನು ನೇಯುತ್ತಾರೆಂಬ ಮಾತು ಯಥಾರ್ಥವಾಗಿಯೇ ಇದೆ.

• ರಾಮನ್

## ಯುಗಾದಿ ಎಂದು?

**ಸೂ**ರ್ಯನ ದೈನಂದಿನ ಪಥ ಕ್ರಮೇಣವಾಗಿ ಉತ್ತರಾಭಿಮುಖವಾಗಿ ಸರಿಯುತ್ತಿದೆ. ಇದರೊಂದಿಗೆ ಹಗಲಿನ ಅವಧಿಯೂ ಬೆಳೆಯುತ್ತಿದೆ. ಮಾರ್ಚ್ ೨೧ರಂದು ಸೂರ್ಯನ ದೈನಂದಿನ ಪಥ ಸರಿಯಾಗಿ ವಿಷುವೃತ್ತದ ಮೇಲೆ. ಅಂದರೆ ಅಂದು ಅವನು ಮೂಡಿ ಮುಳುಗುವ ಬಿಂದುಗಳು ನಿಖರವಾಗಿ ಪೂರ್ವ ಮತ್ತು ಪಶ್ಚಿಮದಲ್ಲಿ ಹೀಗಾಗಿ ಆ ದಿನ ಹಗಲು ರಾತ್ರಿಗಳ ಅವಧಿಯೂ ಸಮಾನ. ೨೧ನೇ ದಿನಾಂಕದಿಂದ ಮುಂದೆ ಸೂರ್ಯನ ಪ್ರಯಾಣ ಉತ್ತರಕ್ಕೆ ಮುಂದುವರೆಯುವುದರಿಂದ ಹಗಲಿನ ಅವಧಿ ಹೆಚ್ಚುತ್ತಾ ಹೋಗುವುದು.

ಸೂರ್ಯನ ಸುತ್ತ ಪರಿಭ್ರಮಣ ಮಾಡುವ ಭೂಮಿಯ ದಾರಿಯು ಮಾರ್ಚ್ ೨೧ ರಂದು (ಅದೇ ರೀತಿ ಸೆಪ್ಟೆಂಬರ್ ೨೩ ರಂದು) ವಿಷುವೃತ್ತವನ್ನು (ಧ್ರುವ ನಕ್ಷತ್ರವನ್ನು ನಮಗೆ ಸೇರಿಸುವ ಭೂಮಿಯ ಆವರ್ತನದ ಅಕ್ಷಕ್ಕೆ ಲಂಬವಾಗಿ ಎಳೆದ ಮಹಾವೃತ್ತ) ಸಂಧಿಸುವುದು. ಅಥವಾ ಸರಳವಾಗಿ ಸೂರ್ಯನ ಸುತ್ತಲೂ ಸುತ್ತುತ್ತಿರುವ ಭೂಮಿ ಮಾರ್ಚ್ ೨೧ ರಂದು ಗುರುತುಗಲ್ಲನ್ನು ದಾಟುವುದು ಹಾಗೂ ಹೊಸ ಸುತ್ತಿನ ಓಟವನ್ನು ಪುನಃ ಪ್ರಾರಂಭಿಸುವುದು. ಆದ್ದರಿಂದ ಖಗೋಳಶಾಸ್ತ್ರೀಯವಾಗಿ ಯುಗದ ಆದಿ (ಯುಗಾದಿ) ಮಾರ್ಚ್ ೨೧ ರಂದು ಪ್ರಾರಂಭವಾಗುತ್ತದೆ.

ಸಂಗ್ರಹ: 'ಗೌರಿ ಅಭಿ'

(೪೧ನೇ ಪುಟದಿಂದ)

ಅದಾದ ಎರಡು ದಿನಗಳ ನಂತರ, ಅಂದರೆ ಆಗಸ್ಟ್ ೯ ರಂದು ಜಪಾನಿನ ಇನ್ನೊಂದು ಪ್ರಮುಖ ಪಟ್ಟಣವಾದ ನಾಗಾ ಸಾಕಿಯಲ್ಲಿ ಬೆಳಗಿನ ೧೧ರ ಸುಮಾರಿಗೆ ಮತ್ತೊಂದು ಅಣುಬಾಂಬು ಸಿಡಿದು ಅಲ್ಲೋಲಕಲ್ಲೋಲ ಉಂಟುಮಾಡಿತು. "ಫ್ಯಾಟ್ ಮ್ಯಾನ್" (ಚಿತ್ರ ನೋಡಿ) ನಾಮಾಂಕಿತ, ೨೨ ಕಿಲೋ ಟನ್ ಪ್ಲುಟೋನಿಯಂ ಅಣುಬಾಂಬನ್ನು ನಾಗಾಸಾಕಿಯಿಂದ ೫೦೦ ಮೀಟರ್‌ಗಳಷ್ಟು ಎತ್ತರದಿಂದ ಸಿಡಿಸಲಾಗಿತ್ತು. ಅದು ೩.೨೫ ಮೀಟರು ಉದ್ದ, ೧.೫ ಮೀಟರಿನಷ್ಟು ಅಗಲವಾಗಿತ್ತು. ನಾಲ್ಕೂವರೆ ಟನ್ನುಗಳಷ್ಟು ಭಾರವಾಗಿದ್ದ ಅದು ೨೨,೦೦೦ ಟನ್ TNT ಸಿಡಿಮದ್ದಿನಷ್ಟು ಸಾಮರ್ಥ್ಯ ಹೊಂದಿತ್ತು.

ಈ ಅಣುಬಾಂಬುಗಳ ಸ್ಫೋಟದಿಂದಾಗಿ ಹೀರೋಷೀಮಾದಲ್ಲಿ ೧೩ ಚದರ ಕಿಲೋ ಮೀಟರು ಮತ್ತು ನಾಗಾಸಾಕಿಯಲ್ಲಿ ೬.೭ ಚದರ ಕಿಲೋಮೀಟರು ಪ್ರದೇಶದಲ್ಲಿ ಬೆಂಕಿ ಹೊತ್ತಿಕೊಂಡು ದಗದಗ ಉರಿದು ಮರುಭೂಮಿಯಾಗಿ ಮಾರ್ಪಟ್ಟಿತು. ಅಣುಬಾಂಬಿನಿಂದ ಉತ್ಪತ್ತಿಯಾದ ಒಟ್ಟು ಶಕ್ತಿಯ ಮುಕ್ಕಾಲು ಭಾಗ ಶಾಖದ ರೂಪ ತಾಳಿತು. ಪರಿಣಾಮವಾಗಿ ಆ ಪ್ರದೇಶದ ಉಷ್ಣತಾಮಾನ ಹತ್ತಾರು ಲಕ್ಷ ಡಿಗ್ರಿ ಸೆಲ್ಸಿಯಸ್‌ಗಳ ವರೆಗೆ ಏರಿತು! ಬೆಂಕಿಯ ಜ್ವಾಲೆಗಳು ಎರಡೂ ಪಟ್ಟಣಗಳನ್ನು ಪೂರ್ತಿಯಾಗಿ ಆಕ್ರಮಿಸಿದವು. ಹೀರೋಷೀಮಾದಲ್ಲಿ ಇದರ ಪ್ರತಾಪ ಹೆಚ್ಚಾಗಿದ್ದು ಆರು ಗಂಟೆಗಳಲ್ಲಿ ಬೆಂಕಿ ಸಿಕ್ಕಿದ್ದನ್ನೆಲ್ಲಾ ಭಸ್ಮ ಮಾಡುತ್ತಾ ಎರಡು ಕಿಲೋಮೀಟರು ಸುತ್ತಳತೆಯವರೆಗೂ ಚಾಚಿತ್ತು. ತೇವವು ಬೆಂಕಿಯ ಜ್ವಾಲೆಯಿಂದ ಉತ್ಪತ್ತಿಯಾದ ಬೂದಿಯ ಸುತ್ತ ದಟ್ಟ ಆವಿಯಾಗಿ, ತಂಪು ಹವೆಯೊಂದಿಗೆ ಕೂಡಿದ ಪರಿಣಾಮವಾಗಿ ಎರಡೂ ಪಟ್ಟಣಗಳ ಮೇಲೆ ಭಾರೀ ಮಳೆ ಸುರಿಯಿತು. ಅದು ಸಾಮಾನ್ಯ ಮಳೆಯಾಗಿರಲಿಲ್ಲ. ವಿಕಿರಣಶೀಲತೆ ಮತ್ತು ಎಣ್ಣೆಯಂತಹ ದ್ರವ ಆ ಮಳೆಯಲ್ಲಿತ್ತು.

ಹೀರೋಷೀಮಾದಲ್ಲಿ ಅಣುಬಾಂಬು ಸ್ಫೋಟಗೊಂಡಾಗ ಸುಮಾರು ಮೂರೂವರೆಲಕ್ಷ ಜನರಿದ್ದರು. ಪರಿಣಾಮವಾಗಿ ೧೯೪೫ರ ಕೊನೆಯವರೆಗೂ ಮಡಿದ ಜನರ

## ಪರಿಣಾಮ

ಅಣುಬಾಂಬು ಸ್ಫೋಟಗೊಂಡಾಗ ಏಕಕಾಲದಲ್ಲಿ ಅಪಾರ ಶಕ್ತಿ ಬಿಡುಗಡೆಯಾಗುವುದರೊಂದಿಗೆ ನ್ಯೂಟ್ರಾನು, ಅಯೋಡಿನ್-೧೩೧ ಮತ್ತು ಸ್ಟ್ರಾನ್ಷಿಯಂಗಳು ಬಿಡುಗಡೆಯಾಗುತ್ತವೆ. ನ್ಯೂಟ್ರಾನುಗಳು ವಾಯುವೇಗದಲ್ಲಿ ಚಲಿಸುವಾಗ ದಾರಿಯಲ್ಲಿ ಸಿಕ್ಕ ಯಾವುದೇ ದೇಹವನ್ನು ಹೊಕ್ಕು ಜೀವಾಣುಗಳನ್ನು ನಾಶಪಡಿಸಬಲ್ಲವು. ಅಯೋಡಿನ್-೧೩೧ ಬಿಳಿಯ ರಕ್ತಕಣ, ಅಸ್ಥಿಮಜ್ಜೆ ಗುಲ್ಮಗಳನ್ನು ನಾಶಪಡಿಸುವುದಲ್ಲದೇ ದೇಹದಲ್ಲಿ ಗಂಟು ಬೆಳೆಯಲು ಕಾರಣವಾಗುತ್ತದೆ. ವಿಕಿರಣಶೀಲತೆಯ ಪರಿಣಾಮದಿಂದ ವಂಶವಾಹಿಗಳಲ್ಲಿ ಬದಲಾವಣೆ ಮತ್ತು ಜೀವಿಗಳಲ್ಲಿ ಆಕಸ್ಮಿಕ ಬದಲಾವಣೆ ಅಂದರೆ ಮ್ಯುಟೇಷನ್ ಕೂಡ ಆಗಬಹುದು. ಇದು ಮಾನವನ ಆಯುಷ್ಯವನ್ನು ಕ್ಷೀಣಿಸುವಂತೆ ಮಾಡಬಹುದಲ್ಲದೆ ಕ್ಯಾನ್ಸರನ್ನೂ ಕಣ್ಣಿನ ಬೇನೆ, ಇತ್ಯಾದಿ ರೋಗಗಳನ್ನೂ ತರಬಲ್ಲದು.

ಸಂಖ್ಯೆ ೧,೪೦,೦೦೦ಕ್ಕೇರಿತು. ನಾಗಾಸಾಕಿಯಲ್ಲಿ ಅಣುಬಾಂಬು ಸ್ಫೋಟಿಸಿದಾಗ ೨,೮೦,೦೦೦ ಜನರಿದ್ದರು. ೧೯೪೫ರ ಕೊನೆಯವರೆಗೆ ಅಲ್ಲಿ ಮಡಿದವರ ಸಂಖ್ಯೆ ಸುಮಾರು ೭೪,೦೦೦ದಷ್ಟಾಯಿತು.

ಬಾಂಬ್ ಸ್ಫೋಟದಿಂದ ಶೇಕಡಾ ೯೦ರಷ್ಟು ಆಸ್ಪತ್ರೆಗಳು ಮತ್ತು ಸಿಬ್ಬಂದಿವರ್ಗ ಮರಣ ಹೊಂದಿದ್ದರಿಂದ ಇಲ್ಲವೇ ಗಾಯಗೊಂಡಿದ್ದರಿಂದ ದುರಂತ ಸಂಭವಿಸಿದಾಗ ಎರಡೂ ಪಟ್ಟಣಗಳ ಜನರಿಗೆ ತ್ವರಿತ ವೈದ್ಯಕೀಯ ಉಪಚಾರಗಳು ಲಭಿಸಲಿಲ್ಲ.



'ಫ್ಯಾಟ್‌ಮ್ಯಾನ್' ಅಣುಬಾಂಬು

ಹೀರೋಷೀಮಾದಲ್ಲಿ ಸುಮಾರು ೭೬,೦೦೦ ಮತ್ತು ನಾಗಾಸಾಕಿಯಲ್ಲಿ ೫೦,೦೦೦ ಕಟ್ಟಡಗಳು ಧ್ವಂಸವಾದುವು. ಅಣುಬಾಂಬು ಸಿಡಿದಾದ ಕೆಲ ವರ್ಷಗಳ ನಂತರವೂ ಅಲ್ಲಿನ ಜನ ವಿಕಿರಣದ ಪರಿಣಾಮದಿಂದಾಗಿ ವಿವಿಧ ರೋಗಗಳಿಗೆ ತುತ್ತಾಗಿ ಸಾವಿಗೀಡಾದರು. ಈಗಲೂ ಅಲ್ಲಿ ಜನಿಸುವ ಮಕ್ಕಳು ಬದಲಾದ ಅನುವಂಶಿಕ ಗುಣ ಮತ್ತು ಶಾರೀರಿಕ ದೋಷಗಳನ್ನು ಪಡೆದುಕೊಂಡು ಹುಟ್ಟುತ್ತಿದ್ದಾರೆ. (ಬಾಕ್ಸ್ ನೋಡಿ)

ದುರಂತ ಸಂಭವಿಸಿ ಈಗ ೫೦ ವರ್ಷಗಳು ಕಳೆದಿವೆ. ಜಪಾನೀಯರ ಪಾಲಿಗೆ ಆ ಎರಡು ದಿನಗಳು ಕರಾಳ ದಿನಗಳೇ ಸರಿ. ಬಹುಶಃ ಅವರು ಆ ದುರಂತ ಮತ್ತು ದಿನಗಳನ್ನು ಎಂದೂ ಮರೆಯಲಾರರು. ದುರಂತ ಸಂಭವಿಸಿದ ಸ್ಥಳ ಈಗ ಕೂಡ ಉಪಯೋಗವಿಲ್ಲದಾಗಿದೆ. ಅಲ್ಲಿ ಶಾಂತಿ ಸ್ಮಾರಕಗಳನ್ನು ನಿರ್ಮಿಸಿರುವ ಅವರು ಈ ದಿನಗಳಲ್ಲಿ ವಿಶೇಷ ಶಾಂತಿ ಸಭೆಗಳನ್ನು ನಡೆಸಿ ದುರಂತದಲ್ಲಿ ಮಡಿದ ತಮ್ಮ ಬಂಧು-ಮಿತ್ರರನ್ನು ನೆನೆಯುತ್ತಾರೆ. ಅವರ ಆತ್ಮಕ್ಕೆ ಶಾಂತಿ ಸಿಗಲೆಂದು ದೇವರಲ್ಲಿ ಮೊರೆಹೋಗುತ್ತಾರೆ.

ಅಮೆರಿಕ ಜಪಾನಿನ ಮೇಲೆ ಹೀಗೆ ಎರಡು ಅಣುಬಾಂಬುಗಳನ್ನು ಪ್ರಯೋಗಿಸಿ ಜಗತ್ತಿಗೆ ಇಂತಹ ಭೀಕರ ಅಸ್ತ್ರದ ಕಲ್ಪನೆಯನ್ನು ಮೊದಲ ಬಾರಿಗೆ ಮಾಡಿಕೊಟ್ಟಿತು. ಮಾನವನ ಇತಿಹಾಸದಲ್ಲಿ ಈ ದುರಂತವನ್ನು ಮಾನವನೇ ಎಸಗಿದ ಅತ್ಯಂತ ಭೀಕರ ನಾಶ ಎಂದೇ ಹೆಸರಿಸಬಹುದು. ಅಣುಬಾಂಬಿನಿಂದ ಸಕಲಜೀವರಾಶಿಗಳ ಸರ್ವನಾಶ ಖಂಡಿತ ಎನ್ನುವುದು ತಿಳಿದಿದ್ದರೂ ಮಾನವ ,ಅದರ ಶಾಶ್ವತ ನಿವಾರಣೆಗೆ ಪರಿಣಾಮಕಾರಿಯಾದ ಮಾರ್ಗ ಅನುಸರಿಸುತ್ತಿಲ್ಲವೆನ್ನುವುದು ಈಗಿನ ಕಾಲದ ದುರಂತಗಳಲ್ಲೊಂದು. ●

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

---

೧. ತೂಲಿಕೆ
(ಅ) ಒಲೆ
(ಆ) ತಳ್ಳುವುದು
(ಇ) ತೊಲೆ
(ಈ) ಚಿತ್ರಕಾರನ ಕುಂಚ

೨. ದೌರ್ಬಲ
(ಅ) ಶಕ್ತಿ ಇಲ್ಲದಿರುವುದು
(ಆ) ಬಹಳ ಬಲ
(ಇ) ತೋಳಿನ ಶಕ್ತಿ
(ಈ) ರಭಸ

೩. ನಿವಾಳಿಸು
(ಅ) ತಪ್ಪಿಸು
(ಆ) ಅತ್ತಿತ್ತ ಸುಳಿದಾಡಿಸು
(ಇ) ಬಿಟ್ಟುಬಿಡು
(ಈ) ಕಳಿಸು

೪. ಪಟ್ಟು
(ಅ) ಹಿಡಿತ
(ಆ) ಪದರು
(ಇ) ಬುದ್ಧಿವಂತಿಕೆ
(ಈ) ಬಟ್ಟೆ

೫. ಪರಂತಪ
(ಅ) ಶತ್ರುಗಳಿಗೆ ಭಯಂಕರ
(ಆ) ಅತಿ ಶ್ರೇಷ್ಠ
(ಇ) ಬಹಳ ಕಾಲ
(ಈ) ಋಷಿ

೬. ಉದೀರ್ಣ
(ಅ) ಚೆಲ್ಲಿದ
(ಆ) ಸಮುದ್ರ
(ಇ) ಏಳಿಗೆಗೆ ಬಂದ
(ಈ) ಚೆಲ್ಲಾಪಿಲ್ಲಿ

೭. ಅನುತ್ತಮ
(ಅ) ಕೀಳು
(ಆ) ಶ್ರೇಷ್ಠ
(ಇ) ಸಾಮಾನ್ಯ
(ಈ) ಹೋಲಿಕೆಯಿಲ್ಲದ

೮. ಅನುಪಪನ್ನ
(ಅ) ಹೋಲಿಕೆಯಿಲ್ಲದ
(ಆ) ಮೋಜಿನ
(ಇ) ಆಯಕಟ್ಟು
(ಈ) ಸಿದ್ಧವಾಗದ

೯. ಪಾಟವ
(ಅ) ಕೌಶಲ
(ಆ) ಬಟ್ಟೆ
(ಇ) ಚಿತ್ರಕಾರ
(ಈ) ಒಂದು ವಾದ್ಯ

೧೦. ಯದ್ಧವಿಷ್ಯ
(ಅ) ಯುದ್ಧದ ಗತಿ
(ಆ) ಅದೃಷ್ಟವಾದಿ
(ಇ) ಯಾವಾಗಲೋ
(ಈ) ಇದೀಗಲೇ

೧೧. ಆರೋಗಣೆ
(ಅ) ಏರಿ ಹೋಗುವುದು
(ಆ) ರೋಗ ನಿವಾರಣೆ
(ಇ) ಪಿಡುಗು
(ಈ) ಊಟ

೧೨. ವಿಲೋಭಿತ
(ಅ) ಕಡೆದ
(ಆ) ತತ್ತರಿಸಿದ
(ಇ) ಆಸೆಗೆ ಸಿಕ್ಕಿಸಲ್ಪಟ್ಟ
(ಈ) ಚಿಂತೆಗೊಳಗಾದ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

೧. ತೂಲಿಕೆ

(ಈ) ಚಿತ್ರಕಾರನ ಕುಂಚ: ಹತ್ತಿಯ ಬತ್ತಿ; ಹತ್ತಿಯ ಹಾಸಿಗೆ. ಹಂಸ ತೂಲಿಕಾ ತಲ್ಪ ಎಂದರೆ ಹಂಸದ ತುಪ್ಪುಳಿಂದ ಮಾಡಿದ ಹಾಸಿಗೆ (ಸಂ. ತೂಲ = ಹತ್ತಿಗಿಡ.)

೨. ದೋರ್ಬಲ

(ಇ) ತೋಳಿನ ಶಕ್ತಿ, ಭುಜಬಲ, ಪರಾಕ್ರಮ. (ಸಂ. ದೋಸ್=ತೋಳು +ಬಲ)

೩. ನಿವಾಳಿಸು

(ಅ) ಅತ್ತಿತ್ತ ಸುಳಿದಾಡಿಸು, ದೃಷ್ಟಿ ಅಥವಾ ಅನಿಷ್ಟ ನಿವಾರಣೆಗಾಗಿ ತಲೆಯ ಮೇಲೆ ಅಥವಾ ಮುಖದ ಎದುರು ಮೇಲಿಂದ ಕೆಳಗೆ ನೀರು, ಓಕುಳಿ, ಆರತಿ, ಆಯುಧ ಇತ್ಯಾದಿಗಳನ್ನು ಸುಳಿದಾಡಿಸು. (ನೀರಾಜಿಸು)

೪. ಪಟ್ಟು

(ಅ) ಹಿಡಿತ; ಬಿಗುವು, ನಿರ್ಧಾರ, ಹಟ. ಉದಾ- ಹಿಡಿದ ಪಟ್ಟು ಬಿಡಲಿಲ್ಲ; ಅವನ ಹತ್ತಿರ ಇನ್ನೂ ಅನೇಕ ಪಟ್ಟುಗಳಿವೆ ಅಂದರೆ ಉಪಾಯದಿಂದ ಹಿಡಿಯುವ ತಂತ್ರಗಳಿವೆ. (ಕನ್ನಡ)

೫. ಪರಂತಪ

(ಅ) ಶತ್ರುಗಳಿಗೆ ಭಯಂಕರ, ವಿರೋಧಿಗಳನ್ನು ಪೀಡಿಸುವವ, ಎದುರು ಬಿದ್ದವರನ್ನು ಧ್ವಂಸ ಮಾಡುವವ. (ಸಂ.ಪರಂ=ವಿರೋಧಿಯನ್ನು, ತಪ=ಸುಡುವವ.)

೬. ಉದೀರ್ಣ

(ಇ) ಏಳಿಗೆಗೆ ಬಂದ, ಉತ್ಕರ್ಷ ಹೊಂದಿದ, ಮೇಲೇರಿದ, ಅಭಿವೃದ್ಧಿಗೊಂಡ; ಶ್ರೇಷ್ಠ, ಮಹಾತ್ಮ (ಸಂ.)

೭. ಅನುತ್ತಮ

(ಇ) ಶ್ರೇಷ್ಠ, ಬಹಳ ಉತ್ತಮ. ಉದಾ- ಅವನ ಕವಿತಾಶಕ್ತಿ ಅನುತ್ತಮವಾಗಿದೆ. (ಸಂ.)

೮. ಅನುಪಪನ್ನ

(ಈ) ಸಿದ್ಧವಾಗದ, ಸಾಧಿಸಲ್ಪಡದ; ಸತ್ಯವೆಂದು ಪ್ರಮಾಣಿತವಾಗದ. ಉದಾ: ಅನುಪಪನ್ನವಾದ ತರ್ಕಗಳು, ಈ ಕಾರ್ಯ ಅನುಪಪನ್ನವಾಗಿದೆ. (ಸಂ.ಅನ್=ಅಲ್ಲ, ಉಪಪನ್ನ=ಹತ್ತಿರ ಬಂದದ್ದು.)

೯. ಪಾಟವ

(ಅ) ಕೌಶಲ್ಯ, ಚಾತುರ್ಯ, ಚುರುಕುತನ, ಚಟುವಟಿಕೆ. ಉದಾ-ಹಸ್ತಪಾಟವ, ವಾಕ್‌ಪಾಟವ. (ಸಂ. ಪಟು = ಚುರುಕುಳ್ಳ)

೧೦. ಯದ್ಭವಿಷ್ಯ

(ಅ) ದೈವವಾದಿ, ಆಗತಕ್ಕದ್ದು ಆಗಿಯೆ ತೀರುತ್ತದೆ ಎನ್ನುವ ಅದೃಷ್ಟವಾದಿ. (ಸಂ. ಯದ್ ಯಾವುದು, ಭವಿಷ್ಯತಿ = ಆಗುತ್ತದೆ- ಎಂಬುದರಿಂದ.)

೧೧. ಆರೋಗಣೆ

(ಈ) ಊಟ, ಭೋಜನ, ಹೆಚ್ಚಾಗಿ ದೇವರ ಅಥವಾ ದೊಡ್ಡವರ ಭೋಜನ. ಉದಾ- ಆರೋಗಣೆಯಾಯಿತೇ ಸ್ವಾಮಿ? (ಕನ್ನಡ)

೧೨. ವಿಲೋಭಿತ

(ಇ) ಆಸೆಗೆ ಸಿಲುಕಿಸಲ್ಪಟ್ಟ, ಆಸೆ ತೋರಿಸಿ ಅಡ್ಡದಾರಿಗೆಳೆಯಲ್ಪಟ್ಟ. ಉದಾ- ಅವನ ಸವಿಮಾತಿನಿಂದ ವಿಲೋಭಿತಳಾಗಿ ಅವಳು ಮೋಸಹೋದಳು. (ಸಂ. ವಿ = ವಿಶೇಷ, ಲೋಭಿತ = ಆಸೆಗೊಳಿಸಲಾದ.)

**ನಿಮ್ಮ ಶಬ್ದಶಕ್ತಿಯ ತರಗತಿ**

ನೀವು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ತಿಳಿಯಿರಿ.

೬-೮ ಸರಿಯಿದ್ದರೆ ... ಸಾಧಾರಣ

೯-೧೦ ಸರಿಯಿದ್ದರೆ ... ಉತ್ತಮ

೧೧-೧೨ ಸರಿಯಿದ್ದರೆ ... ಅತ್ಯುತ್ತಮ

# ಶತಕಗಳ ಸುರಿಮಳೆಗೈದ ಕೆನ್ ಬ್ಯಾರಿಂಗ್ಟನ್

ಪಂದ್ಯ: ಇಂಗ್ಲೆಂಡ್-ಪಾಕಿಸ್ತಾನ, ಮೂರನೇ ಟೆಸ್ಟ್-೧೯೬೭
ಸ್ಥಳ: ಓವಲ್. ದಿನಾಂಕ: ಅಗಸ್ಟ ೨೪, ೨೫, ೨೬, ೨೮




• ಆದಿಕೇಶವ

**ಅಂದಿನ ಆಟ !**
**ಇಂದಿನ ನೋಟ !**

ಇಂಗ್ಲೆಂಡ್ ಮತ್ತು ಪಾಕಿಸ್ತಾನ ನಡುವಿನ ಸರಣಿಯ ಅಂತಿಮ ಪಂದ್ಯ ಇದಾಗಿತ್ತು. ಇದರ ಹಿಂದಿನ ವಾರವಷ್ಟೆ ಟ್ರೆಂಟ್‌ಬ್ರಿಜ್‌ನಲ್ಲಿ ನಡೆದ ಎರಡನೆಯ ಟೆಸ್ಟ್ ಪಂದ್ಯವನ್ನು ಇಂಗ್ಲೆಂಡ್ ಹತ್ತು ಹುದ್ದರಿಗಳಿಂದ ಭರ್ಜರಿಯಾಗಿಯೇ ಗೆದ್ದುಕೊಂಡಿತ್ತು. ಅಲನ್ ನಾಟ್, ಡೆರಿಕ್ ಅಂಡರ್‌ವುಡ್ ಮತ್ತು ಕೆನ್ ಬ್ಯಾರಿಂಗ್ಟನ್ (ಅಜೇಯ ೧೦೯) ಪಾಕ್‌ನ ಗೆಲುವಿನ ಆಸೆಯನ್ನು ಹುಡಿಗೂಡಿಸಿದ್ದರು.

ಓವಲ್‌ನಲ್ಲಿ ಆಟಕ್ಕಿಳಿಯುವ ಮುನ್ನ ಬ್ಯಾರಿಂಗ್ಟನ್‌ಗೆ ಒಂದೇ ಆಸೆ. ಏನಾದರೂ ಮಾಡಿ ತಾಯ್ನಾಡಿನ ಅಂಕಣದಲ್ಲಿ ತನ್ನ ಪ್ರಪ್ರಥಮ ಶತಕ ಗಳಿಸಬೇಕೆಂಬುದು. ಇದುವರೆಗಿನ ಟೆಸ್ಟ್ ಜೀವನದಲ್ಲಿ ೧೮ ಶತಕ ಹೊಡೆದಿದ್ದ ಬ್ಯಾರಿಂಗ್ಟನ್ ಓವಲ್‌ನಲ್ಲಿ ಒಂದೂ ಸೆಂಚುರಿ ಬಾರಿಸಿರಲಿಲ್ಲ.

ಬ್ಯಾರಿಂಗ್ಟನ್ ಸರ್ರೆ ತಂಡದ ಸರ್ವೋತ್ಕೃಷ್ಟ ಬ್ಯಾಟ್ಸ್‌ಮನ್ ಎಂಬ ಖ್ಯಾತಿ ಪಡೆದಿದ್ದ. ಆತನಿರುವವರೆಗೆ ತಂಡಕ್ಕೆ ಚಿಂತೆ ಇರಲಿಲ್ಲ. ತನ್ನ ನೆಲದಲ್ಲಿ ನಡೆದ ಬಹುತೇಕ ಕೌಂಟಿ ಪಂದ್ಯಗಳಲ್ಲಿ ಆತ ಹಿರಿಮೆ ಮೆರೆದಿದ್ದ. ಆದರೆ ತಾಯ್ನಾಡಿನ ಅಭಿಮಾನಿಗಳ ಎದುರು ಒಂದೂ ಟೆಸ್ಟ್ ಶತಕ ಗಳಿಸಿಲ್ಲವಲ್ಲ ಎಂಬ ಕೊರಗು ಒಳಗೇ ಕೊರೆಯುತ್ತಿತ್ತು.

ಈ ಸಲವಾದರೂ ಓವಲ್‌ದಲ್ಲಿಯ ಶತಕದ ದಾಹ ತೀರಿಸಿಕೊಳ್ಳಬೇಕು ಎಂಬ ಬಯಕೆ ಕೆನ್ ಬ್ಯಾರಿಂಗ್ಟನ್‌ದು. ಇದಕ್ಕೂ ಮುಂಚೆ ಬ್ಯಾರಿಂಗ್ಟನ್ ವೆಸ್ಟ್‌ಇಂಡೀಸ್ ವಿರುದ್ಧದ ಸರಣಿಯಲ್ಲಿ ತಂಡದಿಂದ ಹೊರಗುಳಿಯಬೇಕಾಗಿ ಬಂದಿತ್ತು. ಅತ್ಯು

ತ್ತಮ ಬ್ಯಾಟ್ಸ್‌ಮನ್‌ಗಳ ದಂಡೇ ಇದ್ದ ಆಗ ಬ್ಯಾರಿಂಗ್ಟನ್‌ಗೆ ಇಂಗ್ಲೆಂಡ್ ತಂಡದಲ್ಲಿ ಸ್ಥಾನ ಸಿಕ್ಕಿರಲಿಲ್ಲ.

ನಂತರ ೧೯೬೨ರಲ್ಲಿ ಪಾಕಿಸ್ತಾನದ ವಿರುದ್ಧ ತಂಡದಲ್ಲಿ ಸ್ಥಾನ ಪಡೆದ ಬ್ಯಾರಿಂಗ್ಟನ್ ತನ್ನಲ್ಲಿದ್ದ ಸಾಮರ್ಥ್ಯ ಉಮೇದನ್ನು ಪ್ರದರ್ಶಿಸಿ ಪ್ರತಿಯೊಬ್ಬರ ಗಮನ ಸೆಳೆಯಲಾರಂಭಿಸಿದ. ಮೊದಲೆರಡು ಟೆಸ್ಟ್‌ಗಳಲ್ಲಿ ಶತಕ ಬಾರಿಸಿದ ಕೆನ್ ಬ್ಯಾರಿಂಗ್ಟನ್ ಸಹಜವಾಗಿಯೇ ಎಲ್ಲರ ಕಣ್ಣು ತನ್ನ ಮೇಲೆ ಬೀಳುವಂತೆ ಮಾಡಿಕೊಂಡ.

ತನ್ನ ಫೇವರಿಟ್ ಓವಲ್ ಪಿಚ್‌ನಲ್ಲಿ ಬ್ಯಾರಿಂಗ್ಟನ್ ಮತ್ತೆ ಮಿಂಚಿ ಶತಕದ ಹ್ಯಾಟ್ರಿಕ್ ಸಾಧನೆ ಮಾಡುವನೇ ಎಂಬ ಕುತೂಹಲ ಪ್ರತಿಯೊಬ್ಬನಲ್ಲಿ ಮೂಡಿದ್ದರೆ, ಪಾಕಿಸ್ತಾನಿಯರಿಗೆ ಇವನನ್ನು ಔಟ್ ಮಾಡಲು ಏನು ಮಾಡಬೇಕೆಂಬ ವಿಚಾರದಿಂದ ತಲೆಬಿಸಿಯಾಗಿತ್ತು.

ಮೂರು ಟೆಸ್ಟ್‌ಗಳ ಈ ಸರಣಿಯಲ್ಲಿ ಪ್ರಥಮ ಟೆಸ್ಟ್ ಡ್ರಾ ಆಗಿತ್ತು. ಎರಡನೆಯ ಟೆಸ್ಟ್ ಇಂಗ್ಲೆಂಡ್ ಪಾಲಾಗಿದ್ದರಿಂದ ಪಾಕಿಸ್ತಾನಕ್ಕೆ ಏನಾದರೂ ಮಾಡಿ ಇದನ್ನು ಗೆಲ್ಲಲೇಬೇಕೆಂಬ ಸ್ಥಿತಿ. ಆದರೆ ತಾಯ್ನಾಡಿನಲ್ಲಿ ಸರಣಿ ಬಿಟ್ಟುಕೊಡಬಾರದೆಂಬ ಹಟ ಇಂಗ್ಲೆಂಡಿನದು. ಇವೆರಡು ಕಾರಣದಿಂದ ಅಂತಿಮ ಟೆಸ್ಟಿಗೆ ಎಲ್ಲಿಲ್ಲದ ಮಹತ್ವ ಬಂದಿತ್ತು.

## ಮೈದಾನದಲ್ಲಿ

ಮಂಜಿನಿಂದ ತುಂಬಿದ್ದ ಆಗಸ್ಟ್ ೨೪ರ ಮುಂಜಾನೆ ಟಾಸ್ ಗೆದ್ದ ಇಂಗ್ಲೆಂಡ್ ನಾಯಕ ಬ್ರಿಯಾನ್ ಕ್ಲೋಸ್ ಪಾಕಿಸ್ತಾನಕ್ಕೆ ಬ್ಯಾಟಿಂಗ್ ಮಾಡಲು ಆಮಂತ್ರಿಸಿದ. ಅವನ ಈ ನಿರ್ಧಾರ ಆರಂಭದಲ್ಲೇ ಫಲ ಕೊಟ್ಟರೆ, ಏನಾಯಿತೆಂದು ತಿಳಿಯಲು ಪಾಕ್‌ಗೆ ಬಹಳ ಹೊತ್ತು ಬೇಕಾಯಿತು. ಬೃಹತ್ ಸ್ಕೋರು ಗಳಿಸುವ ಕನಸಿನಿಂದ ಮೈದಾನಕ್ಕಿಳಿದಿದ್ದ ಆರಂಭದ ಜೋಡಿಗೆ ಹನೀಫ್ ಮೊಹಮ್ಮದ್(೩) ಮೊಹಮ್ಮದ ಇಲಿಯಾಸ್(೨)ಗೆ ಕೆನ್ ಹಿಗ್ಸ್(೩-೬೧) ಹಾಗೂ ಜೆಫ್ ಅರ್ನಾಲ್ಡ್ (೫-೫೮) ಮಾರಕವಾಗಿ ಕಂಡರು.

ಇಷ್ಟಾದರೂ ಪಾಕಿಸ್ತಾನ ಎಚ್ಚೆತ್ತುಕೊಳ್ಳಲಿಲ್ಲ. ಸ್ಕೋರು ಇನ್ನೂ ೧೭ ದಾಟಿರಲಿಲ್ಲ ಮಜೀದ್ ಖಾನ್ (೬) ಅರ್ನಾಲ್ಡ್‌ಗೆ ಎರಡನೆ ಬಲಿಪಶುವಾಗಿ ಹೊರನಡೆದ. ಇಂಗ್ಲೆಂಡ್‌ನವರು ಗೆದ್ದೆಬಿಟ್ಟೆವೆಂಬ ಹುರುಪಿನಲ್ಲಿದ್ದರು. ಆಗ ಸಯೀದ ಅಹ್ಮದ್ (೩೮) ಮತ್ತು ಮುಸ್ತಾಕ್ ಮೊಹಮ್ಮದ್ (೬೬) ತಂಡದ ಸಂಪೂರ್ಣ ನಾಶಕ್ಕೆ ತಡೆ ಒಡ್ಡಿದರು.

ಇವರಿಬ್ಬರಿಂದ ಸ್ಫೂರ್ತಿ ಪಡೆದ ಜಾವೇದ್ ಬರ್ಕಿ (೨೭) ಅನಿಫ್ ಇಕ್ಬಾಲ್ (೨೬) ಮತ್ತು ಇಂತಿಕಾಬ್ ಆಲಂ (೨೦) ತಮಗಾದಷ್ಟು ಕಾಣಿಕೆ ನೀಡಿದರು. ಇವರೆಲ್ಲರ ತಿಣುಕಾಟದ ಆಟ ಮುಗಿದಾಗ ಪಾಕಿಸ್ತಾನ ೨೧೬ಕ್ಕೆ ಸರದಿ ಮುಗಿಸಿ ಅಲ್ಪಮಟ್ಟಿಗೆ ತನ್ನ ಮರ್ಯಾದೆ ಉಳಿಸಿಕೊಂಡಿತು.

ಎದುರಾಳಿಯನ್ನು ಬೇಗನೇ ಕಬಳಿಸಿದ ಉತ್ಸಾಹ ಆತಿಥೇಯ ಇಂಗ್ಲೆಂಡ್ ಶಿಬಿರದಲ್ಲಿ ಬಹಳ ಕಾಲ ಉಳಿಯಲಿಲ್ಲ. ಆರಂಭದಲ್ಲಿ ಅವರ ಪಾಡು ಪಾಕ್‌ನಂತೆಯೇ ಆಯಿತು. ಜೆಫ್ 'ಬಾಯ್ಕಾಟ್ ಗಂಟಲು ಬೇನೆಯಿಂದ ಇನ್ನಿಂಗ್ಸ್ ಆರಂಭಿಸಲು ಅಸಮರ್ಥವಾದ ನಂತರ ನಾಯಕ ಕ್ಲೋಸ್ ಕೌಡ್ರಿಯೊಂದಿಗೆ ಆಟ ಆರಂಭಿಸಲು ಮುಂದಾದರೂ ಅದರಲ್ಲಿ ಯಶಸ್ಸು ಕಾಣಲಿಲ್ಲ. ಮೊದಲೆರಡು ವಿಕೆಟ್‌ಗಳು ಬಿದ್ದಾಗ ಇಂಗ್ಲೆಂಡ್ ಸ್ಕೋರು ಕೇವಲ ೩೫.

ಆಗ ಬಂದ ಕೆನ್ ಬ್ಯಾರಿಂಗ್ಟನ್ (೧೪೨) ಆಟದ ಗತಿಯನ್ನೇ ಬದಲಿಸಿಬಿಟ್ಟ. ತಾಯ್ನಾಡಿನ ಅಪಾರ ಬೆಂಬಲಿಗರ ದೀರ್ಘ ಕರತಾಡನ ಚೀತ್ಕಾರದ ಮಧ್ಯೆ ಕಣಕ್ಕಿಳಿದ ಬ್ಯಾರಿಂಗ್ಟನ್ ಟಾಮ್ ಗ್ರಾವೆನಿ (೭೭) ಜತೆಗೂಡಿ ಬಹುಮೂಲ್ಯ ೧೪೧ ರನ್ ಸೇರಿಸಿ ಪಾಕಿಸ್ತಾನಿಯರಿಗೆ ಮೈಕೈ ಪರಚಿಕೊಳ್ಳುವಂತೆ ಮಾಡಿದ.

ಗ್ರಾವೆನಿ ಚೊಕ್ಕ ಮತ್ತು ತಾಳ್ಮೆಯುತ ಶೈಲಿಯ ಆಟದಿಂದ ೧೦ ಬೌಂಡರಿಗಳಿದ್ದ ೭೭ ರನ್ ಗಳಿಸಿದರೆ ಬ್ಯಾರಿಂಗ್ಟನ್ ಆಕರ್ಷಕ ಆಫ್‌ಡ್ರೈವ್ ಮತ್ತು ಶಕ್ತಿಶಾಲಿ ಹುಕ್ಸ್‌ಗಳಿಂದ ಕೂಡಿದ ಅಪಾಯಕಾರಿ ಆಟಕ್ಕೆ ಕಡಿವಾಣ ಹಾಕಲು ಪಾಕ್ ತಂಡದ ಇಂತಿಕಾಬ್ ಆಲಂ, ಗ್ರಾವೆನಿಯನ್ನು ಬಲಿ ತೆಗೆದುಕೊಳ್ಳುವ ಮೂಲಕ ಯಶಸ್ವಿಯಾದ.

ಪಾಕಿಸ್ತಾನದ ಈ ಸಮಾಧಾನ ಅಷ್ಟಕ್ಕೇ ಸೀಮಿತವಾಯಿತು. ತನ್ನ ನೆಲದಲ್ಲಿ ಪ್ರಪ್ರಥಮ ಶತಕ ದಾಖಲು ಮಾಡಿದ ಬ್ಯಾರಿಂಗ್ಟನ್ ಮತ್ತಷ್ಟು ಪರಿ

ಣಾಮಕಾರಿಯಾಗಿ ಬ್ಯಾಟಿಂಗ್ ಮಾಡಿದ್ದಲ್ಲದೆ ಪ್ರವಾಸಿಗರ ಬೌಲಿಂಗನ್ನು ಮನಬಂದಂತೆ ಹಣೆದ. ದಿನದ ಆಟ ಮುಗಿದಾಗ ಇಂಗ್ಲೆಂಡ್ ಕೇವಲ ಮೂರು ಹುದ್ದರಿ ಕಳೆದುಕೊಂಡು ೨೫೭ ಓಟಗಳೊಂದಿಗೆ ಸುಭದ್ರ ಸ್ಥಿತಿಯಲ್ಲಿತ್ತು.

ಮರುದಿನ ಬ್ಯಾರಿಂಗ್ಟನ್ ಔಟಾಗುವ ಮುನ್ನ ಇಂಗ್ಲೆಂಡಿನ ಆರು ಪ್ರಮುಖ ಮೈದಾನದಲ್ಲಿ ಶತಕ ದಾಖಲು ಮಾಡಿದ ಇಂಗ್ಲೆಂಡಿನ ಪ್ರಥಮ ಬ್ಯಾಟ್ಸ್‌ಮನ್ ಎಂಬ ಹೆಗ್ಗಳಿಕೆ ಪಡೆದಿದ್ದಲ್ಲದೆ ತನ್ನ ೭೪ ಟೆಸ್ಟ್‌ಗಳಲ್ಲಿ ೫೨ ಅರ್ಧಶತಕಗಳನ್ನು ಬಾರಿಸಿ ಲೆನ್‌ಹಟನ್ ಸ್ಥಾಪಿಸಿದ್ದ ಜಾಗತಿಕ ದಾಖಲೆ ಸರಿಗಟ್ಟಿದ.

ಬ್ಯಾರಿಂಗ್ಟನ್ ನಿರ್ಗಮನದ ನಂತರವೂ ಇಂಗ್ಲೆಂಡ್ ಆರ್ಭಟ ನಿಲ್ಲಲಿಲ್ಲ. ಫ್ರೆಡ್ಡಿ ಟಿಟ್‌ಮಸ್(೬೫) ಜೆಫ್ ಆರ್ನಾಲ್ಡ್ (೫೯) ಪಾರ್ಕ್‌ನ ವೇಗದ ದಾಳಿಯನ್ನು ಎರ್ರಾಬಿರ್ರಿಯಾಗಿ ಶಿಕ್ಷಿಸಿ ತಂಡದ ಸ್ಕೋರನ್ನು ೪೦೦ರ ಗಡಿದಾಟಿಸಿದರು. ಕಡೆಗೂ ಇಂಗ್ಲೆಂಡ್ ೪೧೪ಕ್ಕೆ ತನ್ನೆಲ್ಲ ವಿಕೆಟ್ ಕಳೆದುಕೊಂಡಾಗ ಪಾಕ್ ಎಲ್ಲರನ್ನೂ ಔಟ್ ಮಾಡಿದೆವು ಎಂದು ಸಮಾಧಾನಪಟ್ಟಿತು. ಆದರ ಹಿಂದೆಯೇ ಇನ್ನಿಂಗ್ಸ್ ಸೋಲು ತಪ್ಪಿಸಿಕೊಳ್ಳಲು ೨೨೪ ಓಟ ಮಾಡಬೇಕಲ್ಲ ಎಂಬ ಚಿಂತೆಯಿಂದ ಎರಡನೆಯ ಇನ್ನಿಂಗ್ಸ್ ಆರಂಭಕ್ಕೆ ಮಾನಸಿಕವಾಗಿ ಸಿದ್ಧಗೊಂಡಿತು.

ಪಾಕಿಸ್ತಾನ ೨೨೪ ಓಟಗಳ ಭಾರೀ ಹಿನ್ನಡೆಯೊಂದಿಗೆ ಎರಡನೆಯ ಸರದಿಗೆ ಇಳಿದು ತನ್ನ ಬೇಜವಾಬ್ದಾರಿತನದ ಆಟಕ್ಕೆ ತಕ್ಕ ಶಾಸ್ತಿ ಅನುಭವಿಸಿತು. ಇಂತಹ ಪರಿಸ್ಥಿತಿಯಲ್ಲಿ ಯಾವ ರೀತಿಯ ಆಟ ಬೇಕು ಎಂಬುದನ್ನೂ ಲೆಕ್ಕ ಹಾಕದ ಪಾಕಿಸ್ತಾನಿ ಬ್ಯಾಟ್ಸ್‌ಮನ್‌ಗಳು ಹಿಗ್ಸ್‌ನ (೫-೫೮) ಬಿರುಗಾಳಿಯಂಥ ಬೌಲಿಂಗಿಗೆ ಯಾವುದೇ ಪ್ರತಿರೋಧ ತೋರದೆ ಒಬ್ಬರಾದ ಮೇಲೊಬ್ಬರಂತೆ ವಿಕೆಟ್ ಒಪ್ಪಿಸಿದಾಗ ಪಾಕ್‌ನ ಸೋಲು ಖಚಿತವಾಗಿತ್ತು. ಅದರ ಮೊದಲ ನಾಲ್ಕು ಹುದ್ದರಿಗಳು ಬಿದ್ದಾಗ ಸ್ಕೋರು ಬರೀ ೨೬.

ಇಂತಹ ಪರಿಸ್ಥಿತಿಯಲ್ಲಿ "ಮರುಭೂಮಿಯಲ್ಲಿ ಓಯಾಸಿಸ್" ಎಂಬಂತೆ ಅತ್ಯಮೋಘ ಆಟ ಪ್ರದರ್ಶಿಸಿದ ಆಸೀಫ್ ಇಕ್ಬಾಲ್ (೧೪೬) ೨೦೦



ನಿಮಿಷಗಳ ಕಾಲ ಮೈದಾನದಲ್ಲಿ ನಿಂತು ೨೫೫ ಎಸೆತ ಎದುರಿಸಿ ಹರಾಜಾಗುತ್ತಿದ್ದ ತಮ್ಮವರ ಮಾನ ಉಳಿಸಿ ಇನ್ನಿಂಗ್ಸ್ ಸೋಲಿನಿಂದ ಪಾರು ಮಾಡಿದರು.

ಸೋಮವಾರ ಬ್ಯಾಂಕ್ ರಜೆಯ ದಿನ ಅಸೀಫ್ ಆಡಲು ಬಂದಾಗ ತಂಡದ ಸ್ಕೋರು ಏಳು ಹುದ್ದರಿಗಳಿಗೆ ೫೩. ಇಂಗ್ಲೆಂಡಿನ ನಾಯಕ ನಾಗಲಿ, ಬೌಲರ್ ಹಿಗ್ಸ್ ಆಗಲಿ ಆಟಕ್ಕೆ ಈ ರೀತಿಯ ತಿರುವು ಬರುತ್ತದೆಂದು ಕನಸಿನಲ್ಲಿಯೂ ಊಹಿಸಿರಲಿಕ್ಕಿಲ್ಲ. ಆದರೆ ಅಸೀಫ್ ಇಕ್ಬಾಲ್ ಆಟದ ಗತಿಯನ್ನು ಬದಲಾಯಿಸಿದ. ಎರಡು ಸಿಕ್ಸರ್ ಮತ್ತು ೨೧ ಬೌಂಡರಿ ಬಾರಿಸಿದ ಅಸೀಫ್ ಒಂಭತ್ತನೆ ಹುದ್ದರಿಯ ಟೆಸ್ಟ್ ದಾಖಲೆ ಜೊತೆಯಾಟದಲ್ಲಿ ಇಂತಿಕಾಬ್ ಅಲಂ (೫೧) ಜತೆ ೧೭೦ ನಿಮಿಷದಲ್ಲಿ ೧೯೦ ಓಟ ಸೇರಿಸಿದ.

ಅಸೀಫ್ ತನ್ನ ಪ್ರಥಮ ಟೆಸ್ಟ್ ಶತಕ ಗಳಿಸಿದಾಗ ಗ್ಯಾಲರಿಯಲ್ಲಿ ಸಪ್ಪೆಯಾಗಿ ಕುಳಿತಿದ್ದ ಪಾಕಿಸ್ತಾನಿ ಪ್ರೇಕ್ಷಕರು ಮೈದಾನಕ್ಕೆ ನುಗ್ಗಿ ಆತನಿಗೆ ಅಭಿನಂದನೆಯ ಸುರಿಮಳೆಯನ್ನೇ ಸುರಿಸಿದರು. ಇದರಿಂದ ಚೇತರಿಸಿಕೊಳ್ಳಲು ಅಸೀಫ್‌ಗೆ ಐದು ನಿಮಿಷ ಬೇಕಾಯಿತು.

ಪಾಕಿಸ್ತಾನ ತನ್ನ ಇನ್ನಿಂಗ್ಸನ್ನು ೨೫೫ಕ್ಕೆ ಮುಗಿಸಿ ಇಂಗ್ಲೆಂಡನ್ನು ಮತ್ತೆ ಬ್ಯಾಟಿಂಗಿಗೆ ಇಳಿಯುವಂತೆ ಮಾಡಿತು. ಗೆಲ್ಲಲು ಸುಲಭದ ೩೧ ಓಟಗಳ ಗುರಿಯೊಂದಿಗೆ ನಾಲ್ಕನೆ ದಿನ ಇನ್ನಿಂಗ್ಸ್ ಆರಂಭಿಸಿದ ಇಂಗ್ಲೆಂಡ್ ಬೇಗನೇ ಆಟ ಮುಗಿಸುವ ತರಾತುರಿಯಲ್ಲಿ ಎರಡು ಹುದ್ದರಿಗಳನ್ನು ಕಳೆದುಕೊಳ್ಳಬೇಕಾಯಿತು. ಆದರೆ ಬ್ಯಾರಿಂಗ್ಟನ್ ಮತ್ತು ಡೆನಿಸ್ ಅಮಿಸ್ ಜಯದ ವ್ಯವಹಾರವನ್ನು ಮುಗಿಸಿದರು.

ಇಂಗ್ಲೆಂಡ್ ಎಂಟು ಹುದ್ದರಿಗಳ ಅಭೂತಪೂರ್ವ ಜಯದೊಂದಿಗೆ ಸರಣಿಯನ್ನು ೨-೦ದೊಂದಿಗೆ ತನ್ನ ಮಡಿಲಿಗೆ ಹಾಕಿಕೊಂಡಿತು. ಇಂಗ್ಲೆಂಡಿನ ಗೆಲುವಿಗಿಂತ ಮುಖ್ಯವಾಗಿ ತವರಿನ ನೆಲದಲ್ಲಿ ಕೆನ್ ಬ್ಯಾರಿಂಗ್ಟನ್‌ನ ಅಮೋಘ ಆಟ ನೋಡಿದ ಪ್ರೇಕ್ಷಕ ಸಮೂಹ ಹುಚ್ಚೆದ್ದು ಕುಣಿದಾಡಿತು.

ಅಸೀಫ್ ಇಕ್ಬಾಲ್ ಹೇಳಿದ: "ನಾನು ವಿಕೆಟ್‌ಗೆ ಹೋಗುವ ಮುನ್ನ ಕಳೆದುಕೊಳ್ಳಲು ಏನೂ ಉಳಿದಿರಲಿಲ್ಲ. ಅವಾಗಲೇ ನಮ್ಮ ಹಣೆಬರಹ ಬರೆದೇಬಿಟ್ಟಿತ್ತು. ಹೀಗಾಗಿ ನಾನು ನನ್ನ ಆಟ ಆಡಬೇಕೆಂದು ನಿರ್ಧಾರಮಾಡಿದೆ. ಇಂತಹುದರಲ್ಲಿ ನನ್ನಿಂದ ಶತಕ ಬರಬಹುದೆಂದು ಸ್ವತಃ ನಾನೇ ನಿರೀಕ್ಷಿಸಿರಲಿಲ್ಲ. ಅದೊಂದು ಅವಿಸ್ಮರಣೀಯ ಆಟ."

ಕೆನ್ ಬ್ಯಾರಿಂಗ್ಟನ್: "ಹೊ! ಈ ಬಗೆಗೆ ನಾನು ಹೇಗೆ ವರ್ಣಿಸಲಿ? ಇನ್ನೂ ತನಕ ನಾನು ಕನಸು ಕಾಣುತ್ತಿದ್ದೇನೆಯೇ ಎನಿಸುತ್ತಿದೆ. ಓವಲ್‌ನಲ್ಲಿ ನನ್ನದೇ ಆದ ಟೆಸ್ಟ್ ಶತಕ ಮಾಡಬೇಕೆಂಬ ಉತ್ಕಟ ಆಸೆಯಿತ್ತು. ಕೊನೆಗೂ ಅದನ್ನು ಸಾಧಿಸಿದೆ. ಇದಕ್ಕೆ ಟಾಮ್ ಗ್ರಾವೆನಿಗೆ ನಾನು ಚಿರಋಣಿ. ಗ್ರಾವೆನಿ ನನಗೆ ಉತ್ತಮ ಬೆಂಬಲ ನೀಡಿದ್ದರಿಂದ ಈ ಸಾಧನೆ ಮಾಡಿದೆ," ಎಂದ.

## ಪ್ರಥಮ ಟೆಸ್ಟ್

ಇಂಗ್ಲೆಂಡ್ ಮತ್ತು ಪಾಕಿಸ್ತಾನಿ ಆಟಗಾರರಿಂದ ಈ ಟೆಸ್ಟ್ ರನ್‌ಗಳ ಸುರಿಮಳೆಯನ್ನೇ ಕಂಡಿತು. ಇಂಗ್ಲೆಂಡಿನ ಬ್ಯಾರಿಂಗ್ಟನ್ (೧೪೮) ಮತ್ತು ಗ್ರಾವೆನಿ (೮೧) ಮೂರನೆ ಹುದ್ದರಿ ಜೊತೆಯಾಟದಲ್ಲಿ ಕೇವಲ ೨೨೩ ನಿಷಗಳಲ್ಲಿ ೨೦೧ ರನ್ ಸೇರಿಸಿದರೆ, ನಾವೇನು ಕಮ್ಮಿಯಿಲ್ಲ ಎನ್ನುವಂತೆ ಆಡಿದ ಪಾಕ್‌ನ ಹನೀಫ್ ಮೊಹಮ್ಮದ್ (ಅಜೇಯ ೧೮೭) ಮತ್ತು ಅಸೀಫ್ ಇಕ್ಬಾಲ್ (೭೬) ಎಂಟನೆ ಹುದ್ದರಿ ಜೊತೆಯಾಟದಲ್ಲಿ ೧೩೦ ರನ್ ಕೂಡಿ ಹಾಕಿದರು. ಹೀಗಾಗಿ ಈ ಟೆಸ್ಟ್ ನೀರಸ 'ಡ್ರಾ'ದಲ್ಲಿ ಮುಗಿಯಿತು.

## ಎರಡನೆ ಟೆಸ್ಟ್

ಟೆಂಟ್‌ಬ್ರಿಜ್‌ನಲ್ಲಿ ನಡೆದ ಎರಡನೆ ಟೆಸ್ಟಿನಲ್ಲಿ ಆಡುವ ಮೂಲಕ ಟೆಸ್ಟ್ ಕ್ರಿಕೆಟ್‌ಗೆ ಪದಾರ್ಪಣೆ ಮಾಡಿದ ಅಲನ್ ನಾಟ್ ಪ್ರಥಮ ಪ್ರಯತ್ನದಲ್ಲೇ ಪಾಕ್‌ನ ಏಳು ಆಹುತಿಗಳನ್ನು ಬಾಚಿಕೊಂಡ. ಇಂಗ್ಲೆಂಡ್ ಪ್ರವಾಸಿಗರಿಗೆ ಹತ್ತು ಹುದ್ದರಿಗಳ ಹೀನಾಯ ಸೋಲಿನ ಕಹಿ ನೀಡಿತು. ಈ ಪಂದ್ಯದಲ್ಲೂ ಬ್ಯಾರಿಂಗ್ಟನ್ (ಅಜೇಯ ೧೦೯) ಶತಕ ಬಾರಿಸಿದ. ●

# ಹೇಳದೆ 'ಹೇಳುವುದು' ಹೇಗೆ?

ಹಲವಾರು ರೀತಿಯಲ್ಲಿ ನಾವು ಹೇಳಬೇಕಾದುದನ್ನು ಹೇಳದೇ ಹೇಳಿಬಿಡಬಹುದು

• ತ. ಸುಕುಮಾರ್

ಒಂದು ವಿಶೇಷಕ್ಕೆ ನಾನೂ ನನ್ನ ಸ್ನೇಹಿತನೂ ಹೋಗಿದ್ದೆವು. ಆ ಮನೆಯ ಹೆಂಗಸು, "ಯಾಕೆ ಒಬ್ಬರೆ ಬಂದಿದ್ದೀರಿ? ನಿಮ್ಮ ಹೆಂಡತಿಯನ್ನೂ ಕರೆದುಕೊಂಡು ಬರುಬಹುದಿತ್ತಲ್ಲ?" ಎಂದು ಕೇಳಿದರು.

ನಾನು ನಗುವನ್ನು ಉತ್ತರವಾಗಿ ಕೊಟ್ಟು ಸುಮ್ಮನೆ ಇದ್ದುಬಿಟ್ಟೆ. ಆದರೆ ನನ್ನ ಸ್ನೇಹಿತ "ನನ್ನ ಹೆಂಡತಿಯಾ? ಅವಳೆಲ್ಲಿ ಬರ್‍ತಾಳೆ? ಅವಳಿಗೆ ದೊಡ್ಡ ಮನುಷ್ಯರ ಸಹವಾಸವೇ ಬೇಕು," ಎಂದು ಏನೇನೋ ಹೇಳಿಬಿಟ್ಟ.

ಆ ಮನೆಯ ಹೆಂಗಸಿನ ಮುಖ ಬಾಡಿ ಹೋಯಿತು.

"ನಿನ್ನ ಮಾತು ಕೇಳಿ, ಆ ಹೆಂಗಸಿನ ಮುಖ ಹೇಗೆ ಬಾಡಿಹೋಯಿತು ನೋಡು. ನೀನು ಹಾಗೆ ಹೇಳಬಾರದಿತ್ತು. ನೀನು ನಿನ್ನ ಹೆಂಡತಿಯನ್ನು ಬಯ್ಯುತ್ತಿ ಎಂದು ಎಣಿಸಿಕೊಂಡು, ನಿನಗೆ ಗೊತ್ತಾಗದ ಹಾಗೆಯೆ ಅವರನ್ನು ಅವಮಾನ ಮಾಡಿಬಿಟ್ಟದ್ದಿ. ಈ ವಿಶೇಷವನ್ನು ಸಂತೋಷದಿಂದ ಕೊಂಡಾಡಬೇಕೆಂದು ಅವರ ಮನಸ್ಸಿನೊಳಗೆ ಇದ್ದಿರಬಹುದು. ನೀನು ದೊಡ್ಡ ಮನುಷ್ಯರು ಎಂದು ಏನೇನೋ ಹೇಳಿ ಅವರ ಮನಸ್ಸನ್ನು ನಿನಗೆ ಗೊತ್ತಿಲ್ಲದೆ ನೋಯಿಸಿಬಿಟ್ಟದ್ದೀ. ಈಗ ಏನಾಗುತ್ತದೆ ಎಂದರೆ ನೀನು ಹೇಳಿದ್ದೇ ಅವರ ಮನಸ್ಸಿನೊಳಗೆ ಉಳಿದುಬಿಡುತ್ತದೆ. ಇನ್ನುಮೇಲೆ ನಿನ್ನ ಹೆಂಡತಿಯನ್ನವರು ಎಲ್ಲಿಯಾದರೂ ಕಂಡರೆ, ಸರಿಯಾಗಿ ಮಾತನಾಡುವುದಿಲ್ಲ. ಇದು ಧರ್ಮಕ್ಕೆ ಬಂದ ಮನಸ್ತಾಪ. ನೀನು ಬೇರೇನಾದರೂ ಹೇಳಬೇಕಾಗಿತ್ತು" ಎಂದು ಹೇಳಿದೆ.

ನನ್ನ ಸ್ನೇಹಿತನ ಮುಖವನ್ನು ನೋಡಿದೆ. ನನ್ನ ಮಾತುಗಳಲ್ಲಿ ಅವನಿಗೆ ನಿಜಾಂಶ ಉಂಟೆಂದು ಕಂಡಹಾಗೆ ತೋರಿತು.

ಹಾಗೆ ನೋಡಿದರೆ ಎಲ್ಲಾ ವಿಷಯಗಳನ್ನೂ ವಿವರವಾಗಿ ಹೇಳಬೇಕೆಂಬ ಅಗತ್ಯವಿಲ್ಲ. ನಾವು ಹೇಳುವುದು ಇನ್ನೊಬ್ಬರಿಗೆ ಇಷ್ಟವಾಗುವುದಿಲ್ಲ ಎಂದು ಅನ್ನಿಸಿದಾಗ ನಾವು ಆ ಕುರಿತು ಏನನ್ನೂ

ಹೇಳಲೇಕೂಡದು.

ಒಪ್ಪಿಗೆ ಇಲ್ಲದ ವಿಷಯಗಳಲ್ಲಿ ಸುಮ್ಮನೆ ಇರುವುದು, ನಮ್ಮ ಮನಸ್ಸಿನಲ್ಲಿ ಇದ್ದುದನ್ನು ಬೇರೆಯವರು ತಿಳಿದುಕೊಂಡಾಗ ಕಿರು ನಗೆಯಿಂದ ಒಪ್ಪಿಕೊಳ್ಳುವುದು, ನಮ್ಮನ್ನು ಸುಳ್ಳು ಹೇಳಬೇಕೆಂದು ಇನ್ನೊಬ್ಬರು ಒತ್ತಾಯಿಸಿದಾಗ ಗಂಭೀರವಾದ ಮುಖಭಾವ ತಾಳುವುದು, ನಾವು ಮಾಡಿದ ತಮಾಷೆಗಳಿಂದ ಬೇರೆಯವರಿಗೆ ಕೋಪ ಬಂದಾಗ, 'ನನ್ನನ್ನು ಕ್ಷಮಿಸಿಬಿಡು' ಎಂದು ಹೇಳುವ ರೀತಿಯಲ್ಲಿ ಮುಖವನ್ನು ತೋರ್ಪಡಿಸಿಕೊಳ್ಳುವುದು, ಹೀಗೆ ಹಲವಾರು ರೀತಿಯಲ್ಲಿ ನಾವು ಹೇಳಬೇಕಾದುದನ್ನು ಹೇಳದೆ ಹೇಳಿಬಿಡಬಹುದು.

ಕೋಪ ಬಂದಾಗ ಮೌನವಾಗಿ ಇರುವುದು, ಬಿಸಿ ವಾತಾವರಣವಿದ್ದಲ್ಲಿ ಎದ್ದು ಜಾಗ ಖಾಲಿ ಮಾಡುವುದು ಇನ್ನೊಂದು ರೀತಿ.

ನಮಗೆ ಇಷ್ಟ ಇಲ್ಲದವರಿಂದ ದೂರ ಇರುವುದರಿಂದಲೂ ಒಳ್ಳೆಯದಕ್ಕೆ ಹೇಳಿದರೆ ಕಿವಿ ಕೊಡದಿದ್ದವರೊಡನೆ ಮಾತು ಕಡಿಮೆ ಮಾಡುವುದರಿಂದಲೂ ನಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಬಹುದು.

"ಇಲ್ಲ, ಇಲ್ಲ, ಮನಸ್ಸಿಗೆ ಅನ್ನಿಸಿದ್ದನ್ನು ಹೇಳಿಯೇ ಬಿಡುತ್ತೇನೆ" ಎಂದು ನನ್ನ ಸ್ನೇಹಿತನ ಹಾಗೆ ಮಾಡಿದರೆ, ಎಲ್ಲರ ಮನಸ್ಸೂ ನೋಯುತ್ತದೆ. ಮತ್ತು ನನ್ನ ಸ್ನೇಹಿತನಂತೆ "ನಾನು ಯಾಕಪ್ಪಾ ಬಾಯಿಬಿಟ್ಟು ಹೇಳಿದೆ" ಎಂದು ಮನಸ್ಸಿನೊಳಗೆ ಸಂಕಟಪಟ್ಟುಕೊಳ್ಳಬೇಕಾಗುತ್ತದೆ.

"ನಿಮ್ಮ ಮಾತುಗಳ ಬಗ್ಗೆ ಎಚ್ಚರಿಕೆ ಇರಲಿ. ಏಕೆಂದರೆ, ನಿಮ್ಮ ಮಾತುಗಳಿಗೆ ನೀವೇ ಜವಾಬ್ದಾರರು. ನಿಮ್ಮ ಮಾತುಗಳೇ ನಿಮ್ಮನ್ನು ತೋರಿಸಿಕೊಡುತ್ತವೆ" ಎಂದು ಈಲಿಯಟ್ ಹೇಳಿದ್ದನ್ನು ಮರೆಯಬೇಡಿ.

"ಎಲ್ಲರೂ ತಮ್ಮನ್ನು ಭೇಟಿಯಾಗುವವ ಒಳ್ಳೆಯ ಸುದ್ದಿಯನ್ನೇ ಹೇಳಬೇಕೆಂದು ಎಣಿಸುತ್ತಾರೆ. ಕೆಟ್ಟ ಸುದ್ದಿಗಳನ್ನೂ, ಸಂತೋಷವನ್ನು ಕಡಿಮೆಮಾಡುವ ಸುದ್ದಿಗಳನ್ನೂ ಅವರು ಬಯಸುವುದಿಲ್ಲ. ಹೀಗಿರುವಾಗ ನೀವು ಸಂತೋಷದ ಸುದ್ದಿಗಳನ್ನೇ ಬೇರೆಯವರೊಡನೆ ಏಕೆ ಹಂಚಿಕೊಳ್ಳಬಾರದು?" ಕಿಪ್ಲಿನ್ ಹೇಳಿದ್ದರಲ್ಲಿ ವಾಸ್ತವಾಂಶ ಇಲ್ಲದೆ ಇಲ್ಲ. ●

---

## ದಂತ ಗೋಪುರ!

'ದಂತ ಆರೋಗ್ಯ'ದ ಕುರಿತು ಸಾಮಾನ್ಯರಲ್ಲೂ ಸುಶಿಕ್ಷಿತರಲ್ಲೂ ಜಾಗೃತಿಯುಂಟುಮಾಡಲು ಚೀನದ ದಂತವೈದ್ಯನೊಬ್ಬ ವಿನೂತನ ಮಾರ್ಗವೊಂದನ್ನು ಅನುಸರಿಸಿದ್ದಾನೆ. ಅದೆಂದರೆ ೨.೫ ಮೀಟರ್ ಎತ್ತರದ, ೨೮,೦೦೦ ಹಲ್ಲುಗಳಿರುವ ಗೋಪುರ ನಿರ್ಮಾಣ!

ಐವತ್ತೆರಡು ವರ್ಷದ ಡಾ. ಯು ಕ್ವಿಯಾನ್ ಕಳೆದ ೩೨ ವರ್ಷಗಳಿಂದಲೂ ದಂತವೈದ್ಯಕೀಯದಲ್ಲಿ ಶ್ರಮಿಸುತ್ತಿರುವಾತ. ಆತನ ಕುಟುಂಬದಲ್ಲಿ ಇತರ ಕೆಲವರೂ ದಂತವೈದ್ಯರೆ. ಈ ವರೆಗೆ ಒಂದು ಲಕ್ಷ ಜನರಿಗೆ ದಂತ ಚಿಕಿತ್ಸೆ ನೀಡಿರುವ ಡಾ. ಯು. ಕ್ವಿಯಾನ್‌ಗೆ ಈ ಯೋಚನೆ ಹೊಳೆದದ್ದೇ ತಡ, ಹಲ್ಲುಗಳ ಸಂಗ್ರಹಕ್ಕೆ ತೊಡಗಿದ. ಇದರಲ್ಲಿ ಆತನಿಗೆ ನೆರವಾದವರು ಆತನ ಆರು ಜನ ವಿದ್ಯಾರ್ಥಿಗಳು. ಅವರು ರೋಗಪೀಡಿತವಾದ ಈ ೨೮,೦೦೦ ಹಲ್ಲುಗಳನ್ನು ತಮ್ಮ ಬಳಿ ಚಿಕಿತ್ಸೆಗೆ ಬಂದವರಿಂದ ಕೇಳಿ ಪಡೆದರು. ಇವೆಲ್ಲ ಐದು ಬೇರೆ ಬೇರೆ ದಂತರೋಗಗಳನ್ನು ಪ್ರತಿನಿಧಿಸುವಂಥವು.

೧೯೯೩ರಲ್ಲಿ 'ದಂತಗೋಪುರ' ನಿರ್ಮಾಣಕ್ಕೆ ತೊಡಗಿದ ಡಾ. ಯು. ಕ್ವಿಯಾನ್ ಇದಕ್ಕಾಗಿ ತಾನೇ ಕೆಲವು ಅಂಟು ಪದಾರ್ಥಗಳನ್ನು ಕಂಡುಹಿಡಿದು ಬಳಸಿದನಂತೆ.

ಈಗ ಈ ಗೋಪುರವನ್ನು ಕಂಡವರು ಅವಾಕ್ಕಾಗಿ ಬಾಯಿಬಿಡುತ್ತಿಲ್ಲವಂತೆ. ಮನೆಗೆ ಹೋದವರೇ ಮೊದಲು ಕನ್ನಡಿಯೆದುರು ನಿಂತು ಬಾಯಗಲಿಸುತ್ತಾರಂತೆ. ಬಾಯಲ್ಲಿ 'ಅಸಾಮಾನ್ಯ'ವೆಂದೇನಾದರೂ ತೋರಿಬಂದರೆ ಕೂಡಲೇ ಡಾ. ಯು. ಕ್ವಿಯಾನ್ ಬಳಿ ಓಡಿಬರುತ್ತಾರಂತೆ.

---



೧೪

# ಎಕ್ಸ್-ರೇ ಕಣ್ಣಿನ ಮನುಷ್ಯ!

• ಗೋವಾ

# "ಪೀಟರ್ ಹುರ್‌ಕೋಸ್

ಹಾಲೆಂಡಿನ ಈ ಹುಡುಗನನ್ನು 'ಕರಿನಾಲಗೆಯ ಮನುಷ್ಯ'ನೆಂದುಕೊಂಡು ಕಂಡವರೆಲ್ಲ ಕೆಂಡತುಳಿದವರಂತೆಯೋ ಭಂಡನೊಬ್ಬ ಎದುರಿಗೆ ಬಂದಂತೆಯೋ ವರ್ತಿಸಿ ದೂರ ಸರಿದ ಕಾಲವೂ ಒಂದಿತ್ತು....

ಕಣ್ಣು ಕಟ್ಟು, ಮಾಟವಿದ್ಯೆ ಬಲ್ಲವನೆಂದು ಮೂದಲಿಸುವ ವರ್ಗದಿಂದ ಮನನೊಂದು ದಿನಗಳೂ ಒಂದಷ್ಟು.....

ಪೊಲೀಸರು 'ಪೀಡೆ' ಎಂಬಂತೆ ಈತನನ್ನು ನಡೆಸಿಕೊಂಡ ಪ್ರಸಂಗಗಳೂ ಬಹಳ.....

ಇಷ್ಟೆಲ್ಲ ಆದರೂ ಪೀಟರ್ ಹೆದರಲಿಲ್ಲ. ಬಂದದ್ದಕ್ಕೆಲ್ಲ ಎದೆಗೊಟ್ಟು ನಿಂತ. ನಿಗೂಢಗಳನ್ನು ಒಡೆದಿಟ್ಟ. ರಹಸ್ಯಗಳನ್ನು ಬಿಚ್ಚಿಟ್ಟ. ಯಶಸ್ಸಿನ ಒಂದೊಂದೇ ಮೆಟ್ಟಿಲನ್ನೇರುತ್ತ ಅಮೆರಿಕದಲ್ಲಿ ಬಂದು ನೆಲೆನಿಂತ. ಹೆಸರು-ಹಣಗಳ ಹಪಾಪಿತನದಲ್ಲೇ ಮುಳುಗಿಹೋಗದೇ 'ಅತೀಂದ್ರಿಯ ಶಕ್ತಿ'ಯ ಕುರಿತ ಪ್ರಯೋಗ, ಆಸಕ್ತರಿಗೆ ತರಬೇತಿ ಮುಂತಾದವುಗಳಿಗಾಗಿ ಸಂಸ್ಥೆಯೊಂದನ್ನು ಸ್ಥಾಪಿಸಿದ.

ಆದರೆ, ನಮಗೆ ಪೀಟರ್‌ನ ಪರಿಚಯವಾದದ್ದು ಆ ಆಸ್ಪತ್ರೆಯ ವಾರ್ಡಿನಲ್ಲಿ. ಮೂವತ್ತು ಅಡಿ ಎತ್ತರದ ಮೇಲಿಂದ ಬಿದ್ದು ಪ್ರಜ್ಞಾಹೀನ ಸ್ಥಿತಿಯಲ್ಲಿ ಆಸ್ಪತ್ರೆಗೆ ದಾಖಲಾಗಿ ಕೆಲವು ದಿನಗಳಾದ ಮೇಲಿನ ಸಂದರ್ಭದಲ್ಲಿ.

ಅದಕ್ಕೂ ಮುಂಚಿನ ಅವನ ಕಥೆಯೇನು? ಕೌಟುಂಬಿಕ ಹಿನ್ನೆಲೆಯೇನು? ಆತ ಯಾವ ಕೆಲಸ ಮಾಡುತ್ತಿದ್ದ?

ಈ ಎಲ್ಲ ವಿವರಗಳನ್ನು ತಿಳಿಯಲು ನಾವು ಆತನ ಆತ್ಮಕಥೆಯ ಪುಟಗಳನ್ನೇ ತೆರೆಯಬೇಕು. 'ಸೈಕಿಕ್' ಎಂಬುದು ಆತನ ಜೀವನ ಚರಿತ್ರೆ. ಇದರ ಎರಡನೆಯ ಅಧ್ಯಾಯವನ್ನು ಇಲ್ಲಿ ಉದ್ಧರಿಸುವುದರ ಮೂಲಕ ಪೀಟರ್ 'ಎಕ್ಸ್-ರೇ ಕಣ್ಣಿನ ಮನುಷ್ಯ'ನಾಗುವುದಕ್ಕಿಂತ ಮುನ್ನ ಎಲ್ಲಿದ್ದ, ಏನಾಗಿದ್ದ ಎಂಬುದನ್ನು ತಿಳಿಸುತ್ತಿದ್ದೇನೆ. ಇದೆಲ್ಲವನ್ನು ಅವನ ಬಾಯಿಂದಲೇ ಕೇಳುವುದು ಹೆಚ್ಚು ಸೂಕ್ತ.

★

ಪೀಟರ್ ಹುರ್‌ಕೋಸ್ ನನ್ನ ನಿಜ ಹೆಸರಲ್ಲ; ಯುದ್ಧ ಸಮಯದಲ್ಲಿ ಜರ್ಮನರಿಂದ ನನ್ನನ್ನೂ ನನ್ನ ಕುಟುಂಬವನ್ನೂ ರಕ್ಷಿಸಿಕೊಳ್ಳಲು ನಾನು ಇಟ್ಟುಕೊಂಡ ಹೆಸರಿದು. ೧೯೧೧ರ ಮೇ ೨೧

ರಂದು ಡಾರ್ಡ್ರೆಚ್‌ನ ವೊಂಡಾಲ್ ಸ್ಟೀಟಿನ ಮನೆಯಲ್ಲಿ ಹುಟ್ಟಿದೆ. ಅಮ್ಮ ಪೀಟರ್ ವಾನ್‌ಡರ್ ಹುರ್ಕ್ ಎಂದು ಹೆಸರಿಟ್ಟಳು. ನಮ್ಮದು ಅಷ್ಟೇನೂ ಹೇಳಿಕೊಳ್ಳುವಂಥ ಮನೆತನವಲ್ಲ, ಸಾಮಾನ್ಯ ಮಧ್ಯಮ ವರ್ಗದ ಕುಟುಂಬ. ಹಣಕ್ಕಾಗಿ ಒಂದಿಲ್ಲೊಂದು, ನಿಶ್ಚಿತವಲ್ಲದ, ಕೆಲಸ ಹುಡುಕಿಕೊಳ್ಳಬೇಕಾದ ಅನಿವಾರ್ಯತೆ. ಹೀಗಾಗಿ ಆಢ್ಯತೆ, ತೋರಿಕೆ ಎಂದರೇನೆಂಬುದೇ ಅರಿಯದ ಸರಳ ಸಂಸಾರ ನಡೆಸುತ್ತಿದ್ದ ನಮ್ಮಪ್ಪ. ಕಾಸ್ಪಾರ್ ಸ್ಟಾಟ್ ಎಂದು ಕರೆಯಲ್ಪಡುತ್ತಿದ್ದ, ಬಾಗಿಲಿಗಿಂತಲೂ ಎತ್ತರದ ಕಿಟಕಿಗಳುಳ್ಳ, ಜೇಲಿನಂಥ ಶಾಲೆಯಲ್ಲಿ ಆರನೆಯ ವಯಸ್ಸಿಗೆ ಅಕ್ಷರಾಭ್ಯಾಸಕ್ಕೆ ತೊಡಗಿದೆ.

ಹದಿನಾಲ್ಕನೆಯ ವಯಸ್ಸಿನವರೆಗೂ ಅಲ್ಲಿಯೇ ಮಾಡುವ ವಯಸ್ಸೇ ಆತನದು? ಒಂದೆರಡು ಬಾರಿ ಎದೆನೋವೆಂದು ಬಂದು ಮಲಗಿದ್ದ. ಹೀಗೊಮ್ಮೆ ಮಲಗಿ ಮುಲುಗುತ್ತಿದ್ದಾಗ ಅಮ್ಮ ನನ್ನನ್ನು ಈ ಕೆಲಸ ವಹಿಸಿಕೊಳ್ಳಲು ಒತ್ತಾಯಿಸಿದಳು. ಅಪ್ಪನ ಹೆಸರಲ್ಲೇ ಕಂಟ್ರಾಕ್ಟು ಪಡೆದು ಆತನ ಆಳಾಗಿ ನಾನು ಬಣ್ಣ-ಬ್ರಷ್ ಹಿಡಿದು, ಏಣಿ ಹೊತ್ತು ನಡೆದೆ.

ಹೆಗಲು ಭಾರವಾದಾಗಲೇ ಹುಡುಗನಿಗೆ ಹೊಣೆಯೆಂದರೇನೆಂಬುದೂ ಅದನ್ನು ಹೇಗೆ ನಿಭಾಯಿಸಬೇಕು ಎಂಬುದೂ ಗೊತ್ತಾಗತೊಡಗುತ್ತದೆ. ಗಳಿಸಿದ ಪ್ರತಿ ಕಾಸನ್ನೂ ಹೇಗೆ ಅವಶ್ಯಕತೆಗೆ ತಕ್ಕಂತೆ ಬಳಸಬೇಕೆಂಬುದು ಅರಿವಿಗೆ ಬರುತ್ತದೆ. ಮೊಟ್ಟಮೊದಲ ಬಾರಿಗೆ ಕಟ್ಟಡವೊಂದರ ಬಣ್ಣ

# ನನ್ನ ನಿಜ ಹೆಸರಲ್ಲ”

ಓದಿದ್ದು. ಅಷ್ಟು ಹೊತ್ತಿಗೆ ಸ್ಥಿತಿ ಸ್ವಲ್ಪ ಸುಧಾರಿಸಿದ್ದರಿಂದ ನಾನು ಹೈಸ್ಕೂಲು ಮುಗಿಸಿ ಕಾಲೇಜಿಗೂ ಹೋಗಲು ಸಾಧ್ಯವಾಯಿತು. ಆದರೆ ಪದವೀಧರನಾದದ್ದರಿಂದೇನೂ ಪ್ರಯೋಜನವಾಗಲಿಲ್ಲ. ಬಿಳಿ ಕಾಲರಿನ ಕೆಲಸ ನಮ್ಮಂಥವರಿಗೆಲ್ಲಿ ಸಿಕ್ಕಬೇಕು? ಆದ್ದರಿಂದ ತಾಂತ್ರಿಕ ತರಬೇತಿಯತ್ತ ಗಮನ ಹರಿಸಿದೆ. ರೇಡಿಯೋ ಎಂಜನೀಯರಿಂಗ್ ಕೋರ್ಸ್‌ಗೆ ಹೆಸರು ನೋಂದಾಯಿಸಿದೆನಾದರೂ, ಅದು ಏಳು ವರ್ಷಗಳದ್ದಾದ್ದರಿಂದ, ಮರುವರುಷವೇ ನಿಲ್ಲಿಸಬೇಕಾಯಿತು. “ಸುಮ್ಮನೇ ಏಳು ವರ್ಷ ಹಣ ಸುರಿದರೇನು ಬಂತು? ಬೇರೇನಾದರೂ ಕಲಿ. ಬೇಗ ದುಡಿತಕ್ಕೆ ನಿಲ್ಲು,” ಎಂದು ಅಮ್ಮನ ದುಂಬಾಲು. ಅಪ್ಪ ಈ ಹೊತ್ತಿಗೆ ಬಿಲ್ಡಿಂಗುಗಳಿಗೆ ಬಣ್ಣ ಬಳಿಯುವ ಕಂಟ್ರಾಕ್ಟ್‌ದಾರನೆಂದು ಕೆಲಸ ಮಾಡುತ್ತಿದ್ದ. ಅವನಿಗೆ ನನ್ನ ನೆರವು ಅಗತ್ಯವಾಯಿತು. ಅಷ್ಟಲ್ಲದೆ ಬಣ್ಣ ಬಳಿಯುವುದಕ್ಕಾಗಿ ಆಳೊಬ್ಬನನ್ನು ಇಟ್ಟುಕೊಂಡು ಸಂಬಳ ನೀಡುವಷ್ಟು ಲಾಭದಾಯಕವಾಗಿರಲಿಲ್ಲ ಆ ಕೆಲಸ. ತಾನೇ ಬಣ್ಣ ಬಳಿಯಲು ಉಬ್ಬಸಪಡುತ್ತ ಏಣಿ ಏರಿ ಇಳಿಯುತ್ತಿದ್ದ. ಅಂಥ ಶ್ರಮದಾಯಕ ಕೆಲಸ ಬಳಿಯುವ ಕೆಲಸ ಪೂರೈಸಿ ಹಣ ಪಡೆದಾಗ ಅಷ್ಟು ನೋಟುಗಳನ್ನು ಪ್ರಥಮ ಸಲ ಮುಟ್ಟಿದ ಅನುಭವದಿಂದ ಸಣ್ಣಗೆ ನಡುಗಿದ್ದೆ.

ಬರಬರುತ್ತ ಈ ಕೆಲಸ ಪ್ರಯೋಜನವಿಲ್ಲದ್ದು, ಶ್ರಮಕ್ಕೆ ತಕ್ಕ ಪ್ರತಿಫಲನೀಡದಂಥದ್ದು ಎಂದೆನಿಸತೊಡಗಿತು. ಆದರೆ ಹಾಗೆಂದು ಬಿಟ್ಟು ಬಿಡಲಾದೀತೆ? ಬೇರೆ ಕೆಲಸ ಹುಡುಕುವ ಯೋಚನೆಯಲ್ಲೇ ಸದಾ ಮುಳುಗಿರುತ್ತಿದ್ದೆ.

ಬಣ್ಣ ಬಳಿಯುವ ಕೆಲಸ ಅನುಗಾಲದ್ದೇನಲ್ಲ. ಮಳೆ ಸುರಿಯುವ ದಿನಗಳಲ್ಲಿ ಯಾರು ತಾನೆ ಮನೆಗೆ ಬಣ್ಣ ಬಳಿಸುತ್ತಾರೆ? ಈ ಹಂಗಾಮಿನಲ್ಲಿ ಮತ್ತಾವುದಾದರೂ ದುಡಿಮೆಗೆ ನಿಲ್ಲಬೇಕು. ೧೯೨೭ರಷ್ಟೊತ್ತಿಗೆ ನಾನು ಸಾಮುದ್ರಿಕ ವ್ಯಾಪಾರಿ ಸಂಸ್ಥೆಯೊಂದರ ನೌಕರ ಎಂದು ತಾತ್ಕಾಲಿಕ ನೇಮಣೂಕಿಯ ಮೇಲೆ ನಾಲ್ಕು ವರ್ಷ ಹಡಗಿನಲ್ಲಿಯೇ ಸುತ್ತಿದೆ. ಮೊದಲು ಶಿಲ್ಕು ಲೆಕ್ಕದವನಾಗಿ, ಆ ಮೇಲೆ ತೈಲ ಪರೀಕ್ಷಕನಾಗಿ. ಸಾಗರ ಸಂಬಂಧ ಅನಂತವಾಗಿ ನಾನು ಈ ವೃತ್ತಿಯನ್ನೇ ಕಾಯಮ್ಮಾಗಿ ನಂಬಿಕೊಂಡೆ. ಆದರೆ ಅಂದುಕೊಂಡದ್ದೆಲ್ಲ ಆಗಬೇಕಲ್ಲ? ೧೯೩೦ರಲ್ಲಿ ಆ ಕಂಪನಿ ನನಗೆ

ಶಾಂಘಾಯ್‌ನಲ್ಲಿ ಎಣಿಕೆ ವಿಭಾಗದಲ್ಲಿ ಕೆಲಸ ಕೊಟ್ಟಿತು. ವ್ಯಾಂಗ್‌ಪೂ ನದಿಯ ಬಂದರುಕಟ್ಟೆಗೆ ಬರುವ ಸರಕಿನ ಹಾಗೂ ಪ್ರವಾಸಿಗರ ದೋಣಿ, ಕಿರುಹಡಗುಗಳನ್ನು ಪೂರ್ತಿ ನೋಡಿ ಪ್ರಯಾಣಿಕರು ಮತ್ತು ಸರಂಜಾಮುಗಳ ಎಣಿಕೆ ಮಾಡಬೇಕಾಗುತ್ತಿತ್ತು.

೧೯೩೯ರಲ್ಲಿ ಯುದ್ಧ ಆರಂಭವಾಗಿ ಕಂಪನಿ ಮುಚ್ಚಿದ್ದರಿಂದ ನಾನು ಮರಳಿ ಹಾಲೆಂಡಿಗೆ ಬರಬೇಕಾಯಿತು. ಈ ಅವಧಿಯಲ್ಲಿ ನಾನು ಚೀನದಲ್ಲಿ ಗಳಿಸಿ ಉಳಿಸಿದ್ದ ಸಾವಿರಾರು ಗಿಲ್ಡರುಗಳಷ್ಟು ಹಣವಿತ್ತು. ಗೆಳೆಯರು, ಮನೆ ಮಂದಿಯೊಂದಿಗೆ ಮಜವಾಗಿ ಕಳೆಯುವ ಹುರುಪಿನಲ್ಲಿ ಆ ಹಣವೆಲ್ಲ ಖರ್ಚಾಗಿಬಿಟ್ಟಿತು: ಖಾಲಿ ಜೇಬಿನ ನಾನು ಮತ್ತೆ ಅಪ್ಪನೊಂದಿಗೆ ಬಣ್ಣ ಬಳಿಯುವ ಕೆಲಸಕ್ಕೆ ತೊಡಗಬೇಕು. ನನಗೋ ಅದು ಒಗ್ಗದ ವೃತ್ತಿ. ಸಾಗರಾಂತರ ವ್ಯವಹಾರ ಸಂಸ್ಥೆಯ ಕೆಲಸವನ್ನೇ ಹುಡುಕಿಕೊಂಡು ಅಲೆದದ್ದೇ ಬಂತು. ಕೆಲಸ ಸಿಕ್ಕಲೇ ಇಲ್ಲ.

ಅದು ೧೯೪೦ರ ಮೇ ೧೦ರ ನಸುಕು. ಸರಿಯಾಗಿ ಐದು ಗಂಟೆಗೆ ಆಕಾಶದಲ್ಲಿ ನೂರಾರು ವಿಮಾನಗಳು ಒಟ್ಟಿಗೇ ಉಡ್ಡಯನ ನಡೆಸಿ ಮಲಗಿದ್ದವರನ್ನೆಲ್ಲ ಎದೆಗೆಡಿಸಿ ಎಬ್ಬಿಸಿದವು. ನೂರು ವಿಮಾನಗಳು! ಅದೂ ಊರ ಮೇಲೆ ಕೇವಲ ಒಂದೆರಡು ನೂರು ಅಡಿಗಳ ಎತ್ತರದಲ್ಲಿ! ಆಕಾಶದೆಡೆ ತಲೆ ಎತ್ತಿ ನೋಡಿದ ನಮಗೆಲ್ಲ ಕಂಡದ್ದೇನು? ಜರ್ಮನ್ ಸೈನಿಕರು! ನೆಲದೆಡೆ ವೈಮಾನಿಕ ಕೊಡೆ ಕಟ್ಟಿಕೊಂಡಿಳಿಯುತ್ತಿದ್ದಾರೆ! ನಂತರದ ಒಂದು ವಾರ ನಮಗೆ ನಗೆ ಎಂದರೇನೆಂದೇ ಮರೆತುಹೋಯಿತು. ಭೀಕರ ಕದನ. ರಾಟರ್‌ಡ್ಯಾಮ್ ಮೇಲೆ ಬಾಂಬು ಎಸೆಯುವುದಾಗಿ ಜರ್ಮನರು ಬೆದರಿಕೆಯೊಡ್ಡಿದಾಗ ಹಾಲೆಂಡ್ ಸರಕಾರ ಶರಣಾಯಿತು.

ಎಲ್ಲ ಮುಗಿದು ಹೋಯಿತು. ಹೌದು. ಅಕ್ಷರಶಃ ಎಲ್ಲ ಮುಗಿದುಹೋಯಿತು. ಮೇ ತಿಂಗಳಿನ ಮುದವಂತೂ ಅವರು ಆಗಮಿಸಿದ ಕ್ಷಣದಲ್ಲೇ ಹದಗೆಟ್ಟು ಹೋಗಿತ್ತು. ಈಗ ಜರ್ಮನರು ನಮ್ಮ ರೊಟ್ಟಿಯನ್ನು ಕಸಿದುಕೊಂಡರು. ಹೊಟ್ಟೆಯ ಮೇಲೆ ಹೊಡೆದರು; ರಟ್ಟೆಗಳ ಬಲ ಕತ್ತರಿಸಿದಂತೆ ಮಾಡಿದರು. ಹಸುಗೂಸುಗಳ ಹಾಲನ್ನೆಲ್ಲ ತಾವೇ ಹೀರಿಹಿಗ್ಗಿದರು. ಕಂಡಲ್ಲೆಲ್ಲ ನುಗ್ಗಿದರು. ಹದಿನಾರರ ನಂತರದ ಹುಡುಗಿಯರು-ಹೆಂಗಸರು ಶೀಲ ಉಳಿಸಿಕೊಳ್ಳುವುದೇ ದುಸ್ತರವಾಯಿತು. ನಮ್ಮ ಕೋಳಿಗಳು ಜರ್ಮನರ ಭಯದಿಂದ ಮೊಟ್ಟೆಯಿಕ್ಕುವುದನ್ನೂ ಬಿಟ್ಟುಬಿಟ್ಟವು. ಕುರಿ-ಮೇಕೆಗಳು ಅವರನ್ನು ಕಂಡು ಮಾಂಸ ಕರಗಿಸಿಕೊಂಡು, ಕೊರಗಿ ಸತ್ತವು. ಮೊಟ್ಟೆಯಿಕ್ಕದ ಕೋಳಿಗಳನ್ನವರು ಸುಟ್ಟು ತಿಂದರು. ಕೊರಗಿ ಸತ್ತಂಥ ಕುರಿ-ಮೇಕೆಗಳ ಚರ್ಮ ಸುಲಿದು ಜರ್ಮನಿಗೆ ಸಾಗಿಸಿದರು. ಆದರೆ ಮನುಷ್ಯ ಮೊಟ್ಟೆಯಿಕ್ಕುವುದಿಲ್ಲವಲ್ಲ.... ಆತನ ಚರ್ಮ ಯಾವುದಕ್ಕೂ ಪ್ರಯೋಜನವಿಲ್ಲವಲ್ಲ... ಅಷ್ಟಲ್ಲದೆ ಅವನನ್ನು ಸುಟ್ಟು ತಿನ್ನುವಷ್ಟು ಕಟುಕರೂ ಅವರಾಗಿರಲಿಲ್ಲ.

ನಾವು, ಹಾಲೆಂಡಿಗರು, ಚಕ್ಕಳಗಳಾಗಿ ಏಳೆಂದರೇಳುತ್ತ, ಕೂಡೆಂದರೆ ಕೂಡುತ್ತ, ನೆಲಕ್ಕೆ ಹೊಟ್ಟೆ ಹೊಸೆಯೆಂದರೆ ಹಾಗೆಯೇ ಮಾಡುತ್ತ ಅನುಕ್ಷಣವೂ ಅಂಜಿಕೆಯಲ್ಲಿ ಸತ್ತು ಸತ್ತು ಬದುಕತೊಡಗಿದೆವು. ಹೊಟ್ಟೆ ಕೆರೆಯುತ್ತಿದ್ದುದರಿಂದ ಕಿವಿ ಕೇಳುತ್ತಿತ್ತಾದ್ದರಿಂದ, ಕಣ್ಣು ಕಾಣಬಾರದ್ದನ್ನೆಲ್ಲ ಕಂಡು ಭಯದಿಂದ ಮುಚ್ಚಿ ತೆರೆದು ಮಾಡುತ್ತಿತ್ತಾದ್ದರಿಂದ ನಾವಿನ್ನೂ ಬದುಕಿದ್ದೇವೆ ಎಂಬುದು ಅರಿವಿಗೆ ಬರುತ್ತಿತ್ತು.

ಹೊಟ್ಟೆ ಕೆರೆತ. ಹೌದು. ಇದು ಮನುಷ್ಯ ಎಂಥದಕ್ಕೂ ಒಗ್ಗಿಕೊಳ್ಳಲು ಮತ್ತು ಎಂಥದಕ್ಕೂ ಆತನನ್ನು ಒಗ್ಗಿಸಲು ಕಾರಣ. ನಮ್ಮ ಹೊಟ್ಟೆ ತುಂಬುವ ಅನಿವಾರ್ಯತೆ ನಮಗೆ. ಇದನ್ನು ಜರ್ಮನರು ಸರಿಯಾಗಿಯೇ ಬಳಸಿಕೊಂಡರು.

"ಜರ್ಮನಿಯ ನಮ್ಮ ಮಿಲಿಟರಿ ಫ್ಯಾಕ್ಟರಿಗಳಲ್ಲಿ ದುಡಿಯಬಯಸುವವರಿಗೆ ಹೊಟ್ಟೆ ತುಂಬ ಊಟ, ಮೈತುಂಬ ಬಟ್ಟೆ, ಕೈ ತುಂಬ ರೊಕ್ಕ ಕೊಡುತ್ತೇವೆ. ಅಲ್ಲಿ ದುಡಿಯುವಂಥವರ ಕುಟುಂಬಗಳಿಗೂ ಇಲ್ಲಿ ಅದನ್ನೆಲ್ಲ ಪೂರೈಸುತ್ತೇವೆ" ಎಂಬ ಜರ್ಮನರ ಪ್ರಕಟಣೆ ನನ್ನನ್ನೂ ನನ್ನ ಮಿತ್ರ ಗಿಯರ್ಟ್ ಕಾಬೋನನ್ನೂ ತಟ್ಟಿತು. ನಾವಿಬ್ಬರೂ ಅಲ್ಲಿಗೆ ಹೊರಟು ಹೋಗಲು ನಿರ್ಧರಿಸಿ, ನಮ್ಮಪ್ಪ-ಅಮ್ಮನಿಗೆ ಹಾಗೆಂದು ಹೇಳಿಯೂ ಬಿಟ್ಟೆವು. "ಸ್ವ ಸಂತೋಷದಿಂದ" ಎಂದು ಬರೆ



ಇವನೇ ನಿಮ್ಮನ್ನೆಲ್ಲಾ ಇಷ್ಟು ಕಾಲ ಕುತೂಹಲದಲ್ಲಿ ಮುಳುಗಿಸಿದ ಪೀಟರ್ ಹುರ್‌ಕೋಸ್

ದುಕೊಟ್ಟು ನಾವು ಜರ್ಮನಿಗೆ ಹೊರಡಲು ಸಿದ್ಧರಾದೆವು. "ಸೋಮವಾರ ಬೆಳಗಿನ ೮-೩೦ಕ್ಕೆ ರೈಲು ನಿಮ್ಮನ್ನು ಹೊತ್ತೊಯ್ಯಲು ಸಿದ್ಧವಾಗಿರುತ್ತದೆ" ಎಂಬ ಅವರ ಮಾತು ಕೇಳಿಸಿಕೊಂಡು ಅದನ್ನೇ ಅಪ್ಪ-ಅಮ್ಮನೆದುರು ಒಪ್ಪಿಸಿದೆವು.

ಅವರು ಮಾತಾಡಲೇ ಇಲ್ಲ. ನಾವು ಸ್ವತಃ ನಮ್ಮ ಶತ್ರುಗಳ ಕೈ ಬಲಪಡಿಸುವುದಕ್ಕಾಗಿ ದುಡಿಯಲು ಹೊರಟಿರುವುದು ಅವರಿಗೆ ಎಳ್ಳಷ್ಟೂ ಇಷ್ಟವಾಗಲಿಲ್ಲ; ಅನ್ನದ ಆಸೆ ತೋರಿಸಿ ಇನ್ನೆಂಥೆಂಥ ಕೆಲಸಕ್ಕೆ ಹಚ್ಚುತ್ತಾರೋ ಎಂಬ ಗುಮಾನಿ ಅವರಿಗೆ. ಆದರೇನು ಮಾಡುವುದು? "ಸ್ವಸಂತೋಷದಿಂದ" ಎಂದು ಬರೆದುಕೊಟ್ಟು ಬಂದಾಗಿದೆಯಲ್ಲ, ಹಗ್ಗ ಕೊಟ್ಟು ಕೈ ಕಟ್ಟಿಸಿಕೊಂಡ ಹಾಗಲ್ಲವೆ ಅದು? ಈಗ ಹೋಗದಿದ್ದರೆ ಆ ಹಗ್ಗ ಕೈಗಲ್ಲ, ಕತ್ತಿಗೆ ಮುತ್ತುತ್ತದೆ.

ಸೋಮವಾರದ ನಸುಕಿನವರೆಗೂ ಅಪ್ಪ-ಅಮ್ಮ ಮಾತಾಡಲೇ ಇಲ್ಲ. ಮುಖ ಉಬ್ಬಿಸಿಕೊಂಡೇ ಇದ್ದರು. ಅವರ ಒಳಗುದಿ ನನಗೆ ಅರ್ಥವಾಗುತ್ತಿತ್ತು. ಬೆಳಗಿನ ಏಳು ಮೂವತ್ತಕ್ಕೆ ನಾನು ಕಿಟ್ ಹೆಗಲಿಗೇರಿಸಿ ಅವರೆದುರು ನಿಂತೆ. ಬಿಕ್ಕಿ ಬಿಕ್ಕಿ ಅತ್ತರು. ಸಂತೈಸುತ್ತ ಹೊರ ನಡೆದೆ. ಉಕ್ಕೇರುತ್ತಿದ್ದ ಕಣ್ಣೀರನ್ನು ಒರೆಸಿಕೊಂಡೆ. ಮುಖದಲ್ಲಿ ಎಲ್ಲಿಲ್ಲದ ಗೆಲುವು ತಂದುಕೊಂಡೆ. ಎದೆ ಭಾರವಾಗಿದ್ದರೂ ಅದನ್ನು ಮರೆತಿದ್ದೇನೆಂದು ನಟಿಸಲೇಬೇಕಿತ್ತು. ಅಂತೆಯೆ ಸಿಳ್ಳೆ ಹಾಕುತ್ತ ದಿ ಹೇಗ್ ಪಟ್ಟಣದ ಮಿಲಿಟರಿ ಕಾರ್ಯಾಲಯಕ್ಕೆ ನಡೆದೆ.

"ಕುರಿ ಬಂತು ಕುರಿ."

ಅಲ್ಲಿ ಎದುರ್ಗೊಂಡವರು ಹೀಗಂದುಕೊಂಡಿರಬೇಕು. ನನಗೂ ಮಿತ್ರ ಗಿಯರ್ಟ್ ಕಾಬೋಗೂ ಅವರು ಎಲ್ಲಿಲ್ಲದ ಆತ್ಮೀಯತೆ ತೋರಿಸಿದರು. ತಿನ್ನಲೊಂದಿಷ್ಟು ಕೊಟ್ಟರು. ಡ್ರೆಸ್ಸು ಬದಲಿಸಿಕೊಳ್ಳಲು ಹೇಳಿದರು. ನಂತರ ನಮಗೊಂದೊಂದು ನಂಬರನ್ನೂ ದಯಪಾಲಿಸಿದರು.

ಎಂಟೂವರೆಗೆ ಸರಿಯಾಗಿ ರೈಲು ಸಿಳ್ಳೆ ಹಾಕುತ್ತ ಕದಲಿದಾಗ, ಕಣ್ಣೀರು ಕಳಕೊಂಡ ಅಪ್ಪ-ಅಮ್ಮನ ಮುಖಗಳು ಕಿಟಕಿಯ ಹೊರಗೆಲ್ಲ ಕಾಣಿಸಿ

ಕೊಂಡು ನನ್ನನ್ನೇ ದಿಟ್ಟಿಸುತ್ತಿದ್ದಂತೆ ಭಾಸವಾಯಿತು.

ಎದುರಿಗೆ ಕುಳಿತಿದ್ದ ಗಿಯರ್ಟ್‌ನ ಕಣ್ಣುಗಳಲ್ಲಿ ನನ್ನ ಗೊಂಬೆ ಇತ್ತು. ಬಹುಶಃ ನನ್ನ ಕಣ್ಣಲ್ಲೂ ಅವನ ಗೊಂಬೆ ಇರಬೇಕು. ತಟ್ಟನೇ ಆಚೀಚೆ ನೋಡಿದೆವು. ಬೋಗಿಯಲ್ಲಿ ನಾವಿಬ್ಬರೇ! ಕಣ್ಗಾವಲಿನವರೆಲ್ಲಿ? ಅವರ ಪತ್ತೆಯೆ ಇಲ್ಲ! ಗಿಯರ್ಟ್‌ನಿಗೆ ಕಣ್ಣು ಹೊಡೆದೆ. ಆತನೂ ಅದಕ್ಕೆ ಕಣ್ಣಲ್ಲೇ ಉತ್ತರವಿತ್ತ. ಕಿಟಕಿಯ ಹೊರಗೆ ನೋಡಿದೆವು. ಅಕ್ಕಪಕ್ಕ ಹುಲ್ಲುಗಾವಲು ಇಬ್ಬರೂ ಧಡಕ್ಕನೆದ್ದೆವು. ಬೋಗಿಯ ಇಬ್ಬದಿಯ ಬಾಗಿಲುಗಳ ಬಳಿ ನಿಂತು ಮತ್ತೆ ಪರಸ್ಪರ ನೋಡಿಕೊಂಡೆವು.

ಒಂದು, ಎರಡು, ಮೂರು, ನಾಲ್ಕು ಐದು.....

ನಾವಿಬ್ಬರೂ ಆಚೀಚಿನ ಹುಲ್ಲಲ್ಲಿ ನೆಗೆದು ಬಿದ್ದೆವು.

ರೈಲು ಇದಾವುದರ ಪರಿವೆಯೂ ಇಲ್ಲದೆ ತೆವಳಿಕೊಂಡು ಹೋಗಿಬಿಟ್ಟಿತು.

ಬುಧವಾರ ಬೆಳಗಿನ ನಾಲ್ಕು ಗಂಟೆ. ನಾನು ಮನೆಯ ಬಾಗಿಲು ಬಡಿದೆ. ಅಮ್ಮ ಗಡಬಡಿಸಿಕೊಂಡು ಬಾಗಿಲವರೆಗೂ ಬಂದವಳು, ಅದೇನು ಸಂಶಯ ಬಂತೋ, ತೆಗೆಯದೇ ನಿಂತಳು. ಮತ್ತೆ ಬಾಗಿಲು ತಟ್ಟಿದೆ. ಆ ತಟ್ಟುವಿಕೆಯನ್ನಾಕೆ ಗುರುತಿಸಿರಬೇಕು. ತಟ್ಟನೇ ಬಾಗಿಲು ತೆರೆದವಳೇ ನನ್ನನ್ನು ಒಳಗೆಳೆದುಕೊಂಡು ಬಾಗಿಲು ಭದ್ರಪಡಿಸಿದಳು.

ಕಾಡಿನಲ್ಲಿ ತಲೆಮರೆಸಿಕೊಂಡು ಎರಡು ಹಗಲು ಎರಡು ರಾತ್ರಿ ಹಸಿವು-ನೀರಡಿಕೆಯೆನ್ನದೇ ಕುಳಿತಿದ್ದೆನಲ್ಲ. ಮನೆಗೆ ಬಂದಾಗ ಗಬಗಬನೆ ಸಿಕ್ಕದ್ದನ್ನೆಲ್ಲ ತಿಂದೆ.

ಆ ಮೇಲೆ ಅಪ್ಪ-ಅಮ್ಮ ಕೇಳಿದರು- "ಯಾಕೆ ಮರಳಿದ್ದು?"

"ನಾನೆಲ್ಲಿ ಮರಳಿದ್ದೇನೆ. ಅಧಿಕೃತವಾಗಿ ನಾನೀಗ ಆ ರೈಲಿನಲ್ಲೇ ಇದ್ದೇನೆ," ಎಂದು ನಕ್ಕುಬಿಟ್ಟೆ.

ಮುಂದೊದಗಬಹುದಾದ ಅಪಾಯವನ್ನು ಅಂದಾಜು ಮಾಡಿ ಅವರು ಮತ್ತೆ ಮುಖ ಸಣ್ಣದಾಗಿಸಿಕೊಂಡು ನಡೆದರು. ನನಗೆ ಮರುಕ್ಷಣದಲ್ಲೇ ಪ್ರಾರಂಭವಾಗಬಹುದಾದ ಪೀಡಾಪರಂಪರೆಯ ಯೋಚನೆ ಮೈ ನಡುಗಿಸಿತು.

ಹಾಗಾದರೆ ಏನು ಮಾಡಬೇಕು?

ಹೆಸರು ಬದಲಾಯಿಸಿಕೊಳ್ಳುವುದೊಂದೇ ಉಳಿದಿರುವ ಉಪಾಯ.

ಪೀಟರ್ ಹುರ್‌ಕೋಸ್!

ಆಗಲೇ ಹೊಳೆದ ಹೆಸರಿದು.

ಅದಷ್ಟೇ ಕಾರ್ಯಾರಂಭ ಮಾಡಿದ್ದ 'ಭೂಗತ ದಳ' ವನ್ನು ಸೇರಿ ಜರ್ಮನ್ನರ ವಿರುದ್ಧ ಹೋರಾಡಲು ಮನಸ್ಸು ಮಾಡಿದೆ. ನನ್ನ ಮಾತೃ ಭೂಮಿ ಹಾಲೆಂಡನ್ನು ಜರ್ಮನರ ಸೆರೆಯಿಂದ ಬಿಡಿಸಿ ಮುಕ್ತರಾಷ್ಟ್ರವನ್ನಾಗಿ ಮಾಡಲು ಜೀವನವನ್ನೇ ಪಣವಾಗಿಟ್ಟೆ. ದಳದ ಗೆಳೆಯರು ಶತ್ರುಗಳ ಕಣ್ಣಿಗೆ ಮಣ್ಣೆರಚಿ ಪಾರಾಗಲು ಅನುವಾಗುವಂಥ ಪರಿಚಯ ಪತ್ರಗಳೇ ಮೊದಲಾದ ದಾಖಲೆಗಳನ್ನು 'ಸೃಷ್ಟಿಸಿ'ಕೊಟ್ಟರು.

ಎಬಿಡಿ ಕಂಪನಿಯಲ್ಲಿ ಕೆಲಸ ಸಿಕ್ಕಿತು. ಆ ಡಚ್ ಸಂಸ್ಥೆ ಉತ್ತರ ಸಮುದ್ರದ ದಂಡೆಗುಂಟ ಜರ್ಮನರಿಗೋಸ್ಕರ ಬಂಕರುಗಳನ್ನು ನಿರ್ಮಿಸುತ್ತಿತ್ತು. ಕೆಲ ದಿನ ಅಷ್ಟೇ. ನಂತರ ಸೈನ್ಯದ ವಾಹನಗಳ ರಿಪೇರಿ ಮಾಡುತ್ತಿದ್ದ ಗ್ಯಾರೇಜಿನಲ್ಲಿ ಸೇರಿಕೊಂಡೆ.

ಅವೆರಡೂ 'ಉಪಯುಕ್ತ' ಕೆಲಸಗಳೆ. ಎಬಿಡಿ ಕಂಪನಿಯಲ್ಲಿ ಬಂಕರುಗಳ ನಿರ್ಮಾಣದ ಎಲ್ಲ ಹಂತಗಳನ್ನೂ ಅರಿತುಕೊಂಡೆ. ಗ್ಯಾರೇಜಿನಲ್ಲಿ ಡೀಜೆಲ್ ವಾಹನಗಳ ಮೇಲೆ ಅಧಿಕಾರವಾಣಿಯಾಗುವಷ್ಟರಮಟ್ಟಿಗಿನ ಮಾಹಿತಿ ಸಂಗ್ರಹಿಸಿದೆ. ಅಷ್ಟೇ ಅಲ್ಲ, ಈ ಸಂದರ್ಭದಲ್ಲಿ ನಮ್ಮ ಭೂಗತ ಚಟುವಟಿಕೆಗಳಿಗೆ ಬೇಕಾಗುವ ಡೀಜೆಲ್ ಮುಂತಾದವುಗಳನ್ನು ಪಡೆಯಲು ಅವಕಾಶವಾಯಿತು. ಜರ್ಮನ್ ಅಧಿಕಾರಿಗಳು ವಾಹನಕ್ಕೆ ೨೦ ಗ್ಯಾಲನ್ ಡೀಜೆಲ್ ತುಂಬಲು ಹೇಳಿದರೆ ನಾವು ೧೫ ಗ್ಯಾಲನ್ನನ್ನು ಮಾತ್ರ ತುಂಬಿ ಉಳಿದದ್ದನ್ನು ನಮಗಾಗಿ ತೆಗೆದಿರಿಸುತ್ತಿದ್ದೆವು.

ಇಂಥ ಸಾಹಸ ತುಂಬ ಅಪಾಯಕಾರಿಯಾದದ್ದೇ. ಡೀಜೆಲ್ ಕಳವು ಅದು ಹೇಗೋ ಜರ್ಮನರಿಗೆ ಗೊತ್ತಾಗಿಬಿಟ್ಟಿತು. ಪ್ರತಿಯೊಬ್ಬನನ್ನೂ ಅವರು ಸಂಶಯದಿಂದಲೇ ನೋಡತೊಡಗಿದರು. ಅಂತೆಯೇ ಒಂದೇ ಕಡೆ ಬಹಳ ಕಾಲ ಇರುವುದು ಜಾಣತನವೂ ಅಲ್ಲ, ಸುರಕ್ಷಿತವೂ ಅಲ್ಲ ಎನಿಸಿತು. ಅದರಲ್ಲೂ ಡೀಜೆಲ್ ಮತ್ತು ಗನ್‌ಗಳು ಅವರ

ಕಣ್ಣೆದುರೆ ಕಣ್ಮರೆಯಾಗತೊಡಗಿದ ಸಂದರ್ಭವಲ್ಲವೆ ಅದು ?

ಆದ್ದರಿಂದ ನಾನು ಈ ಕೆಲಸವನ್ನೂ ಬಿಟ್ಟು ಕೊಟ್ಟೆ. ಅಪ್ಪ ಇನ್ನೂ ಬಣ್ಣ ಬಳಿಯುವ ಕಾಂಟ್ರಾಕ್ಟ್ ಎಂದು ಏಗುತ್ತಲೇ ಇದ್ದ. ಜರ್ಮನರು ಹಾಲೆಂಡಿನ ಬಣ್ಣವನ್ನೆಲ್ಲ ಮುಟ್ಟುಗೋಲು ಹಾಕಿಕೊಂಡಿದ್ದರು. ಆದರೆ ನಾವು ಅವರಿಗಾಗಿಯೇ ಬಣ್ಣದ ಕೆಲಸ ಮಾಡುತ್ತಿದ್ದೆವಲ್ಲ! ಅವರ ವಿಮಾನುಗಳ ರೆಕ್ಕೆಗಳಿಗೆ ಹಾಗೂ ಆರ್ಮಿ ಬ್ಯಾರಕ್ಕುಗಳಿಗೆ ಬಣ್ಣ ಕೊಡುವ ಕೆಲಸ ನಮ್ಮದು.

ಜೂನ್ ೧೯೪೨. ಅಪ್ಪನೊಂದಿಗೆ ಹೀಗೇ ಬ್ಯಾರಕ್ಕುಗಳಿಗೆ ಪೇಂಟ್ ಮಾಡುವ ಕೆಲಸದಲ್ಲಿ ತೊಡಗಿದ್ದೆ. ಮೂರಂತಸ್ತಿನ ಕಟ್ಟಡ. ಮೇಲಿನಿಂದ ಇಳಿಬಿದ್ದ ಏಣಿ. ಅದರ ಮೇಲೆ ಕುಳಿತು ಕಿಟಕಿಗಳಿಗೆ ಬಣ್ಣ ಹಚ್ಚುತ್ತಲಿದ್ದೆ. ಇದರಿಂದ ಒಂದು ಅನುಕೂಲವಿತ್ತು. ನಾನು ಒಮ್ಮೆಲೇ ಎರಡು ಕಿಟಕಿಗಳನ್ನು ತಲಪಬಹುದಿತ್ತು. ಅದೂ ಬೇರೆ ಬೇರೆ ಕಟ್ಟಡಗಳಿಗೆ ಸೇರಿದ ಎರಡು ಕಿಟಕಿಗಳನ್ನು. ಅಂದರೆ ಮತ್ತೊಮ್ಮೆ ಏರಿ ಬಣ್ಣ ಬಳಿಯಬೇಕಾದ ತೊಂದರೆ ಇರುತ್ತಿರಲಿಲ್ಲ.

ಅಂದೇಕೋ ವಾತಾವರಣವೇ ಸರಿಯಿರಲಿಲ್ಲ. ಮೋಡ ಮುಸುಕಿದ ಆಕಾಶ. ಮಬ್ಬು ಮಬ್ಬಾದ ಬೆಳಕು. ಮೂವತ್ತು ಅಡಿಗಳ ಎತ್ತರದಲ್ಲಿದ್ದ ನನಗೆ ಪಕ್ಕದ ಕಟ್ಟಡದ ಕಿಟಕಿಯೂ ಸರಿಯಾಗಿ ಕಾಣದಂಥ ಮಂದ ಪ್ರಕಾಶ. ವಾಡಿಕೆಯಂತೆ ನೂಲೇಣಿಯನ್ನು ಜೀಕಿದೆ. ಆ ಕಡೆಯ ಕಿಟಕಿಯ ಸರಳು ಹಿಡಿದರೆ ಅದು ಕಿತ್ತುಕೊಂಡೇ ಬಂತು! ನನ್ನ ಸಮತೋಲ ತಪ್ಪಿ ಹೋಯಿತು. ಸಾಲದ್ದಕ್ಕೆ ನೂಲೇಣಿಯನ್ನು ಮೇಲೆ ಕಟ್ಟಿದ್ದ ಜಾಗದಲ್ಲಿ ಹಗ್ಗ ಕಟಗರಿಸಿತು.

ಏನಾಯಿತಿದು ಎಂದುಕೊಳ್ಳುವಷ್ಟರಲ್ಲೇ ನಾನು ತಲೆಕೆಳಗಾಗಿ ನೆಲದೆಡೆ ಬೀಳತೊಡಗಿದ್ದೆ. ಕಣ್ಣೆದುರು ಅಪ್ಪ-ಅಮ್ಮ-ಅಣ್ಣ-ಅಕ್ಕಂದಿರ ಮುಖಗಳೆಲ್ಲ ಹಾದುಹೋದುವು. ಮೂರ್ನಾಲ್ಕು ಸೆಕೆಂದು ಅಷ್ಟೆ.

ನಾನು ಅಪ್ಪಳಿಸಿ ಬಿದ್ದದ್ದೆಲ್ಲಿ? ಕಲ್ಲು ಚಪ್ಪಡಿ ಹೊಂದಿಸಿದ ಕಾಲ್ದಾರಿಯ ಮೇಲೆ! ಬಿದ್ದವ-ಅದಾವ ರೌಸಿತ್ತೋ-ಎದ್ದೆ. ನೆತ್ತರು ಸುರಿಯುತ್ತಿದ್ದುದು ಗೊತ್ತಾದರೂ ಹೆಜ್ಜೆ ಕಿತ್ತಿದೆ.



ಒಂದು.....

ಎ....ರಡು...

ಮೂ...ರು...

ನಾ....ಲ್ಕು

ಐ.....ದು...

ಕಣ್ಣು ಕತ್ತಲೆಗೂಡಿತು....

ಪೀಟರ್ ವಾನ್‌ಡರ್ ಹರ್ಕ್ ಶಾಶ್ವತವಾಗಿ ಈ ಲೋಕದಿಂದ ಮರೆಯಾಗಿದ್ದ; ಪೀಟರ್ ಹರ್‌ಕೋಸ್‌ಗೆ ಈ ಜಗತ್ತಿನಲ್ಲಿ ಬೆಳೆಯಲು ಅನುವು ಮಾಡಿಕೊಡಲೆಂದು....

ನಾನು ಆಸ್ಪತ್ರೆ ಸೇರಿದ್ದು, ಶಸ್ತ್ರಕ್ರಿಯೆಗೊಳಗಾದದ್ದು ಯಾವುದೂ ನನಗೆ ಗೊತ್ತಿಲ್ಲ.

ಆದರೆ ನಂತರದ ಕಥೆಯೆಲ್ಲ ನಿಮಗೆ ಗೊತ್ತೇ ಇದೆಯಲ್ಲ....

'ಎಕ್ಸ್-ರೇ ಕಣ್ಣಿನ ಮನುಷ್ಯ' ಕಂಡದ್ದರಲ್ಲಿ ಕೆಲವನ್ನು ಮಾತ್ರ ಆಯ್ದು ನಿಮಗೆ ತೋರಿಸಿದ್ದೇನೆ. ಆದರೆ ಆ ಸುದೀರ್ಘವಾದ ಬದುಕಿನಲ್ಲಿ ಆತ ಇನ್ನೂ ಏನೇನು ಕಂಡನೋ.... ●

(ಮುಗಿಯಿತು)

# ಮಾತು-ಮಾಣಿಕ್ಯ

೨೨

## ಸ್ಥಿರತೆಯ ಸಂಕೇತ

## ಕಾಲು

**ದು**ಡಿಯುವ ಕೈ, ನಡೆಯುವ ಕಾಲು ಗಟ್ಟಿಮುಟ್ಟಾಗಿದ್ದರೆ, ಬದುಕಿಗೊಂದು ನೆಮ್ಮದಿ. ಬದುಕಿಗೆ ಸಾರ್ಥಕತೆಯನ್ನು ತಂದೀಯುವುದು ಕೈ ಆದರೆ ಸ್ಥಿರತೆಯನ್ನು ಒದಗಿಸುವುದು ಕಾಲು. ವಿದ್ಯಾಭ್ಯಾಸ ಮುಗಿಸಿ, ಉದ್ಯೋಗಕ್ಕೆ ಸೇರಿಕೊಂಡು, ತನ್ನ ಕಾಲ ಮೇಲೆ ತಾನು ನಿಲ್ಲುವಂತಾದರೆ, ಯುವಕನಿಗೆ ಅಪಾರ ಹರುಷ; ಹಿರಿಯರಿಗೆ ಅದೊಂದು ಹೆಮ್ಮೆ.

ಹೊಳೆಯ ನೀರೊಳಗೆ ಸಂಚರಿಸುವ ದೋಣಿಯ ಹಾಯಿಗೆ ಬೆಂಬಲವಾಗಿ ನಿಲ್ಲುವುದು ಆಧಾರಸ್ತಂಭ. ಅದೇ ತೆರನಾಗಿ, ಬಾಳಿನ ಹೊಳೆಯಲ್ಲಿ ಮುಂದೆ ಮುಂದೆ ಚಲಿಸುತ್ತ ಹೋಗುವ ದೇಹವೆಂಬ ದೋಣಿಗೆ ಕಾಲು ಇಂತಹ ಆಧಾರಸ್ತಂಭವೇ ಸರಿ. ಪೋಲಿಯೋದಂತಹ ಬೇನೆಗೆ ಅದು ಬಲಿಯಾಯಿತೋ ಆ ವ್ಯಕ್ತಿ ಕಾಲಳೆದುಕೊಂಡೇ ನಡೆಯಬೇಕು. ಹೆಳವನಾಗಲಿ ಕುಂಟನಾಗಲಿ ಕೈಯೊಳಗೆ ಊರುಗೋಲು ಹಿಡಿದುಕೊಂಡೇ, ತನಗೊದಗಿದ ಅಂಗವಿಕಲತೆಯನ್ನು ಕೆಲವುಮಟ್ಟಿಗಾದರೂ ಪರಿಹರಿಸಿಕೊಳ್ಳಬೇಕು. "ಊರುಗೋಲು ಇಲ್ಲದೇ ಹೆಳವ ಸಾಗಿದಂತೆಯೇ" ಎಂಬ ಕವಿ ವಿನಾಯಕರ ಕವನದ ಸಾಲು ಈ ಅಂಶವನ್ನು ಎತ್ತಿ ತೋರಿಸುವಂಥದು. ರಣಾಂಗಣದಲ್ಲಿ ಸ್ಥಿರವಾಗಿ ನಿಂತುಕೊಂಡು ಹೋರಾಡಬೇಕಾದ ಯೋಧರು ಸೋಲನ್ನಪ್ಪುವ ಸೂಚನೆ ಕಂಡೊಡನೆ ಅಲ್ಲಿಂದ ಮರುಮಾತಿಲ್ಲದೆ ಕಾಲ್ದೆಗೆಯುತ್ತಾರೆ. ಪ್ರಾಚೀನ ಕಾಲದ ಗಜ-ತುರಗ-ರಥ-ಪದಾತಿ ಎಂಬ ಚತುರಂಗ ಸೇನೆಯ ಒಂದು ವಿಭಾಗವಾದ ಪದಾತಿ ಎಂಬುದು ಕಾಲ್ದಳ- ಕಾಲಾಳುಗಳ ತಂಡ. ಇಂದಿನ "ಭೂ ಸೇನೆ" ಈ ತಂಡಕ್ಕೆ ಸರಿಸಮಾನ.

ಜಟಿಲವಾದ ಸಮಸ್ಯೆಯನ್ನು ಬಿಡಿಸಲು ತೊಡಗಿದವನು ತಲೆ ಕೆದರಿಕೊಳ್ಳುತ್ತಾನೆ. ಓರ್ವನ ವಿಷಯದಲ್ಲಿ ಹಗೆತನದ ಭಾವನೆಯನ್ನು ಹೊಂದಿದವನು ಸಮಯ ಸಾಧಿಸಿ ಅವನೊಂದಿಗೆ ಕಾಲು ಕೆದರಿ ಜಗಳ ತೆಗೆಯುತ್ತಾನೆ. ತಲೆಕೆದರಿಕೊಂಡರೆ ಇದ್ದ ತೊಡಕು ಬಿಟ್ಟು ಹೋದೀತು. ಕಾಲು ಕೆದರಿದರೆ ಇಲ್ಲದ ಹೊಸದೊಂದು ತೊಂದರೆ ಗಂಟುಬಿದ್ದೀತು.

ತಾಯಿಯ ಬಾಲಂಗೋಸಿಯಂತೆ ಬೆನ್ನು ಬಿಡದ ಪುಟ್ಟ ಬಾಲಕ ಅವಳ ಕಾಲ ಕಾಲೊಳಗೆ ಓಡಾಡತೊಡಗಿದರೆ ಆಕೆ ಸಿಡಿಮಿಡಿಗೊಳ್ಳುತ್ತಾಳೆ. ಹಾಗೆಯೆ ಮದುವೆಯಾದ ಹೊಸದರಲ್ಲಿ ಪತಿರಾಯ ಕೈ ಹಿಡಿದ ಸತಿಯ ಕಾಲ ಕಾಲೊಳಗೆ ಅಲೆಯ ತೊಡಗಿದನೋ ಆಕೆಯ ಗೃಹ ಕೃತ್ಯಗಳಿಗೆಲ್ಲ ವ್ಯತ್ಯಯವುಂಟಾಗುವ ವಿಷಯ ಯಾರಿಗೆ ತಾನೆ ಗೊತ್ತಿಲ್ಲ?

ಚಲನವಲನಕ್ಕೆ ಸಾಧನವಾದ ಕಾಲು ಒಮ್ಮೊಮ್ಮೆ ತೊಡಕನ್ನೂ ಅನುಭವಿಸುತ್ತದೆ. ಕುಟುಂಬದ ಸದಸ್ಯನೊಬ್ಬನು ಹಾಸಿಗೆ ಹಿಡಿದು ಮಲಗಿದ್ದರೆ, ಇತರರಿಗೆ ಕಾಲ್ತೊಡಕಾಗುತ್ತಾನೆ. ಮನೆಯವರೆಲ್ಲರೂ ಸೇರಿ ಹೋಗಲೇಬೇಕಾದಂತಹ ಸಮಾರಂಭದ ಸಂದರ್ಭ ಎದುರಾಯಿತೋ ಅಂತಹವನನ್ನು ಜೊತೆಗೆ ಕರೆದುಕೊಂಡು ಹೋಗಲು ಸಾಧ್ಯವಿಲ್ಲ; ಮನೆಯಲ್ಲಿಯೆ ಬಿಟ್ಟುಹೋಗಲೂ ಆಗುವುದಿಲ್ಲ.

• ಪ್ರೊ. ಶ್ರೀನಿವಾಸ ತೋಫಖಾನೆ

ಗುರುಹಿರಿಯರ ಕಾಲಿಗೆರಗುವುದು ಗೌರವದ ದ್ಯೋತಕ. ಆದರೆ ಹೆರವರ ಕಾಲಿಗೆರಗುವಂತೆ ನಟಿಸಿ ಕಾಲುಂಗುರ ಉಚ್ಚಿಕೊಳ್ಳುವುದು ಧೂರ್ತನ ಲಕ್ಷಣ, ವಂಚಕನ ಹಂಚಿಕೆ. ಸುಮಂಗಲೆಯರು ಸೌಭಾಗ್ಯದ ಸಂಕೇತವೆಂದು ಕಾಲುಂಗುರ ಇಟ್ಟುಕೊಳ್ಳುವುದೊಂದು ವಾಡಿಕೆ. ತಾವಿರಿಸಿಕೊಳ್ಳುವುದಲ್ಲದೆ ಹಬ್ಬಹರಿದಿನಗಳಲ್ಲಿ ವ್ರತಾಚರಣೆಯ ಅಂಗವಾಗಿ ಇತರ ಮುತ್ತೈದೆಯರನ್ನು ಬರಮಾಡಿಕೊಂಡು ಕಾಲುಂಗುರ ತೊಡಿಸುವ ಪದ್ಧತಿ ಈಗಲೂ ಉಂಟು.

ನೃತ್ಯ ಕಲೋಪಾಸಕರು ಕಾಲಿಗೆ ಗೆಜ್ಜೆ ಕಟ್ಟಿಕೊಂಡು "ಘಿಲ್ ಘಿಲ್" ಎನ್ನುವ ಮಂಜುಳ ನಿನಾದದ ಮೂಲಕ ರಸಿಕರ ಕಿವಿಗಳನ್ನು ರಂಜಿಸುತ್ತಾರೆ. ಕೈಗೆ ಕಂಕಣ ಭೂಷಣವೆಸಿದರೆ ಕಾಲಿಗೆ ಗೆಜ್ಜೆ ಅಂದಚಂದದ ಸಾಧನ. "ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ ಗೆಜ್ಜೆ ಕಾಲ್ಗಳ ಕುಣಿಸುತ ಬಾರೆ" ಎಂದು ದಾಸವರೇಣ್ಯರು ಶ್ರೀದೇವಿಯನ್ನು ಬರಮಾಡಿಕೊಳ್ಳುವ ಸಮಯಕ್ಕೆ ಭಕ್ತಿ ಪರವಶರಾಗಿ ಹಾಡಿದ ಈ ಸಾಲು ತುಂಬಾ ಜನಪ್ರಿಯ.

ಹಳ್ಳಿಗರು ತಮ್ಮ ಆಡು ನುಡಿಯಲ್ಲಿ ಬಳಸುವ "ಕಾಲ್ಮರಿ" ಕಾಲಿನ ಮರಿ ಅಲ್ಲ; ಅದು ಪಾದರಕ್ಷೆ. ಬೀದಿಯಲ್ಲಿ ಬಿದ್ದಿರುವ ಕಲ್ಲು-ಮುಳ್ಳು-ಗಾಜಿನ ಚೂರುಗಳಿಂದ ಕಾಲುಗಳನ್ನು ಮರೆಮಾಡಿ ಕಾಪಾಡುವುದರಿಂದ ಈ ಪದ ಬಂದಂತಿದೆ. ಒಮ್ಮೊಮ್ಮೆ ಆಗದವರನ್ನು ಅವಮಾನಗೊಳಿಸಲು ಈ "ಕಾಲ್ಮರಿ" ಕಾಲನ್ನು ತೊರೆದು ಕೈಯನ್ನು ಸೇರಿಕೊಂಡರೆ ಅಚ್ಚರಿಪಡಬೇಕಿಲ್ಲ. ಇಂತಹ ಸಂದರ್ಭದಲ್ಲಿ ಇದನ್ನು "ಕೈಮರಿ" ಎಂದು ಕರೆಯುವ ಗೋಜಿಗೆ ಇದುವರೆಗೆ ಯಾರೂ ಹೋಗದಿರುವುದು "ಕಾಲ್ಮರಿ"ಯ ವೈಶಿಷ್ಟ್ಯ.

ಮದುಮಗಳು ಮನೆ ತುಂಬಿಸುವ ಕಾಲಕ್ಕೆ ಹೊಸ್ತಿಲ ಮೇಲಿರಿಸಿದ ಕಾಳು ತುಂಬಿದ ಕಾಲುಪಾವನ್ನು ಬಲಗಾಲಿನಿಂದ ಎಡವಿ ಮನೆಯೊಳಗೆ ಕಾಲಿಡುವಳು. ಮುಂದಿನ ದಿನಗಳಲ್ಲಿ ಆ ಕುಟುಂಬದಲ್ಲಿ ಒಳ್ಳೆಯದೋ, ಕೆಟ್ಟದ್ದೋ ಸಂಭವಿಸುವುದು ಎಲ್ಲ ಅವಳ "ಕಾಲ್ಗುಣ" ಎನ್ನಲಾಗುತ್ತದೆ. ಇಂದಿನ ವೈಜ್ಞಾನಿಕ, ತಾಂತ್ರಿಕ, ನವ ವೈಚಾರಿಕ ವಿದ್ಯಮಾನಗಳ ಹಿನ್ನೆಲೆಯಲ್ಲಿ ಬಾಸಿಂಗ ಕಟ್ಟಿದ ಕೈಗಳೇ ವಧುವಿನ ತಲೆಗೆ ಆರೋಪದ ಪಟ್ಟಿಯನ್ನು ಅಂಟಿಸುವಲ್ಲಿ ಹಿಂದೇಟು ಹಾಕದಿರುವುದು ತುಂಬಾ ಸೋಜಿಗದ ಸಂಗತಿ.

ಸಂಸ್ಥೆಯೊಂದಕ್ಕೆ ಸ್ವಂತದ ಕಾಲು ಇಲ್ಲದಿದ್ದರೂ ಬೆಳ್ಳಿಯ ಹಬ್ಬ, ಚಿನ್ನದ ಹಬ್ಬದಂತಹ ವರುಷದಲ್ಲಿ ಕಾಲಿರಿಸುತ್ತದೆ, ತನ್ನ ಸದಸ್ಯರ ಬಳಗಕ್ಕೆಲ್ಲ ಹರುಷ ತರುತ್ತದೆ.

ತಮಗಾಗದವರ ಪ್ರಗತಿಯನ್ನು ಗಮನಿಸಿ ಹೊಟ್ಟೆಕಿಚ್ಚು ಪಡುವವರು ಅವರಿಗೆ ಅರಿವಾಗದಂತೆ ಹಿಂದಿನಿಂದ ಕಾಲು ಹಿಡಿದು ಜಗ್ಗಲು ಹಿಂಜರಿಯುವುದಿಲ್ಲ. ಕೈಗೊಂದು, ಕಾಲಿಗೊಂದು ಆಳು ಇಟ್ಟುಕೊಳ್ಳುವುದು ಶ್ರೀಮಂತಿಕೆಯ ಸಂಕೇತ. ಕಾಲು ಮೇಲೆ ಕಾಲುಹಾಕಿಕೊಂಡು ಕುಳಿತುಕೊಳ್ಳುವುದು ಐಷಾರಾಮದ ಕುರುಹು. ಆದರೆ ಕಿರಿಯರು ಹಿರಿಯರೆದುರು ಹೀಗೆ ಮಾಡಿದರೆ ಅದು ಅಗೌರವವೆನಿಸುತ್ತದೆ. "ಕಾಲು ಕೆಳಗಿಟ್ಟು ಸರಿಯಾಗಿ ಕುಳಿತುಕೋ" ಎಂದು ಭರ್ತ್ಸನೆಗೆ ಗುರಿಯಾಗಬೇಕಾಗುತ್ತದೆ.

ತೋಟದಲ್ಲಿಯ ಹೂ ಹಣ್ಣು ಕಾಯಿ ಕದಿಯಲು ಬಂದವನು ಕಣ್ಣಿಗೆ ಬಿದ್ದರೆ ಕಾವಲುಗಾರ ಕೂಗಿಕೊಳ್ಳುತ್ತಾನೆ; "ಇನ್ನೊಂದು ಸಲ ಬಂದೆಯೋ ಕಾಲು ಮುರಿದು ಕೈಗೆ ಕೊಟ್ಟೇನು ಹುಷಾರ್; ಎಂದು. ಕಳುವು ಮಾಡುವುದು ಕೈ, ಫಜೀತಿಪಟ್ಟುಕೊಳ್ಳುವುದು ಕಾಲು. ಅಪರಾಧದ ಒಂದಂಶ ಕಾಲಿಗೂ ಸೇರಿದೆಯಲ್ಲ. ಆ ಸ್ಥಳಕ್ಕೆ ಆತನನ್ನು ಕರೆದೊಯ್ದುದು ಕಾಲಲ್ಲವೆ? ಹಾವು ಕಂಡರೆ ಹೆದರಿ ಪುಕ್ಕರು ಕಾಲ್ದೆಗೆಯುವರು. ಹೆರವರನ್ನು ಹೆದರಿಸಲು ಕಾಲೊಳಗೆ ಹಾವು ಬಿಡಲು ಮುಂದಾಗುವವರೂ ಉಂಟು.

ನೋವು ಇರಲಿ ಬಿಡಲಿ, ಗುರುಗಳಿಗೆ ಸ್ವಾಮಿಗಳಿಗೆ ಶಿಷ್ಯರಿಂದ ಕಾಲೊತ್ತಿಸಿಕೊಳ್ಳುವ ಚಪಲ ಸಾಮಾನ್ಯ. ಮಾನವ ತನ್ನ ಈ ಸುಪ್ತ ಆಕಾಂಕ್ಷೆಯನ್ನು ದೇವರ ತಲೆ ಮೇಲೆ ಹೊರಿಸಲು ಹಿಂದೆ ಮುಂದೆ ನೋಡಲಿಲ್ಲ. ಶ್ರೀದೇವಿಯ ಕೈಗಳು ಶ್ರೀವಿಷ್ಣುವಿನ ಕಾಲುಗಳಿಗೆ ಸೇವೆಸಲ್ಲಿಸುವಲ್ಲಿ ಸದಾನಿರತವೆಂದು ಅನೇಕ ಪದಪದ್ಯಗಳಲ್ಲಿ ಚಿತ್ರಿತವಾದುದು ಈ ಮಾತಿಗೆ ನಿದರ್ಶನ.

• ಕೆ.ಎಸ್. ವತ್ಸಲಾ ವಿಶ್ವನಾಥ್



# ಕಣ್ಣುಗಳು

ಸತತವಾದ ಬಸ್ಸಿನ ಪ್ರಯಾಣದಿಂದ ಆಯಾಸಗೊಂಡು, ಇನ್ನೇನು ಸವಿನಿದ್ರೆಗೆ ಜಾರಬೇಕೆಂದಿರುವಾಗಲೇ ಧಡಕ್ಕೆಂದು ಬ್ರೇಕು ಹಾಕಿದ ಸದ್ದಿನಿಂದಾಗಿ ಥಟ್ಟನೆ ಎಚ್ಚರವಾಗಿಬಿಟ್ಟಿತು. ತೀರಾ ಬೇಸರದಿಂದಲೇ ಕಣ್ಣನ್ನು ಕಿರಿದುಗೊಳಿಸಿ ಹೊರಕ್ಕೆ ನೋಟ ಹರಿಸಿದಾಗ 'ಕಿನ್ನಿಗೋಳಿ' ಎಂದು ದೊಡ್ಡದಾಗಿ ಬರೆದಿದ್ದ ಬೋರ್ಡು ಕಾಣಿಸಿತು. ಹಿಂದಿನ ಸೀಟಿನಲ್ಲಿ ಕುಳಿತಿದ್ದ ಯಜಮಾನರು "ಸರೂ.... ಸರೂ...." ಎಂದು ಕೂಗುತ್ತಿದ್ದಂತೆಯೇ ನನ್ನ ದೃಷ್ಟಿ ಬಸ್ಸಿನಿಂದ ಆಚೆಗೆ ಹರಿಯಿತು. ಒಂದು ಕ್ಷಣ..... ಒಂದೇ ಕ್ಷಣದಲ್ಲಿ ನನ್ನನ್ನಾವರಿಸಿದ್ದ ಜೂಗರಿಕೆಯ ಭೂತ ಸದ್ದಿಲ್ಲದೆ ದೌಡಾಯಿಸಿಬಿಟ್ಟಿತು. ಅಗೋ! ಬಸ್ಸಿಗೆ ಹತ್ತುತ್ತಿರುವ ಮಂದಿಯ ಮಧ್ಯೆಯಲ್ಲಿ ನಿಂತಿರುವ ಆ ಹುಡುಗಿಯ ಅದ್ಭುತವಾದ ಕಣ್ಣುಗಳ ಸೌಂದರ್ಯ ನನ್ನನ್ನು ಸೆರೆಹಿಡಿದುಬಿಟ್ಟಿತು.

ಅಬ್ಬಾ! ನಿಜಕ್ಕೂ ಎಂತಹ ಸೌಂದರ್ಯ! ಇಂತಹ ಅಪೂರ್ವವಾದ ಕಣ್ಣುಗಳನ್ನು ನಾನು ಇದುವರೆಗೂ ಕಂಡಿರಲಿಲ್ಲ, ಅದೇನು ಮೋಡಿ ಆ ಜೋಡಿ ನೀಲನಯನಗಳಲ್ಲಿ! ಅದೆಂತಹ ಚುಂಬಕ ಶಕ್ತಿ ಆ ಕಣ್ಣುಗಳಲ್ಲಿ! ಪುರಾಣ ಕಥೆಗಳಲ್ಲಿ ವರ್ಣಿಸುವಂತೆ ಹರಿಣಾಕ್ಷಿ.... ಮೀನಾಕ್ಷಿ.... ಕಮಲಾಕ್ಷಿ.... ಏನೆಂದು ಹೆಸರಿಸಬಹುದು? ಉಹೂಂ.... ಅವುಗಳಿಗೂ ಮಿಗಿಲಾದ ಸುಂದರ ಕಣ್ಣುಗಳು. ವಿಶ್ವದ ಸೌಂದರ್ಯವನ್ನೆಲ್ಲಾ ಒಟ್ಟಿಗೆ ಹೀರಿ ತನ್ನೆರಡೂ ಕಣ್ಣುಗಳೊಳಗೆ ಅವಿತಿಟ್ಟುಕೊಂಡಿರುವಳೇನೋ ಎಂಬಂತಿರುವ ಆ ಲೋಚನದ್ವಯಗಳು. ಮೋಹಕತೆ.... ಮಾದಕತೆ.... ಅಯಸ್ಕಾಂತತೆಯ ತ್ರಿವೇಣೀ ಸಂಗಮದಂತಿರುವ ಕಣ್ಣುಗಳು.....

ಅವಳು ಬಸ್ಸಿನೊಳಗೆ ಬಂದು ಕುಳಿತಿದ್ದರೂ ನನ್ನ ಕಣ್ಣುಗಳನ್ನು.... ಅವಳಿಂದ ಕೀಳಲಾಗಲಿಲ್ಲ. ಛೇ! ನನಗೇನು ಬಂತು? ಅಪರಿಚಿತಳೊಬ್ಬಳನ್ನು ಹೀಗೆ ಒಂದೇ ಸಮನೆ ದಿಟ್ಟಿಸಿನೋಡುವುದು ಸೌಜನ್ಯವೆನಿಸೀತೇ? ಒಮ್ಮೆ ಅಕ್ಕಪಕ್ಕ ಪರೀಕ್ಷೆಯ ದೃಷ್ಟಿಯನ್ನು ಬೀರಿದೆ. ಊಹೂಂ.... ನನ್ನನ್ನಾಗಲೀ, ಅವಳನ್ನಾಗಲೀ ಬೇರೆ ಯಾರೂ ಗಮನಿಸುತ್ತಿಲ್ಲ. ಅವಳೂ ನನ್ನನ್ನು ಗಮನಿಸಿದಂತಿಲ್ಲ. ಆದರೂ.... ಬಲವಂತವಾಗಿ ಪರಿಸ್ಥಿತಿಯ ಜೊತೆ ರಾಜಿ ಮಾಡಿಕೊಂಡಂತೆ ನನ್ನ ನೋಟವನ್ನು ಅವಳ ಪಕ್ಕದಲ್ಲಿದ್ದ ವ್ಯಕ್ತಿಯತ್ತ ಹರಿಸಿದೆ. ಓಹ್! ಎಂತಹ ವಿಪರ್ಯಾಸ! ಭಗವಂತನ ಸೃಷ್ಟಿಯ ವೈಚಿತ್ರ್ಯವೆಂದರೆ ಬಹುಶಃ ಇದೇ ಇದ್ದೀತು. ಚೆಲುವಿನ ಪುತ್ಥಳಿಯ ಪಕ್ಕ ಕಪ್ಪುಬಣ್ಣದ, ಅವಲಕ್ಷಣದ ಧಡೂತಿ ಮನುಷ್ಯ. ವಯಸ್ಸಿನಲ್ಲಿ ಆ ಹುಡುಗಿಗಿಂತ ತುಂಬಾ ಹಿರಿಯನಂತಿರುವುದರಿಂದ ಬಹುಶಃ ಆಕೆಯ ಹಿರಿಯಣ್ಣನೊ, ಭಾವನೊ, ಮಾವನೊ ಆಗಿರಬೇಕೆಂದು ತರ್ಕಿಸಿತು ಮನಸ್ಸು. ಮರುಕ್ಷಣದಲ್ಲಿಯೇ ಆತನ ತೊಡೆಯ ಮೇಲೆ ಕುಳಿತ ೪-೫ ವರ್ಷದ ಮುದ್ದಾದ ಮಗುವಿನ ಮೇಲೆ ನೋಟ ಹರಿದಾಗ ಮತ್ತೆ ನನ್ನ ಮನ ಹೂವಿನಂತೆ ಮೃದುವಾಯಿತು. ಸುಂದರವಾದ ಗುಲಾಬಿ ಮೈಬಣ್ಣ, ದುಂಬಿಯಂತಹ ನೀಲಕಂಗಳು..... ಗುಂಗುರು.... ಗುಂಗುರಾದ ಕಪ್ಪು ತುಂಬುಗೂದಲು....

ಬಲವಂತವಾಗಿ ಅವಳಿಂದ ಕಣ್ಣು ಕಿತ್ತು ಬಸ್ಸಿನ ಹೊರಗೆ ವಿಜೃಂಭಿಸುತ್ತಿರುವ ಕರಾವಳಿಯ ನೈಸರ್ಗಿಕ ಚೆಲುವನ್ನು ಹೀರತೊಡಗಿದೆ. ಹಿಂದೆಯೇ ಬಂತು ಮತ್ತೆ ಆ ಕಣ್ಣುಗಳ ಸೆಳೆತ..... ಮತ್ತೆ ಮತ್ತೆ

ನೋಡಬೇಕೆನಿಸುವ ಆಕಾಂಕ್ಷೆಯನ್ನು ಹತ್ತಿಕ್ಕಲಾರದೆ ಹೋದೆ. ಆದರೆ ನನ್ನೆಲ್ಲಾ ಗೊಂದಲಗಳಿಗೂ ಮುಕ್ತಾಯ ಹಂತ ಬಂದಂತೆ ಮುಂದಿನ ಸ್ಟಾಪಿನಲ್ಲಿ ನನ್ನ ಪಕ್ಕದ ಜಾಗ ಖಾಲಿಯಾಗುತ್ತಲೇ ಆ ಹುಡುಗಿ ಸರಕ್ಕನೆ ಬಂದು ಕುಳಿತುಬಿಟ್ಟಳು. ಸೌಜನ್ಯಕ್ಕಾಗಿ, "ಆಂಟಿ, ಇಲ್ಲಿ ಕುಳಿತುಕೊಳ್ಳಬಹುದಲ್ವೆ?" ಪ್ರಶ್ನೆ ಬಂದಾಗ ನಾನು ಸಂತೋಷವಾಗಿಯೇ "ಓಹೋ! ಅದಕ್ಕೇನಂತೆ?" ಎಂದು ಉತ್ತರಿಸಿದೆ. ಅಬ್ಬಾ! ಅವಳ ನಿಟ್ಟುಸಿರಿನಲ್ಲಿ ಸಮಾಧಾನವಿತ್ತು. "ಆರಾಮವಾಯ್ತು ಇದೀಗ! ಅಲ್ಲಿ ಒಬ್ಬರ ಸ್ಥಳದಲ್ಲಿ ಮೂವರು ಕುಳಿತಿದ್ದೆವು" ಎಂದಳು ಬೆವರೊರೆಸಿಕೊಳ್ಳುತ್ತಾ.

ಆಕೆ ತುಂಬಾ ಮಾತುಗಾತಿಯಾಗಿದ್ದಳು. ನನಗೂ ಖುಷಿಯೇ ಆಯಿತು. ಯಜಮಾನರಂತೂ ಯಾವಾಗಲೂ ಬಸ್ಸಿನಲ್ಲಿ ಗೊರಕೆ ಹೊಡೆದುಕೊಂಡು ನಿದ್ರಿಸುವ ಸ್ವಭಾವದವರು. ಇನ್ನು ಅಭಿಜ್ಞಾ, ಅಪೂರ್ವರು ಪುಟ್ಟವರಾದುದರಿಂದ ಸುಲಭವಾಗಿಯೇ ನಿದ್ರೆಗೆ ಜಾರಿಬಿಡುತ್ತಿದ್ದರು. ಸಧ್ಯ! ತನಗೆ ಮಾತಿಗೆ ಜೊತೆಯಾಯಿತು ಎಂದುಕೊಂಡೆ. "ಎಲ್ಲಿಗೆ ಹೋಗ್ತಿದೀರಿ?" ನನ್ನ ಪ್ರಶ್ನೆಗೆ ತಟ್ಟನೆ ಉತ್ತರಿಸಿದಳು "ಕಟೀಲಿಗೆ, ಪೂರ್ವಿಯ ಹೆಸರಿನಲ್ಲೊಂದು ಹರಕೆಯಿತ್ತು. ಅದಕ್ಕೆಂದೇ ಹೊರಟಿದ್ದೇವೆ."

"ಪೂರ್ವಿ?"

"ಹೌದು ಆಂಟಿ. ಅದೋ ಅವಳೇ ಪೂರ್ವಿ," ಕೈ ಮಾಡಿ ತೋರಿಸಿದಳು. "ನನ್ನ ಮಗು. ಈಗೆರಡು ತಿಂಗಳ ಹಿಂದೆ ತೀರಾ ಅನಾರೋಗ್ಯವಾಗಿ ಮಗು ನಮ್ಮ ಕೈಬಿಟ್ಟಿತೆಂದೇ ಅಂದುಕೊಂಡಿದ್ದೆವು. ಸಧ್ಯ! ತಾಯಿ ದುರ್ಗಾಪರಮೇಶ್ವರಿಯ ದಯೆಯಿಂದ ಮತ್ತೆ ಚೇತರಿಸಿಕೊಂಡಳು."

ಪರ್ವಾಗಿಲ್ಲ, ಹುಡುಗಿ ಒಂದು ಕೇಳಿದರೆ ಹತ್ತು ಹೇಳುವ ಸ್ವಭಾವದವಳೆನಿಸಿತು. ಅದೇಕೋ ಅವಳ ನಡೆ, ನುಡಿಗಳು ನನ್ನೆದೆಯಲ್ಲಿ ತುಂಬು ಆತ್ಮೀಯತೆಯನ್ನೂ ಸಲಿಗೆಯನ್ನೂ ತುಂಬಿತು. ಇವಳೇ ಪುಟ್ಟ ಹುಡುಗಿ, ಇವಳಿಗೊಂದು ಮಗು ಬೇರೆ! ಅಂದುಕೊಂಡೆ.

"ನೀವೂ ಕಟೀಲಿಗಾ ಆಂಟಿ?" ಅವಳ ಪ್ರಶ್ನೆಗೆ ನಾನೂ ಸಾಕಷ್ಟು ದೀರ್ಘವಾಗಿಯೇ ಉತ್ತರಿಸಿದ್ದೆ

"ಹೌದಮ್ಮ... ನಾವು ಈ ಬೇಸಿಗೆಯಲ್ಲಿ ಕರಾವಳಿಯ ಪ್ರವಾಸಕ್ಕೆಂದು ಬಂದವರು. ಗೋವಾ, ಗೋಕರ್ಣ, ಮುರಡೇಶ್ವರ, ಮಲ್ಪೆ ಎಲ್ಲಾ ಸುತ್ತಾಡಿ ಈಗ ಕಟೀಲು.... ಅಲ್ಲಿಂದ ಮಂಗಳೂರು. ಮಂಗಳೂರಿನಿಂದ ನೇರ ಮೈಸೂರಿಗೆ ಹೋಗುವ ಯೋಜನೆಯಿದೆ."

ಅವಳ ಮುಖವರಳಿತು. "ಓಹೋ! ಹಾಗಾದರೆ ನನಗೂ ನಿಮ್ಮ ಜೊತೆಯಾಯಿತು. ಅಂದ್ಹಾಗೆ, ಆಂಟಿ ನೀವೊಬ್ಬರೆ?...." ಅವಳ ಪ್ರಶ್ನೆ ಅರ್ಥವಾಯಿತು.

"ಇಲ್ಲ, ಅದೋ ನೋಡು, ನನ್ನ ಯಜಮಾನರು, ಮಕ್ಕಳು," ಅಪೂರ್ವ, ಅಭಿಜ್ಞಾರತ್ತ ಬೊಟ್ಟು ಮಾಡಿ ತೋರಿಸಿದೆ.

---

"ಎಂತಹ ಅಪರೂಪದ
ಚೆಲುವಿಕೆ ಈ ಕಣ್ಣುಗಳದು!
ನಿನಗೆ ಯಾರಿಂದ ಬಂದಿತು
ಇಂತಹ ಬಳುವಳಿ?
ನಿನ್ನ ತಂದೆ.... ತಾಯಿ.... ತಾತ....
ಅಜ್ಜಿ? ಯಾರಿಂದ?"

---

"ಓಹ್! ಹೆಸರುಗಳು ಅವರಂತೆಯೇ ಮುದ್ದಾಗಿವೆ," ಎಂದಳು.

"ನಿನ್ನ ಹೆಸರೇನಮ್ಮಾ?" ಪ್ರಶ್ನಿಸಿದೆ.

"ಮಯೂರಿ."

"ನಿನ್ನ ಹೆಸರೂ ಸುಂದರವಾಗಿದೆ. ನಿನ್ನಂತೆಯೇ," ಎಂದಾಗ ಅವಳ ಮುಖ ನಾಚಿಕೆಯಿಂದ ಕೆಂಪುಕೆಂಪಾಯಿತು.

"ಹೌದು! ಮಯೂರಿ ನಿನ್ನ ಕಣ್ಣುಗಳಂತೂ ಅತಿಸುಂದರ.... ಅದ್ಭುತ. ನಿಜಹೇಳಬೇಕೆಂದರೆ, ನೀನು ನಮ್ಮ ಬಸ್ಸನ್ನು ಕಿನ್ನಿಗೋಳಿಯಲ್ಲಿ ಹತ್ತಿದಾಗ ನಾನು ನಿನ್ನನ್ನೂ ನಿನ್ನ ಕಂಗಳನ್ನೂ ಕಂಡು ಮೂಕಳಾಗಿಬಿಟ್ಟೆ. ಎಂದಾದರೂ ನೀನು ನಿನ್ನ ಕಣ್ಣುಗಳನ್ನು ಕನ್ನಡಿಯಲ್ಲಿ ದಿಟ್ಟಿಸಿ ನೋಡಿಕೊಂಡಿ

ರುವೆಯೇನು? ಎಂತಹಾ ಅಪರೂಪದ ಚೆಲುವಿಕೆ ಅವುಗಳದು! ನಿನಗೆ ಯಾರಿಂದ ಬಂದಿತು? ಇಂತಹ ಬಳುವಳಿ! ನಿನ್ನ ತಂದೆ.... ತಾಯಿ.... ತಾತ..... ಅಜ್ಜ? ಯಾರಿಂದ?"

ನನ್ನ ಪ್ರಶ್ನೆಯಿಂದಾಗಿ ಅವಳ ಮುಖ ಥಟ್ಟನೆ ಕಳೆಗುಂದಿ, ಅರಳಿದ ನಗುಮುಖ ಬಾಡಿ ಹೋಯಿತು.

ಏಕೆ? ತಾನೇನಾದರೂ ತಪ್ಪಾಗಿ ಪ್ರಶ್ನಿಸಿದನೇ? ಇದರಲ್ಲಿ ಅಂಥ ಪ್ರಮಾದವಾಗುವಂತಹುದೇ ನಿತ್ತು? ತಬ್ಬಿಬ್ಬಾದೆ ನಾನು.

"ಸ್ಸಾರಿ, ಮಯೂರಿ! ನನ್ನ ಪ್ರಶ್ನೆಯಿಂದ ಬೇಸರವಾಗಿ...."

ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡಳು ಮಯೂರಿ. ದುಃಖದಲ್ಲಿ ಅದ್ದಿ ತೆಗೆದಂತೆ ನಡುಗುವ ಸ್ವರದಲ್ಲಿ ನುಡಿದಳು.

"ಎಲ್ಲಾ ನನ್ನಕ್ಕ, ನನ್ನ ಮಧು ಕೊಟ್ಟ ಉಡು



ಗೂರೆ. ಅವಳ ಪ್ರೀತಿಯ ಕೊಡುಗೆ, ತ್ಯಾಗದ ಕೊಡುಗೆ ಆಂಟಿ. ನನ್ನದಾಗಿ ನನ್ನ ಬಳಿ ಏನೂ ಇಲ್ಲ..... ಏನೂ ಇಲ್ಲ..... "

"ಮಯೂರಿ..... ಮಯೂರಿ..... ಕೊಂಚ ಸಮಾಧಾನ ಮಾಡಿಕೋ. ನಿನ್ನ ದುಃಖವನ್ನು ಇನ್ನೊಬ್ಬರೊಡನೆ ಹಂಚಿಕೊಂಡರೆ ಮನಸ್ಸಿಗೆ ಎಷ್ಟೋ ನೆಮ್ಮದಿಯಾಗುತ್ತದೆ. ನನ್ನನ್ನು ನಿನ್ನ ಹಿರಿಯಕ್ಕನೆಂದೇ ಭಾವಿಸು."

ಮಯೂರಿ ನಿಧಾನವಾಗಿ ಕಣ್ತೆರೆದಳು. ಎಲ್ಲವನ್ನೂ ಹೇಳಿಕೊಂಡಳು.....

ಮಾಧುರಿ, ಮಯೂರಿ ತಾಯ್ತಂದೆಯರ ಪ್ರೀತಿಯ ಕುಡಿಗಳು. ಗಂಡುಮಕ್ಕಳಿಲ್ಲವಾದುದರಿಂದ ತಾಯ್ತಂದೆಯರ ಪೂರ್ಣವಾದ ಅಕ್ಕರೆಯ ಸಕ್ಕರೆಯನ್ನು ಸವಿದು ಬೆಳೆದರು. ಮಕ್ಕಳಿಬ್ಬರೂ ಅತಿ ರೂಪವಂತರು, ಗುಣವಂತರು, ಬುದ್ಧಿವಂತರು. ಆದರೆ.... ಮಯೂರಿ ಅತಿ ಚಿಕ್ಕ ವಯಸ್ಸಿ



ನಲ್ಲೆ ದೃಷ್ಟಿಯನ್ನು ಕಳೆದುಕೊಂಡ ಸತದೃಷ್ಟೆ ದೇವರು ಅವಳ ಪರಿಪೂರ್ಣ ಚೆಲುವಿಗೆ ದೃಷ್ಟಿಬೊಟ್ಟನ್ನಾಗಿ ಅಂಧತ್ವವನ್ನು ಇಟ್ಟುಬಿಟ್ಟ. ಆದರೇನು? ದೇವರು ದಯಾಮಯ. ಒಂದರಲ್ಲುಂಟಾದ ಕೊರತೆಯನ್ನು ಮತ್ತೊಂದರಲ್ಲಿ ತುಂಬಿಸಿರುತ್ತಾನಲ್ಲವೇ? ಮಯೂರಿಗೆ ಕಣ್ಣಿಗೆ ಕಣ್ಣಿನಂತೆ, ಪ್ರಾಣದಂತೆ ಪ್ರೀತಿಸುವ ಅಕ್ಕ ಮಾಧುರಿಯನ್ನು ಕೊಟ್ಟಿದ್ದ. ಮಾಧುರಿ ಲಕ್ಷಕ್ಕೊಬ್ಬ ಹುಡುಗಿ. ಮಯೂರಿಯ ಕತ್ತಲಗರ್ಭದಂತಿರುವ ಬದುಕಿನಲ್ಲಿ ಮಾಧುರಿ ಕುಡಿಬೆಳಕಾಗಿದ್ದಳು. ಮಾಧುರಿಗೂ ಮಯೂರಿಗೂ ಏಳೆಂಟು ವರ್ಷಗಳ ಅಂತರವಿದ್ದುದರಿಂದಲೋ ಏನೋ ಅವರಿಬ್ಬರಲ್ಲೂ ಅತಿಯಾದ ಅನ್ಯೋನ್ಯತೆಯಿತ್ತು. ಪ್ರಪಂಚವನ್ನು ಕಾಣುವ ಸೌಭಾಗ್ಯ ತಂಗಿಗಿಲ್ಲದುದಕ್ಕಾಗಿ ಮಧು ಸದಾ ಕೊರಗುವಳು. ಆದಷ್ಟು ಅವಳಿಗೆ ಆ ಕೊರತೆ ತಟ್ಟದಂತೆ ಪ್ರಯತ್ನಿಸುವಳು. ಮಯೂರಿಗಾಗಿ ಮಾಡುವ ಪ್ರತಿ ಕೆಲಸವೂ ಅವಳಿಗೆ ಅಪೂರ್ವವಾದ ಸಮಾಧಾನ, ಸಂತಸ ತರುತ್ತಿತ್ತು. ಅವಳ ಪ್ರತಿದಿನದ ಹೆಚ್ಚು ಸಮಯ ವಿನಿಯೋಗವಾಗುತ್ತಿದ್ದುದೂ ಮಯೂರಿಗಾಗಿಯೇ. ಮಯೂರಿ ಅವಳ ಪ್ರಾಣವಾಗಿದ್ದಳು, ಉಸಿರಾಗಿದ್ದಳು. ಮಕ್ಕಳಿಬ್ಬರ ಈ ಅನ್ಯೋನ್ಯತೆಯಿಂದಾಗಿ ತಾಯ್ತಂದೆಯರಿಗೆ ಮಯೂರಿ ಕಣ್ಣಿಲ್ಲದವಳೆಂಬ ಚಿಂತೆ ಎಷ್ಟೋ ಮರೆಯಾಗಿತ್ತು.

ಆದರೆ..... ಎಷ್ಟು ದಿನ ಎಲ್ಲವೂ ಸುಗಮವಾಗಿಯೇ ನಡೆಯಲು ಸಾಧ್ಯ? ನಿಜವಾದ ಸಮಸ್ಯೆ ಎದುರಾದದ್ದು ಮಾಧುರಿ ಚೆಲುವಿನ ಹೆಣ್ಣಾಗಿ ಮದುವೆಗೆ ಬೆಳೆದು ನಿಂತಾಗಲೇ. ತಾಯ್ತಂದೆಯರಿಗೆ ಮಗಳನ್ನು ಒಳ್ಳೆಯ ಕಡೆ ನೋಡಿ ಮದುವೆ ಮಾಡಿ ತಮ್ಮ ಭಾರವನ್ನು ಹಗುರಾಗಿಸಿಕೊಳ್ಳುವ ಆತುರ. ಎಷ್ಟೋ ಕಡೆಗಳಿಂದ ತಾವಾಗಿಯೇ ಗಂಡುಗಳು ಬಂದು ವಿಚಾರಿಸುವಂತಾದಾಗ ಅವರಿಗೆ ಇನ್ನು ತಡಮಾಡುವುದು ಮೂರ್ಖತನವೆನಿಸಿತು.

ಆದರೆ ಮಾಧುರಿ?.... "ಮಯೂರಿಯ ಸ್ಥಿತಿ ಹೀಗಿರುವಾಗ ನಾನು ಖಂಡಿತಾ ಮದುವೆಗೆ ಒಪ್ಪೊಲ್ಲ. ಮುಂದೆ ಅವಳ ಗತಿಯೇನು? ನನ್ನನ್ನು ಮದುವೆಯಾಗುವವನು ಅವಳನ್ನು ಸಾಕುವ ಭರವಸೆಯೇನಿದೆ? ಉಹೂಂ.... ನಾನು ಕೆಲಸಕ್ಕೆ ಸೇರಿ ಮಯೂರಿಯ ಬಾಳಿಗೆ ಆಸರೆಯಾಗಿದ್ದುಬಿಡುತ್ತೇನೆ. ತನಗೆ ಖಂಡಿತಾ ಮದುವೆ ಬೇಡಾ," ಎಂಬ ಒಂದೇ ಹಠ ಹಿಡಿದಿದ್ದಳು.

"ನೀನು ತಾನೆ ಎಷ್ಟು ದಿನ ಮದುವೆಯಿಲ್ಲದೆ ಇರಬಲ್ಲೆ? ಸ್ವಲ್ಪ ವಿಚಾರ ಮಾಡಿ ನೋಡು ಮಾಧುರಿ. ಮಯೂರಿಯದು ಏನಾದರೂ ಒಂದು ವ್ಯವಸ್ಥೆಯಾಗುತ್ತದೆ."

"ಇಲ್ಲಮ್ಮಾ... ಮಯೂರಿ ಜೀವಮಾನವಿಡೀ ಮದುವೆಯಿಲ್ಲದೆ ಇರಬಲ್ಲಳಾದರೆ ನಾನೇಕೆ ಇರಬಾರದು?" ಅವಳ ಹಠ ತಗ್ಗಲಿಲ್ಲ.

ಆದರೂ....

ಆದರೂ ಅವಳ ತಾಯ್ತಂದೆಯರು ತಮ್ಮ ಪ್ರಯತ್ನ ನಿಲ್ಲಿಸಲಿಲ್ಲ. ಅವಳೇನೋ ಹುಚ್ಚು ಹುಡುಗಿ! ಎಂತಹದೋ ಆದರ್ಶದ ಮಾತುಗಳನ್ನಾಡುತ್ತಾಳೆಂದರೆ ತಾವು ಸುಮ್ಮನಿರಲಾದೀತೆ? ಕೊನೆಗೆ ಮದುವೆ ಮನೆಯೊಂದರಲ್ಲಿ ಮಾಧುರಿಯನ್ನು ನೋಡಿ, ಮೆಚ್ಚಿ ಕೈ ಹಿಡಿಯಲು ಇಚ್ಛಿಸಿದ ಕೇದಾರನಾಥ ಅವರಿಗೊಂದು ಸಲಹೆಯನ್ನು ನೀಡಿದ್ದ.

"ನಿಮ್ಮ ಅಭ್ಯಂತರವೇನೂ ಇಲ್ಲದಿದ್ದಲ್ಲಿ ಮಾಧುರಿಯನ್ನು ಮದುವೆಯಾಗುವುದರ ಜೊತೆಗೆ ಮಯೂರಿಯ ಪೂರ್ಣ ಜವಾಬ್ದಾರಿಯನ್ನು ಹೊರಲು ನಾನು ಸಿದ್ಧನಿದ್ದೇನೆ. ಮಾಧುರಿ ತನ್ನ ಪ್ರಾಣಕ್ಕಿಂತ ಹೆಚ್ಚು ಪ್ರೀತಿಸುವ ಮಯೂರಿ ನನಗೂ ಹತ್ತಿರದವಳಲ್ವೇ? ಅವಳ ಯೋಚನೆಯನ್ನು ಬಿಟ್ಟು ನೀವು ನಿಶ್ಚಿಂತರಾಗಿರಬಹುದು...."

ಮಾಧುರಿಯ ತಾಯ್ತಂದೆಯರಿಗೆ ಈ ಸಲಹೆ ತುಂಬಾ ಇಷ್ಟವಾಯಿತು. ಕೇದಾರನಾಥ ಗುಣದಲ್ಲಿ ಚೊಕ್ಕ ಚಿನ್ನ, ವಿದ್ಯಾವಂತ, ಹಣವಂತ ಎಲ್ಲಾ ಸರಿ.... ಆದರೆ ಅವನ ರೂಪ?... ಚೆಲುವಿನ ಪುತ್ಥಳಿ ಮಾಧುರಿಗೆ ಖಂಡಿತಾ ಈತ ಜೋಡಿಯಾಗಲಾರ. ತಮಗೇ ಈ ವಿಷಯದಲ್ಲಿ ಅಸಮಾಧಾನವಿರುವಾಗ ಇನ್ನು ಮಗಳ ಬಳಿ ಪ್ರಸ್ತಾಪ ಮಾಡುವುದು ಹೇಗೆ? ಅವಳೊಪ್ಪಿದರೆ ಇಬ್ಬರ ಸಮಸ್ಯೆಗಳೂ ಪರಿಹಾರವಾಗಬಹುದಾದರೂ ತೀರಾ ಇಂತಹ ಕುರೂಪದ ಗಂಡನ್ನು?.... ಬೇಡಾ..... ಬೇಡವೇ ಬೇಡಾ. ನೋಡೋಣ. ಅವಳ ಅದೃಷ್ಟವಿದ್ದಂತೆ ಆಗಲಿ ಎಂದು ಸುಮ್ಮ

ಸಿದ್ಧು ಬಿಟ್ಟರು.

"ಕೇದಾರನಾಥ ನನ್ನ ಮಯೂರಿಯನ್ನು ಪ್ರೀತಿಯಿಂದ ಸಲಹುವನೆಂದರೆ, ನಾನು ಕೂಡಾ ಅಷ್ಟೇ ಸಂತೋಷದಿಂದ ಈ ಮದುವೆಗೆ ಸಿದ್ಧಳಾಗಿದ್ದೇನೆ. ಇದೇ ನನ್ನ ಕೊನೆಯ ನಿರ್ಧಾರ" ಎಂದು ನಾಲ್ಕು ದಿನಗಳಲ್ಲೇ ಮಾಧುರಿ ತನ್ನ ನಿರ್ಧಾರವನ್ನು ಖಂಡತುಂಡವಾಗಿ ಘೋಷಿಸಿದಾಗ ಎಲ್ಲರಿಗೂ ಆಘಾತವಾಗಿತ್ತು.

ಈಗ ಹಠ ಹಿಡಿಯುವ ಸರದಿ ಮಯೂರಿಯದಾಗಿತ್ತು. "ಬೇಡಾ ಮಾಧುರಿ, ಖಂಡಿತಾ ಈ ಮದುವೆಗೆ ಒಪ್ಪಬೇಡಾ. ಕೇವಲ ನನ್ನ ಹಿತದೃಷ್ಟಿಯಿಂದ ಈ ನಿರ್ಧಾರ ತೆಗೆದುಕೊಂಡು ನಿನ್ನ ಸ್ವಂತದ ಆಸೆ-ಆಕಾಂಕ್ಷೆಗಳನ್ನು ಬಲಿಗೊಡಬೇಡ. ಅನಂತರ ನೀನು ಜೀವನವಿಡೀ ನಿನ್ನ ನಿರ್ಧಾರಕ್ಕಾಗಿ ಕೊರಗಬೇಕಾಗುತ್ತದೆ. ನಿನ್ನಿಂದ ಇಂತಹ ತ್ಯಾಗವನ್ನು ನಾನು ಖಂಡಿತ ನಿರೀಕ್ಷಿಸುವುದೂ ಇಲ್ಲ, ಇಷ್ಟ ಪಡುವುದೂ ಇಲ್ಲ."

ಮಾಧುರಿ ಹಗುರವಾದ ಮನದಿಂದ ನಕ್ಕಿದ್ದಳು. "ಮಯೂರಿ, ಒಬ್ಬ ವ್ಯಕ್ತಿಯ ಸುಖ ಸಂತೋಷವನ್ನು ಕೇವಲ ಬಾಹ್ಯರೂಪವೊಂದರಲ್ಲೇ ಅಳೆಯುವುದಾದರೆ 'ಸುಖ' ಎನ್ನುವುದು ಎಷ್ಟೋ ಜನರ ಪಾಲಿಗೆ ಮರೀಚಿಕೆಯಾಗಿಯೇ ಉಳಿದು ಹೋಗುತ್ತಿತ್ತು. ಅಥವಾ ಪ್ರಪಂಚದಲ್ಲಿರುವ ರೂಪವಂತರೆಲ್ಲಾ ಅತ್ಯಂತ ಸುಖಿಗಳಾಗೇ ಇರಬೇಕಾಗಿತ್ತು. ಆದರೆ ಈಗ ಹಾಗಾಗಿದೆಯೇ? ಸುಖ ಎನ್ನುವುದು ಅಂತರಂಗಕ್ಕೆ ಸಂಬಂಧಪಟ್ಟ ವಿಷಯ. ಅದನ್ನು ನಾವು ಯಾರಲ್ಲಿಯಾದರೂ, ಎಲ್ಲಿಯಾದರೂ ಕಂಡುಕೊಳ್ಳಬಹುದು. ಕೇದಾರನಾಥನ ಗುಣ, ನಡತೆ, ಹೃದಯವೈಶಾಲ್ಯಗಳು ನನಗೆ ಮೆಚ್ಚಿಗೆಯಾಗಿವೆ. ನಾನು ಅವನನ್ನು ಯಾವ ಆದರ್ಶಗಳಿಗೂ ಬಲಿಬಿದ್ದು ಮದುವೆಯಾಗುತ್ತಿಲ್ಲ, ಮನಃಪೂರ್ವಕವಾಗಿಯೆ ಒಪ್ಪಿದ್ದೇನೆ. ಇನ್ನು ಈ ವಿಷಯದಲ್ಲಿ ಹೆಚ್ಚಿನ ಚರ್ಚೆ ಮಾಡುವುದು ನನಗಿಷ್ಟವಿಲ್ಲ" ಎಂದು ಎದ್ದುಹೋಗಿಬಿಟ್ಟಳು.

ಮಾಧುರಿ ಮದುವೆಯಾಗಿ ಗಂಡನ ಮನ, ಮನೆಗಳನ್ನು ತುಂಬಿದ್ದಳು. ಅವಳ ಬದುಕು ನಿಜಕ್ಕೂ ಸಂತೃಪ್ತವಾಗಿತ್ತು. ಸುಂದರವಾಗಿತ್ತು. ನಡೆದರೆ ಸವೆದಾಳು ಎಂಬಷ್ಟು ಜತನವಾಗಿ ನೋಡಿಕೊಳ್ಳುವ ಗಂಡು, ಪ್ರೀತಿಸುವ ಅತ್ತೆ-ಮಾವ, ಸುಖದಾಂಪತ್ಯದ ಫಲವಾಗಿ ಅವಳ ಚೆಲುವು ಇನ್ನೂ ಅರಳಿತ್ತು. ಅವಳ ಚೆಲುವಾದ ಕಣ್ಣುಗಳು ಸಂತೃಪ್ತಿಯ ಪ್ರತಿಬಿಂಬಗಳಾಗಿದ್ದವು.

ಕೇದಾರನಂತೂ ಅವಳ ಚೆಲುವಿನ ಆರಾಧಕನಾಗಿದ್ದ. "ಮಧೂ ನೀನೇಕೆ ಇಷ್ಟು ಚೆಲುವಾಗಿರುವೆ? ನಿನ್ನ ಕಣ್ಣುಗಳೇಕೆ ಇಷ್ಟು ಸುಂದರವಾಗಿವೆ? ನಿಜ ಹೇಳಬೇಕೆಂದರೆ ನಿನ್ನ ಕಣ್ಣುಗಳಲ್ಲಿ ಅದೆಂತಹುದೋ ಅದ್ಭುತ ಶಕ್ತಿ ಅಡಗಿದೆ. ಈ ನಿನ್ನ ಕಣ್ಣುಗಳೇ ನನಗೆ ಮೊದಲು ಮೋಡಿ ಮಾಡಿದ್ದು..... ಏಯ್ ಮಧೂ, ಏನೆಂದ್ರೂ ಈಗ ನಾನು ನಿನ್ನ ತಂಗಿ ಮಯೂರಿಗೆ ಮಾತ್ರ ನಿಜಕ್ಕೂ ಕೃತಜ್ಞನಾಗಿರ್ಬೇಕು ನೋಡು. ಏಕೆಂದ್ರೆ ಅವಳಿಗಾಗಿಯೇ ಅಲ್ವೆ ನೀನು ನನ್ನಂತಹ ಕುರೂಪಿಯನ್ನು ಮದುವೆಯಾಗಿದ್ದು. ಇಲ್ಲದಿದ್ರೆ ಇಷ್ಟೊತ್ತಿಗೆ ಬೇರಾವ ಮನ್ಮಥನ ಕೈ ಹಿಡಿದಿರುತ್ತಿದ್ದೆಯೋ...."

ಆಗೆಲ್ಲಾ ಮಾಧುರಿ ನಿಜಕ್ಕೂ ಕೋಪಿಸಿಕೊಂಡು ಬಿಡುತ್ತಿದ್ದಳು. "ರೂಪ.... ರೂಪ... ರೂಪ...... ನೀವೆಲ್ಲರೂ ಹೀಗೇಕೆ ಮನುಷ್ಯನ ಬಾಹ್ಯರೂಪಕ್ಕೆ ಪ್ರಾಮುಖ್ಯವನ್ನು ಕೊಡುತ್ತೀರಿ? ಮಾನವನ ಬದುಕಿನಲ್ಲಿ ಕೇವಲ ಅತ್ಯಲ್ಪ ಕಾಲ ಮಾತ್ರ ವಿಜೃಂಭಿಸುವ ರೂಪ ಶಾಶ್ವತವಲ್ಲ ಕೇದಾರ್, ವರ್ಷ ವರ್ಷಗಳು ಜಾರುತ್ತಿದ್ದಂತೆಯೇ ರೂಪ, ಲಾವಣ್ಯಗಳೂ ಜಾರುತ್ತಲೇ ಹೋಗುತ್ತವೆ. ಆದರೆ ವರ್ಷದಿಂದ ವರ್ಷಕ್ಕೆ ಏರುತ್ತಾ ಹೋಗುವುದು ನಮ್ಮಿಬ್ಬರ ಆತ್ಮೀಯವಾದ ಬಾಂಧವ್ಯ ಮಾತ್ರವೇ. ನಿಜವಾದ ದಾಂಪತ್ಯದ ಸಾರ್ಥಕ್ಯವಿರುವುದು ಕೂಡಾ ಅಲ್ಲಿಯೇ. ಅದು ನಮ್ಮಿಬ್ಬರ ಪಾಲಿಗೆ ಚಿರಂತನವಾಗಿದ್ದರೆ ಅಷ್ಟೇ ಸಾಕಲ್ಲವೇ?"

**ಬು-ಗುರಿ**

ಗುರಿಯಿಲ್ಲದಿರೆ ಬು-
ಗುರಿಯೊಲು
ಹಿಂದೆಯೂ ಹೋಗದೆ
ಮುಂದೆಯೂ ಸಾಗದೆ
ನಿಂತಲ್ಲೆ ತಿರುತಿರುಗಿ
ಕೊನೆಗೊಮ್ಮೆ
ಕುಸಿಯಬೇಕಾಗುವುದು!

● ಹಾಲಾಡಿ ಮಾರುತಿರಾವ್

ಎಂದು ಹೇಳಿ ಅವನನ್ನು ನಿರುತ್ತರನನ್ನಾಗಿ ಮಾಡಿ ಬಿಡುತ್ತಿದ್ದಳು.

ಪುಟ್ಟ ಪೂರ್ವಿ ಮಾಧುರಿಯ ಮಡಿಲನ್ನು ತುಂಬಿದಾಗ ಅವಳ ಬದುಕು ನಿಜಕ್ಕೂ ಪರಿಪೂರ್ಣವಾಗಿತ್ತು. ಪೂರ್ವಿ ರೂಪದಲ್ಲೂ ಗುಣದಲ್ಲೂ ಮಾಧುರಿಯ ಪಡಿಯಚ್ಚು. ಅವಳು ಮಯೂರಿಯ ಬಾಳಿಗೂ ಬೆಳಕಾಗಿದ್ದಳು. ವರ್ಷವರ್ಷಗಳು ಹಿಗ್ಗಿನಲ್ಲಿ ಕಳೆದವೆಷ್ಟೋ ಯಾರಿಗೂ ಅರಿವಿಲ್ಲ. ಸುಖದ ಕ್ಷಣಗಳು ಜಾರುವುದೇ ತಿಳಿಯುವುದಿಲ್ಲ. ಆದರೆ ದುಃಖದ ದುರ್ಭರ ಕ್ಷಣಗಳು ಮಾತ್ರ ಯುಗಗಳಂತೆ ಭಾಸವಾಗುತ್ತವೆ. ಆಮೆಯಂತೆ ತೆವಳುತ್ತವೆ.....

ಮಯೂರಿ ಸ್ವಲ್ಪ ಕಾಲ ಮೌನವಾಗಿದ್ದುಬಿಟ್ಟಳು. ಬಹುಶಃ ಮುಂದಿನ ಘಟನೆಗಳನ್ನು ತಿಳಿಸಲು ಅವಳಿಗೆ ಕಷ್ಟವೆನಿಸುತ್ತಿರಬಹುದು. ನಾನೂ ಮೌನವಾಗಿ ಕುಳಿತೆ. ಬರಿದೇ ಅವಳ ಕೈಯನ್ನು ಮೃದುವಾಗಿ ಒತ್ತಿದೆ ಸಾಂತ್ವನಕ್ಕೆಂಬಂತೆ. ನನ್ನ ಆತ್ಮೀಯ ಸ್ಪರ್ಶದಿಂದ ಅವಳ ಮನ ಹಗುರಾಯಿತೇನೋ! ಮತ್ತೆ ನಿಧಾನವಾಗಿ ಪ್ರಾರಂಭಿಸಿದಳು.

"ಆಂಟಿ, ಆ ದಿನಗಳನ್ನು ನೆನೆಸಿಕೊಳ್ಳಲೂ ನನ್ನೆದೆ ನಡಗುತ್ತಿದೆ. ದುಃಖದಿಂದ ಎದೆ ಬಿರಿಯುತ್ತದೆ. ಆ ಘಟನೆಗಳು ನಡೆದು ವರ್ಷಗಳು ಕಳೆದರೂ ನನ್ನ ಮನದಲ್ಲಿನ್ನೂ ಆ ಕಹಿನೆನಪುಗಳು ಹಸಿಹಸಿಯಾಗಿಯೇ ಉಳಿದಿವೆ. ಆ ದಿನ.... ನಮ್ಮೆಲ್ಲರ ಬದುಕಿನಲ್ಲೂ ಕರಾಳ ದಿನ.... ಕೇದಾರನ ಗೆಳೆಯನ ಮದುವೆಯ ಆರಕ್ಷರತೆಗೆಂದು ಸಂಭ್ರಮದಿಂದ ಮದುವಣಗಿತ್ತಿಯಂತೆ ಅಲಂಕರಿಸಿಕೊಂಡು ಹೊರಟ ಮಾಧುರಿ.... ಕೇದಾರನ ಬೈಕು ಲಾರಿಯಡಿಗೆ ಸಿಕ್ಕಿ ದೊಡ್ಡ ಅನಾಹುತವೇ ಜರುಗಿ ಹೋಯಿತು. ಯಾರೂ ಕನಸಿನಲ್ಲಿಯೂ ನೆನೆಸದ ಘೋರ ನಡೆದು ಹೋಯಿತು."

"ಅಯ್ಯೋ! ಎಂತಹ ಅನ್ಯಾಯವಾಗಿ ಹೋಯಿತು!" ಅಪ್ರಯತ್ನವಾಗಿ ನನ್ನಿಂದ ಉದ್ಗಾರ ಹೊರಟಿತು. "ಮತ್ತೆ ಮಾಧುರಿ... ಕೇದಾರ.... ಪುಟ್ಟ ಪೂರ್ವಿ?"

"ಪವಾಡವೆಂಬಂತೆ ಕೇದಾರ ಪ್ರಾಣಾಪಾಯದಿಂದ ಪಾರಾಗಿದ್ದ. ಮಾಧುರಿಗೆ ಮಾತ್ರ ತಲೆಗೆ ತುಂಬಾ ಪೆಟ್ಟಾಗಿ ಪರಿಸ್ಥಿತಿ ಗಂಭೀರವಾಗಿತ್ತು. ಪೂರ್ವಿಯನ್ನು ಮನೆಯಲ್ಲೇ ಬಿಟ್ಟು ಹೋದುದರಿಂದ ನಮಗೆ ಅವಳು ಉಳಿದಳು. ಇಲ್ಲದಿದ್ದರೆ...." ಮಯೂರಿಯ ಕೈಗಳು ಪೂರ್ವಿಯನ್ನಪ್ಪಿ ಹಿಡಿದವು.

ಕೇದಾರನಿಗಂತೂ ಹುಚ್ಚು ಹಿಡಿದಂತಾಗಿತ್ತು. ಸದಾ ಮಾಧುರಿಯದೇ ಧ್ಯಾನ. ಮಧುವಿಗಾಗಿ ಹಣವನ್ನು ನೀರಿನಂತೆ ಖರ್ಚುಮಾಡಿದ. ಏನೇ ಆಗಲಿ ಮಧೂ ತನಗಾಗಿ ಉಳಿಯಲೇಬೇಕು. ಮಾರನೆಯ ದಿನ ಮಧುವಿಗೆ ಕೊಂಚ ಪ್ರಜ್ಞೆ ಬಂದ ತಕ್ಷಣ ಅವಳಾಡಿದ ಮೊದಲ ಮಾತೇನು ಗೊತ್ತೇ ಆಂಟಿ? 'ಮಯೂರಿ, ನಾನು ಬದುಕುತ್ತೇನೆಂಬ ಭರವಸೆ ಖಂಡಿತ ನನಗೆ ಇಲ್ಲ. ನನಗೊಂದು ಮಾತು ಕೊಡುವೆಯಾ ಮಯೂರಿ! ನನ್ನನ್ನು ಪ್ರಾಣಕ್ಕಿಂತ ಹೆಚ್ಚು ಪ್ರೀತಿಸುವ ಕೇದಾರ ನನ್ನ ಸಾವಿನ ದುಃಖವನ್ನು ಖಂಡಿತಾ ತಡೆಯಲಾರ. ಮಯೂರಿ, ನನ್ನ ಕೇದಾರ ದುಃಖದಿಂದ ಹುಚ್ಚನಾಗಿಬಿಡುತ್ತಾನೆ. ಆದರೆ.... ಅದಾಗದಂತೆ ಮಾಡುವುದು ನಿನ್ನ ಕೈಯಲ್ಲೇ ಇದೆ. ಮಯೂರಿ, ನನಗೆ ಮಾತುಕೊಡು... ನನ್ನ ನಂತರ ನನ್ನ ಸಮಸ್ತ ಆಸ್ತಿಗೂ ನೀನೇ ವಾರಸುದಾರಳಾಗಬೇಕು. ನನ್ನ ಪ್ರೀತಿಯ ಕೇದಾರ, ಪೂರ್ವಿ, ಎಲ್ಲರನ್ನೂ ನಿನಗೆ ಉಡುಗೊರೆಯಾಗಿ ಬಿಟ್ಟು ಹೋಗುತ್ತಿದ್ದೇನೆ. ಹೇಳು. ಮಯೂರಿ.... ಸ್ವೀಕರಿಸುವೆಯಾ? ಹೇಳು? ಕೇದಾರನಿಗೆ ಪತ್ನಿಯಾಗಿ, ಪೂರ್ವಿಗೆ ತಾಯಿಯಾಗಿ ಅವರನ್ನು ರಕ್ಷಿಸುವೆಯಾ?' ಮಾಧುರಿ ನನ್ನೆರಡೂ ಕೈಗಳನ್ನು ಹಿಡಿದು ಕ್ಷೀಣವಾದ ಸ್ವರದಲ್ಲಿ ಆರ್ತತೆಯನ್ನು ತುಂಬಿ ನುಡಿದಾಗ ನಾನು ಕಲ್ಲಿನಂತಾಗಿಬಿಟ್ಟೆ. ಆಕೆ ಏನು ಹೇಳುತ್ತಿದ್ದಾಳೆ? ಅರ್ಥವಾಗದೇ ತೊಳಲಾಡಿದೆ. ನನ್ನ ಬಾಳೇ ಇನ್ನೊಬ್ಬರಿಗೆ ಹೊರೆಯಾಗಿರುವಾಗ ಇನ್ನು ಈ ಗುರುತರವಾದ ಜವಾಬ್ದಾರಿಯನ್ನು ಹೇಗೆ ಹೊರುವುದು? ನನ್ನ ಅಳಲು ಮಾಧುರಿಗೆ ಅರ್ಥವಾಯಿತು. ಗೆಲುವಿನ ಸ್ವರದಲ್ಲಿ ನುಡಿದಳು. 'ಮಯೂರಿ, ನಿನ್ನ ಅಂತರಂಗ ನನಗರ್ಥವಾಯಿತು. ಯೋಚಿಸಬೇಡ. ನಿನಗೆ ನನ್ನೆಲ್ಲಾ ಉಡುಗೊರೆಗಳ ಜೊತೆಗೆ ಇನ್ನೂ ಒಂದು ವಿಶೇಷ ಉಡುಗೊರೆಯನ್ನು ನೀಡುತ್ತೇನೆ. ಹೇಳು

ಮಯೂರಿ, ನಿನಗೆ ಒಪ್ಪಿಗೆಯೇ? ನನ್ನ ಕೇದಾರ ರೂಪವಂತನಲ್ಲದಿದ್ದರೂ ಗುಣದಲ್ಲಿ ಅಪರಂಜಿ..... ಮಾಧುರಿಯ ಉದ್ದೇಶ ಈಗ ಸ್ಪಷ್ಟವಾಗಿತ್ತು. ಅವಳ ಮಾತನ್ನು ಇನ್ನು ಹೆಚ್ಚು ಹೊತ್ತು ಕೇಳುವ ತಾಳ್ಮೆಯಿರಲಿಲ್ಲ. 'ಸಾಕು ಮಧೂ, ಇನ್ನೇನೂ ಹೇಳಬೇಡಾ. ಖಂಡಿತಾ ನಿನಗೇನೂ ಆಗುವುದಿಲ್ಲ. ನೀನು ಕೊಡುವ ಉಡುಗೊರೆಗಳು ನನಗೆ ಬೇಡ ಮಧೂ. ಅವು ಯಾವಾಗಲೂ ನಿನ್ನ ಬಳಿಯೇ ಇರಲಿ, ಎಂದು ನಾನು ಹಾರೈಸುತ್ತೇನೆ' ದುಃಖ ಉಕ್ಕುಕ್ಕಿ ಬಂದು ಅಲ್ಲಿ ಕುಳಿತಿರಲಾರದೆ ಎದ್ದು ಹೊರಕ್ಕೆ ಓಡಿ ಬಂದಿದ್ದೆ..... ಆದರೆ ಆಂಟಿ..... ಅಂದು ಮಧುವಾಡಿದ ಆ ಮಾತುಗಳೇ ಕೊನೆಯ ಮಾತುಗಳಾದವು. ಪುನಃ ಅವಳು ಚೇತರಿಸಿಕೊಳ್ಳಲಿಲ್ಲ. ಮತ್ತೆ ಮನೆಗೆ ಬರಲಿಲ್ಲ. ನಮ್ಮ ಪಾಲಿಗೆ ಶಾಶ್ವತವಾಗಿ ಇಲ್ಲವಾಗಿಬಿಟ್ಟಳು...."

ಮಯೂರಿಯ ದುಃಖಕ್ಕೆ ಸಮನಾಗಿತ್ತು ನನ್ನ ಮನಸ್ಸಿನ ನೋವು. ಏನೂ ಮಾತನಾಡಬೇಕೆನಿಸಲಿಲ್ಲ.

"ಆಂಟಿ, ನನಗೆ ಕಣ್ಣುಗಳು ಇಲ್ಲದುದಕ್ಕಾಗಿ ಜೀವನದಲ್ಲಿ ಒಂದು ಬಾರಿ, ಒಂದೇ ಬಾರಿ ಆ ದೇವರಿಗೆ ಕೃತಜ್ಞತೆಯನ್ನರ್ಪಿಸಿದ್ದೆ. ಏಕೆ ಗೊತ್ತೆ? ನನ್ನ ಮಾಧುರಿಯ ಅಂತಿಮಕ್ಷಣಗಳನ್ನು ನೋಡುವ ದೌರ್ಭಾಗ್ಯ ನನ್ನ ಪಾಲಿಗಿಲ್ಲವಲ್ಲಾ ಎಂದು."

"ಅಂದರೆ .... ಅಂದರೆ.... ಈ ನಿನ್ನ ಸುಂದರ ಕಣ್ಣುಗಳು...." ಬೆರಗಿನಿಂದ ಕೇಳಿದೆ.

"ಹೌದು! ಇದು ನನ್ನ ಮಾಧುರಿ ನನಗಿತ್ತ ಪ್ರೀತಿಯ ಉಡುಗೊರೆ. ಮಾಧುರಿಯ ಕೊನೆಯಾಸೆಯಂತೆ ಅವಳು ಮೃತಳಾದ ತಕ್ಷಣ ಅವಳ ಕಣ್ಣುಗಳನ್ನು ನನಗೆ ಜೋಡಿಸಿದರು."

"ಹಾಗಾದರೆ.... ಕೇದಾರ, ಪೂರ್ವಿ....?"

"ಕೇದಾರ, ಅಗೋ, ಅಲ್ಲಿ ಕುಳಿತಿದ್ದಾರಲ್ಲಾ ಅವರೇ ನನ್ನ ಪತಿ. ಪೂರ್ವಿ ನನ್ನ ಮಗು," ಕಣ್ಣೊರೆಸಿಕೊಂಡಳು ಮಯೂರಿ.

ಆಕಾಶದಿಂದ ಪಾತಾಳಕ್ಕೆ ಒಮ್ಮೆಲೇ ಎತ್ತಿ ಎಸೆದಂತಾಯಿತು.

ಮನಸ್ಸಿನ ಒತ್ತಡ ತಡೆಯಲಾರದೇ ಮಯೂರಿಯನ್ನು ಕೇಳಿಯೇಬಿಟ್ಟೆ. "ಮಯೂರಿ, ನಿಜಕ್ಕೂ ಕೇದಾರನೊಂದಿಗಿನ ದಾಂಪತ್ಯ ನಿನಗೆ ತೃಪ್ತಿಕೊಟ್ಟಿದೆಯೇ? ಸುಖ ಕೊಟ್ಟಿದೆಯೇ? ನಿನ್ನ ಆಯ್ಕೆಗೆ ನೀನೆಂದೂ ಪಶ್ಚಾತ್ತಾಪ ಪಟ್ಟಿಲ್ಲವೇ? ಪ್ರಾಮಾಣಿಕವಾಗಿ ಹೇಳು."

ನನ್ನ ಪ್ರಶ್ನೆಗೆ ಹಗುರವಾಗಿ ನಕ್ಕುಬಿಟ್ಟಳು ಮಯೂರಿ. ಸುತ್ತಮುತ್ತೆಲ್ಲಾ ಬೆಳದಿಂಗಳು ಹರಡಿದಂತಾಯಿತು.

"ಆಂಟಿ, ನೀವು ಬಹುಶಃ ಹುಟ್ಟಿದಂದಿನಿಂದಲೂ ಯಾವ ಕೊರತೆಯನ್ನೂ ಕಂಡಿರಲಾರಿರಿ. ಆದ್ದರಿಂದಲೇ ಹೀಗೆ ಪ್ರಶ್ನಿಸುತ್ತಿರುವಿರಿ. ಆದರೆ ಇದೀಗ ದೃಷ್ಟಿಯ ಸೌಭಾಗ್ಯವನ್ನು ಪಡೆದಿರುವ ನನಗೆ ನನ್ನ ಕಣ್ಣುಗಳು ದೃಷ್ಟಿಸುವ ವಿಶ್ವದ ಪ್ರತಿಯೊಂದೂ ಅದ್ಭುತ ಮತ್ತು ಅತಿ ಸುಂದರವೆನಿಸುತ್ತಿದೆ. ನನ್ನ ಕೇದಾರ.... ಪೂರ್ವಿ.... ನನ್ನ ಮನೆ.... ಬದುಕು ಎಲ್ಲಾ ಸುಂದರ.... ಅತಿ ಸುಂದರ...." ಸುಖದ ಅಮಲಿನಲ್ಲಿ ತೇಲುತ್ತಿರುವಂತೆ ಮಯೂರಿ ನುಡಿದಾಗ ಅವಳ ಮಾತುಗಳಲ್ಲಡಗಿದ್ದ ಸತ್ಯದ ಅರಿವಾದಂತೆ ನನ್ನ ಪ್ರಶ್ನೆಗೆ ನಾನೇ ನಾಚುವಂತಾಗಿತ್ತು. ಆ ಪುಟ್ಟ ಹುಡುಗಿ ನನಗೆ ಅಂದು ಸತ್ಯದರ್ಶನವನ್ನು ಮಾಡಿಸಿದ್ದಳು.

ಸಂತಸದಿಂದ ಅವಳ ಕೈಗಳನ್ನು ಒತ್ತಿ ನುಡಿದೆ, "ಪ್ರಪಂಚದ ಪ್ರತಿಯೊಂದು ಸೃಷ್ಟಿಯಲ್ಲೂ ಸೌಂದರ್ಯವನ್ನು ಕಾಣುವ ನಿನ್ನ ಬಾಳು ಸದಾ ಹಸಿರಾಗಿರಲಿ." ●

---

ಟಿ.ಪಿ. ಕೈಲಾಸಂ ಮತ್ತು ಸರ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಜೊತೆಗೂಡಿ ಒಂದು ಸಲ ವಿಜ್ಞಾನ ಪ್ರದರ್ಶನವೊಂದಕ್ಕೆ ಹೋಗಿದ್ದರು. ಅಲ್ಲಿ 'ಕಾಪರ್ ಸಲ್ಫೇಟ್'ಅನ್ನು ಕಂಡ ರಾಮಸ್ವಾಮಿಯವರು-- "ಅದು ಹಸಿರು ಬಣ್ಣದ್ದಲ್ಲವೆ?" ಎಂದು ಕೇಳಿದರಂತೆ.

ಅದಕ್ಕೆ ಕೈಲಾಸಂ ಅವರು, "ಹೌದು, ನೀವು ಕೇಳೋದೂ ಸತ್ಯ. ಅದು ಕೂಡ ಒಂದು ಬಗೆಯ ಹಸಿರು. ಅದನ್ನು ಎಲ್ಲರೂ ನೀಲಿ ಎಂದು ಕರೆಯುತ್ತಾರೆ ಅಷ್ಟೇ," ಎಂದರಂತೆ.

● ಸಂಗ್ರಹ: ಶಂಕರಗೌಡ ವೈ. ಪಾಟೀಲ

# ಎಂ. ಹಿದಾಯತ್ ಉಲ್ಲಾ:

## ಒಂದು ನೆನಪು

• ಎಂ.ವಿ. ಕಾಮತ್

ನ್ಯಾಯಮೂರ್ತಿ ಎಂ.ಸಿ. ಛಗಲಾ ಹಾಗೂ ನ್ಯಾಯಮೂರ್ತಿ ಎಂ. ಹಿದಾಯತ್ ಉಲ್ಲಾ ಅವರು ನನಗೆ ಗೊತ್ತಿರುವ ಪ್ರತಿಷ್ಠಿತ ವ್ಯಕ್ತಿಗಳಲ್ಲಿಯೇ ಅತಿ ಪ್ರೀತಿಪಾತ್ರರು ಹಾಗೂ ಗೌರವಾನ್ವಿತರು. ಇವರು ಅಸದೃಶ ನ್ಯಾಯಮೂರ್ತಿಗಳಾಗಿದ್ದಂತೆ ಮುಸಲ್ಮಾನರೂ ಆಗಿದ್ದುದು ಒಂದು ಆಕಸ್ಮಿಕ. ಈ ಮಹನೀಯರಿಬ್ಬರೂ ವಿದ್ವಾಂಸರಾಗಿದ್ದರಲ್ಲದೆ, ವಿನಯಶೀಲರೂ ಶುದ್ಧ ಚರಿತರೂ ಆಗಿದ್ದರು.

ಎಪ್ಪತ್ತರ ದಶಕ. ಆಕಸ್ಮಿಕವಾಗಿಯೇ ಹಿದಾಯತ್ ಉಲ್ಲಾರೊಡನೆ ನನ್ನ ಪರಿಚಯವಾಯಿತು. ಆಗ ನಾನು ವಾಷಿಂಗಟನ್ನಿನಲ್ಲಿ 'ಟೈಮ್ಸ್ ಆಫ್ ಇಂಡಿಯಾ' ಪತ್ರಿಕೆಯ ವರದಿಗಾರನಾಗಿದ್ದೆ. ಈ ನಗರದಲ್ಲಿ ಗುರುತು ಇದ್ದವರೆಲ್ಲ ನನ್ನನ್ನು ಕಾಣುತ್ತಿದ್ದರು. ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯ ಒಡೆತನ ಹೊಂದಿದ ಬೆನ್ನೆಟ್ ಕೊಲ್ಮನ್ ಕಂಪನಿಯ ಡೈರೆಕ್ಟರರೊಬ್ಬರು ತಮ್ಮ ಕೆಲಸಕ್ಕಾಗಿ ವಾಷಿಂಗ್‌ಟನ್ನಿಗೆ ಬಂದಾಗ ದೂರವಾಣಿಯಲ್ಲಿ ನನ್ನನ್ನು ಸಂಪರ್ಕಿಸಿದರು. ಅವರನ್ನು ನಾನು ಭೋಜನಕ್ಕೆ ಆಮಂತ್ರಿಸಿದೆ. "ಆದರೆ, ನನ್ನ ಜತೆ ಮಿತ್ರರೊಬ್ಬರಿದ್ದಾರೆ. ಅವರನ್ನು ನಿಮ್ಮ ಮನೆಗೆ ಕರೆತರಬಹುದೇ?" ಎಂದು ಈ ಡೈರೆಕ್ಟರರು ಕೇಳಿದಾಗ "ದಯಮಾಡಿ ಅವರನ್ನು ಕರೆತನ್ನಿರಿ," ಎಂದು ನಾನು ಉತ್ತರಿಸಿದೆನಲ್ಲದೆ, "ಅವರ ಹೆಸರೇನು?" ಎಂದು ಕೇಳಿದೆ, "ಅವರು ನ್ಯಾಯಮೂರ್ತಿ ಹಿದಾಯತ್ ಉಲ್ಲಾ" ಎಂದು ಡೈರೆಕ್ಟರ್ ಹೇಳಿದರು. ಹಿದಾಯತ್ ಉಲ್ಲಾ ಅವರು ಆಗ ಸುಪ್ರೀಂ ಕೋರ್ಟಿನ ಮುಖ್ಯ ನ್ಯಾಯಮೂರ್ತಿ ಸ್ಥಾನ ಅಲಂಕರಿಸಿದ್ದರು.

### ನಳಪಾಕ

ಮನೆಯಲ್ಲಿ ನಾನು ಒಬ್ಬನೇ ಇದ್ದೆ. ಅಡಿಗೆಯನ್ನು ಸ್ವತಃ ಮಾಡಿಕೊಳ್ಳುತ್ತಿದ್ದೆ. ಚೆನ್ನಾಗಿಯೇ ಅಡಿಗೆ ಮಾಡುತ್ತಿದ್ದೆ. ಸಾಂಬಾರ ಅಥವಾ ರಶಿಯನ್ ಸಲಾಡ್ ಸಲೀಸಾಗಿ ಸಿದ್ಧಪಡಿಸುವಂತೆ ಚಿಕನ್ ಕರಿ ಅಥವಾ ಖೀಮಾ ಕೂಡ ತಯಾರಿಸಬಲ್ಲವನಾಗಿದ್ದೆ. ಆದರೆ ಸುಪ್ರೀಂ ಕೋರ್ಟಿನ ಮುಖ್ಯ ನ್ಯಾಯಮೂರ್ತಿಗಳಂಥವರಿಗೆ ಈ ಮೊದಲು ಆತಿಥ್ಯ ನೀಡಿರಲಿಲ್ಲ, ಅದಕ್ಕಾಗಿ ಅಂಜಿಕೆಯಾಗಿತ್ತು. ಅತಿಥಿಗಳಿಗೆ ಸಾಕಾಗುವಷ್ಟು ತಿಂಡಿಗಾಗಿ, ಸ್ಥಾನಿಕ ಭಾರತೀಯ ಉಪಾಹಾರಗೃಹದಿಂದ ಇಡ್ಲಿ ಮತ್ತು ದಹಿವಡಾ ತರಿಸಿದೆ. ಬೇರೆ ನಾಲ್ಕು ತಿಂಡಿಗಳನ್ನು ನಾನೇ ಮಾಡಿದೆ.

ಈ ಇಬ್ಬರು ಪ್ರತಿಷ್ಠಿತ ಅತಿಥಿಗಳನ್ನು ಆಮಂತ್ರಿಸಿದ ದಿನದಂದೇ, ಮುಂಬಯಿಯ ಸ್ನೇಹಿತರೊಬ್ಬರ ಸಲಹೆಯ ಪ್ರಕಾರ ಉತ್ತರ ಪ್ರದೇಶದ ಇಬ್ಬರು ಮುಸ್ಲಿಂ ಮಹಿಳೆಯರು ನನ್ನನ್ನು ಕಾಣಲು ಬಂದರು. ಅವರನ್ನೂ ಭೋಜನಕ್ಕೆ ಆಮಂತ್ರಿಸಿದೆ. ಇವರೊಂದಿಗೆ ಅಮೆರಿಕೆಯ ಪತ್ರಿಕಾ ಮಿತ್ರ ಹಾಗೂ ಆತನ ಹೆಂಡತಿಯನ್ನೂ ಆಹ್ವಾನಿಸಿದೆ. ಉತ್ತರ ಪ್ರದೇಶದ ಮಹಿಳೆಯರನ್ನು ಮೊದಲೇ ಬರಹೇಳಿದ್ದೆ. ಅವರು ಸುಂದರ ಹಾಗೂ ಸುಶಿಕ್ಷಿತ ಯುವತಿಯರಾಗಿದ್ದರು. ಯಾವುದೇ ಸಮಾರಂಭಕ್ಕೆ ಒಪ್ಪುವಂತಿದ್ದರು. ಡೈರೆಕ್ಟರ್ ಹಾಗೂ ನ್ಯಾಯಮೂರ್ತಿ ಹಿದಾಯತ್ ಉಲ್ಲಾ ಅವರು ಬಂದಾಗ ಉಲ್ಲಾಸಕರವಾಗಿ ಸಮಯ ಕಳೆಯಬಹುದೆಂದು ಭಾವಿಸಿಕೊಂಡಿದ್ದೆ. ಹಾಗೇ ಆಯಿತು.

### ಹರಟೆ

ನನ್ನ ಮನೆಯಲ್ಲಿ ಸುಖಾಸನಗಳುಳ್ಳ ದೊಡ್ಡ

ನಡುಮನೆಯೇ ಇತ್ತು. ಆದರೆ ಎಲ್ಲರೂ ಅನೌಪಚಾರಿಕವಾಗಿ ನೆಲದ ಮೇಲೆಯೇ ಕುಳಿತುಕೊಳ್ಳಲು ನಿರ್ಧರಿಸಿದರು. ಮೊದಲು ಡ್ರಿಂಕ್ಸ್ ಕೊಟ್ಟೆ. ರಾತ್ರಿ ೧೦ರ ಸುಮಾರಿಗೆ ಭೋಜನವಾಯಿತು. ಅತಿಥಿಗಳು ಸಂತೋಷಭರಿತರಾಗಿದ್ದರು. ಹಿದಾಯತ್ ಉಲ್ಲಾ ಮತ್ತು ಮಹಿಳೆಯರು ನನ್ನ ನಳಪಾಕವನ್ನು ಚೆನ್ನಾಗಿ ಹೊಗಳಿದರು. ಮುಖ್ಯ ನ್ಯಾಯಮೂರ್ತಿಗಳೊಬ್ಬರು ಜಮಖಾನೆ ಹಾಸಿದ ನೆಲದ ಮೇಲೆ ಕುಳಿತುಕೊಂಡು, ಎಲ್ಲರಂತೆ ಹರಟೆ ಹೊಡೆಯಬಹುದೆಂದು ನಾನು ನಂಬಿರಲೇ ಇಲ್ಲ.

ಒಂದು ವರ್ಷದ ನಂತರ ಇಲಸ್ಟ್ರೇಟೆಡ್ ವೀಕ್ಲಿಯ ಸಂಪಾದಕತ್ವ ವಹಿಸಿಕೊಳ್ಳಲು ನಾನು ಭಾರತಕ್ಕೆ ಮರಳಿದೆ. ನಾನು ಅಧಿಕಾರವಹಿಸಿಕೊಂಡು ಒಂದು ವರ್ಷ ಕಳೆಯುವಷ್ಟರಲ್ಲಿ ವೀಕ್ಲಿಯ ಶತಮಾನೋತ್ಸವ ಬಂತು. ಅದನ್ನು ಅದ್ದೂರಿಯಾಗಿ ಆಚರಿಸಲು ಆಡಳಿತವರ್ಗವು ನಿರ್ಧರಿಸಿತು. ತಾಜಮಹಲ್ ಹೋಟೆಲ್ಲಿನ ಶತಾಬ್ದಿ ವಿಚಾರಸಂಕಿರಣ ಹಾಗೂ ಭೋಜನಕೂಟ ಏರ್ಪಡಿಸಿದ್ದೆವು. ರಾಷ್ಟ್ರಪತಿ ಸಂಜೀವರೆಡ್ಡಿ ಅವರನ್ನು ಮುಖ್ಯ ಅತಿಥಿಯಾಗಿ ಕರೆಯಬೇಕೆಂದು ನಮ್ಮ ಅಭಿಲಾಷೆಯಾಗಿತ್ತು. ಆದರೆ ಬೇರೆ ಕಾರಣದಿಂದಾಗಿ ಅವರು ನಮಗೆ ದೊರೆಯಲಿಲ್ಲ. ಆಗ ನ್ಯಾ. ಹಿದಾಯತ್ ಉಲ್ಲಾ ಅವರು ಉಪರಾಷ್ಟ್ರಪತಿ ಆಗಿದ್ದರು. ಅವರು ಸುಸಂಸ್ಕೃತರು. ಹಾಸ್ಯಪ್ರಜ್ಞೆ ಉಳ್ಳವರು. ಅವರ ಭಾಷಣವನ್ನು ಬೇರೆಯವರು ಬರೆದುಕೊಡಬೇಕಾಗಿರಲಿಲ್ಲ. ಅವರು ನಮಗೆ ಯೋಗ್ಯ ಮುಖ್ಯ ಅತಿಥಿ ಆಗುತ್ತಾರೆಂದು ಭಾವಿಸಿದೆವು. ತಾಜ್‌ನಲ್ಲಿಯ ಭೋಜನಕೂಟಕ್ಕೆ ಮುಂಬಯಿಯ ಪ್ರತಿಷ್ಠಿತರನ್ನೆಲ್ಲ ಆಮಂತ್ರಿಸಿದ್ದೆವು. ಅದೊಂದು ಅದ್ಭುತ ಸಮಾರಂಭವಾಗುವದೆಂದು ಭಾವಿಸಿಕೊಂಡಂತೆಯೇ ಆಯಿತು. ನ್ಯಾ. ಹಿದಾಯತ್ ಉಲ್ಲಾ ಅವರ ಅತ್ಯಂತ ಪ್ರಭಾವಶಾಲಿ ಭಾಷಣ ಮಾಡಿದರು. ಶ್ರೋತೃಗಳನ್ನು ಮಂತ್ರಮುಗ್ಧಗೊಳಿಸಿದರು. ಸಂಪಾದಕನಾದ ನನಗೆ ಆಭಾರ ಮನ್ನಿಸುವ ಕೆಲಸ ವಹಿಸಿಕೊಡಲಾಗಿತ್ತು.

### ಭೋಜನ ಕೂಟ

"ಹಿದಾಯತ್ ಉಲ್ಲಾ ಅವರಿಗೆ ಎರಡನೆಯ



ಭೋಜನ ಕೂಟದ ಆತಿಥ್ಯ ನೀಡಲು ನನಗೆ ಬಹಳ ಸಂತೋಷವಾಗುತ್ತಿದೆ. ಮೊದಲನೆಯ ದನ್ನು ವಾಷಿಂಗ್ಟನ್ನಿನಲ್ಲಿಯ ನನ್ನ ಮನೆಯಲ್ಲಿ ನೀಡಿದ್ದೆ. ಅಲ್ಲಿ ನಾನೇ ಅಡಿಗೆಯವನಾಗಿದ್ದೆ. ಒಂದು ದಿನ 'ಇಲಸ್ಟ್ರೇಟೆಡ್ ವೀಕ್ಲಿ'ಯ ಸಂಪಾದಕನಾಗುತ್ತೇನೆ, ಹಿದಾಯತ್ ಉಲ್ಲಾ ಅವರು ಉಪರಾಷ್ಟ್ರಪತಿ ಆಗುತ್ತಾರೆ. ಅವರಿಗೆ ಮತ್ತೆ ಆತಿಥ್ಯ ನೀಡುವ ಅವಕಾಶ ಬರುತ್ತದೆಂದು ಆಗ ನಿರೀಕ್ಷಿಸಿರಲಿಲ್ಲ. ಈ ಸಲ ಅಡಿಗೆಯನ್ನು ನಾನು ಮಾಡಿಲ್ಲ. ತಾಜ್‌ದವರು ಮಾಡಿದ್ದಾರೆಂಬುದೊಂದೇ ನನ್ನ ವ್ಯಸನ" ಎಂದು ನಾನು ಹೇಳಿದಾಗ ಹಿದಾಯತ್ ಉಲ್ಲಾ ಗಹಗಹಿಸಿ ನಕ್ಕರು. ಸಭಿಕರೂ ನಕ್ಕರು. ನಾನು ಕೆಳಗೆ ಕೂತನಂತರ ಹಿದಾಯತ್ ಉಲ್ಲಾ ತಮ್ಮ ಬಳಿ ಬರಲು ಸನ್ನೆ ಮಾಡಿದರು. ಅವರ ಬಳಿ ನಾನು ಹೋದಾಗ ಗಟ್ಟಿಯಾಗಿಯೇ ಹಿದಾಯತ್ ಉಲ್ಲಾ ಮಾತನಾಡಿ, "ಆ ಪ್ರಸಂಗವನ್ನು ಏಕೆ ಜ್ಞಾಪಿಸಿಕೊಟ್ಟಿರಿ? ಅಲ್ಲಿ ಕಂಪನಿಯೂ ಚನ್ನಾಗಿತ್ತು. ಊಟವೂ ಚನ್ನಾಗಿತ್ತು" ಎಂದರು. "ನಿಮಗೆ ಆಶ್ಚರ್ಯವನ್ನುಂಟು ಮಾಡಲು ಬಯಸಿದ್ದೆ" ಎಂದೆ. ಶತಮಾನೋತ್ಸವದ ಹೊತ್ತಿಗೆ ನಾನು ವೀಕ್ಲಿಯ ಸಂಪಾದಕನಾಗಿರುತ್ತೇನೆ, ಹಾಗೂ ಹಿದಾಯತ್ ಉಲ್ಲಾ ಉಪರಾಷ್ಟ್ರಪತಿ ಆಗಿರುತ್ತಾರೆಂಬುದು ಯಾರಿಗೆ ಗೊತ್ತಿತ್ತು? ನಾವು ಮೆಲ್ಲಗೆ ಮಾತನಾಡಿದರೂ ಧ್ವನಿವರ್ಧಕಗಳಿಂದ ಎಲ್ಲರಿಗೂ ಕೇಳಿಸಿತು. ಶ್ರೋತೃಗಳೂ ನಮ್ಮ ಸಂಭಾಷಣೆಯನ್ನು ಕೇಳಿ ಸಂತೋಷಪಟ್ಟರು. ದಿಲ್ಲಿಗೆ ಮರಳಿದ ನಂತರ ಹಿದಾಯತ್ ಉಲ್ಲಾ ತಮ್ಮ ನೆನಪಿನ ಪುಸ್ತಕ 'ಮೈ ಓನ್ ಬಾಸ್ವೆಲ್'ದ ಪ್ರತಿಯನ್ನು ನನಗೆ ಕಳಿಸಿಕೊಟ್ಟರು. "ಎಂ.ವಿ. ಕಾಮತರಿಗೆ, ಶುಭಾಶಯಗಳೊಂದಿಗೆ" ಎಂದು ಮೇಲ್ಗಡೆ ಬರೆಯಲಾಗಿತ್ತು.

ನಿವೃತ್ತರಾದ ನಂತರ ಅವರು ಮುಂಬಯಿಯಲ್ಲಿ ನೆಲೆಸಿದರು. ಆಗಾಗ್ಗೆ ನನ್ನನ್ನು ಕರೆಯುತ್ತಿದ್ದರು. ಚೌಪಾಟಿ ಎದುರು ಅವರ ವಿಶಾಲ ಮನೆ ಇತ್ತು. ಗ್ರಂಥಾಲಯವಿತ್ತು. ಕಥೆ ಹೇಳುವುದರಲ್ಲಿ ನಿಪುಣರು. ಅವರನ್ನು ಭೆಟ್ಟಿಯಾಗುವುದೇ ಒಂದು ಸಂತೋಷ. ದುರಭಿಮಾನವು ಅವರಿಗಿರಲಿಲ್ಲ. ಅವರನ್ನು ಪೀಡಿಸುತ್ತಿದ್ದೆ. ಸಂತೋಷದಿಂದಲೇ ಪ್ರತಿಕ್ರಿಯಿಸುತ್ತಿದ್ದರು.

ಮುಂಬಯಿಯ ಮಾಜಿ ಮುಖ್ಯಮಂತ್ರಿ ಬಾಳಾಸಾಹೇಬ್ ಖೇರ್ (ಬಿ.ಜಿ.ಖೇರ್) ಅವರ ಚರಿತ್ರೆಯನ್ನು ನಾನು ಬರೆದೆ. ಭಾರತೀಯ ವಿದ್ಯಾ ಭವನವು ಅದನ್ನು ಪ್ರಕಟಿಸಿತು. ಅದರ ಬಿಡುಗಡೆ ಸಮಾರಂಭದ ಅಧ್ಯಕ್ಷತೆಯನ್ನು ಹಿದಾಯತ್ ಉಲ್ಲಾ ನೆರವೇರಿಸಿದರು. ಶಂಕರ ದಯಾಳ ಶರ್ಮಾ ಮುಖ್ಯ ಅತಿಥಿಯಾಗಿದ್ದರು. ನನ್ನನ್ನು ಅವರು ಬಹಳ ಹೊಗಳಿದರು. ಆಗ ನಾನು ಸೇವೆಯಿಂದ ನಿವೃತ್ತನಾಗಿದ್ದೆ.

ಶಿರಡಿ ಸಾಯಿ ಬಾಬಾ ಕುರಿತ ಗ್ರಂಥಕ್ಕೆ ನಾನು ಸಹ ಲೇಖಕನಾಗಿದ್ದೆ. ಹಿದಾಯತ್ ಉಲ್ಲಾರಿಂದ ಅದಕ್ಕೊಂದು ಮುನ್ನುಡಿ ಬರೆಯಿಸಬೇಕೆಂದೆನಿಸಿತು. ಅವರು ಒಪ್ಪುತ್ತಾರೋ ಇಲ್ಲವೋ ಎಂಬ ಅನುಮಾನವಿತ್ತು. ಆದರೆ ಅವರು ಮುನ್ನುಡಿ ಬರೆದುಕೊಟ್ಟರು. ಒಬ್ಬ ಸಂತನ ಕುರಿತಾದ ಈ ಗ್ರಂಥಕ್ಕೆ ಮುನ್ನುಡಿ ಬರೆಯಲು ತಮಗೆ ಸಂತೋಷವೆನಿಸುವುದಾಗಿ ತಿಳಿಸಿದ್ದರು. ನನ್ನನ್ನು ಅವರು ಬಹಳ ಗೌರವಿಸಿದ್ದಾರೆಂದೆನಿಸಿತು.

## ಹಿಂದೂ ಸಂಪ್ರದಾಯ

ನ್ಯಾ. ಹಿದಾಯತ್ ಉಲ್ಲಾ ಅವರ ಪೂರ್ವಜರು ವಾರಾಣಸಿಯವರು. ಹಿಂದೂ ಸಂಪ್ರದಾಯ ಹಾಗೂ ರೂಢಿಗಳನ್ನೇ ಅವರು ಪಾಲಿಸುತ್ತಿದ್ದರು. ಅವರು ಗೋಮಾಂಸ ತಿನ್ನುತ್ತಿರಲಿಲ್ಲ. ದೀಪಾವಳಿ ಮತ್ತಿತರ ಹಿಂದೂ ಹಬ್ಬಗಳನ್ನು ಆಚರಿಸುತ್ತಿದ್ದರು. "ಸಾಂಪ್ರದಾಯಿಕ ಮುಸ್ಲಿಮರು ನಮ್ಮನ್ನು ದುರುಗುಟ್ಟಿ ನೋಡುತ್ತಾರೆ" ಎಂದು ಅವರು ನನಗೊಮ್ಮೆ ಹೇಳಿದ್ದರು. ತಮ್ಮ ಪುಸ್ತಕದಲ್ಲಿ ಅದನ್ನು ಬರೆದಿದ್ದಾರೆ. "ಸಾಂಪ್ರದಾಯಿಕ ಗುರು ನನ್ನನ್ನು ಅವಿಶ್ವಾಸಿಯೆನ್ನುತ್ತಾರೆ ಮತ್ತು ಅವಿಶ್ವಾಸಿಯು ನಾನು ಮುಸ್ಲಿಂ ಎಂದು ಭಾವಿಸುತ್ತಾನೆ" ಎಂಬ ಮಹಮ್ಮದ ಇಕ್ಬಾಲರ ಪದ್ಯವನ್ನು ಅವರು ಉಲ್ಲೇಖಿಸುತ್ತಿದ್ದರು. ಅವರು ಮೃತರಾದಾಗ ದಫನ್ ಮಾಡಲಿಲ್ಲ, ಅಗ್ನಿಸಂಸ್ಕಾರಗೊಳಿಸಲಾಯಿತು ಎಂಬುದು ನನ್ನ ನೆನಪಿನಲ್ಲಿದೆ. ಈ ಉದಾತ್ತ ಜೀವಿಗೆ ಶ್ರದ್ಧಾಂಜಲಿ ಸಲ್ಲಿಸಲು ಅವರ ಮನೆಗೆ ಕೊನೆಯ ಸಲ ಭೆಟ್ಟಿ ಕೊಟ್ಟಿದ್ದೆ. ●

ಒಂದು ಪ್ರತಿಕ್ರಿಯೆ

# ಇತಿಹಾಸಕಾರರಿಂದ ವಿಕೃತಗೊಂಡಿತೆ??

• ಮಹೇಶ ಪ್ರಹ್ಲಾದರಾವ್ ಕುಲಕರ್ಣಿ

೧೯೯೫ರ ಜೂನ್ 'ಕಸ್ತೂರಿ'ಯಲ್ಲಿ ಮುದ್ರಿತವಾದ "ಸಂಚು" ಕಾದಂಬರಿ (ಪುಸ್ತಕ ವಿಭಾಗ) ತುಂಬಾ ವಿಚಾರ ಪ್ರಚೋದಕವಾಗಿದೆ. ಮಹಾಭಾರತದಲ್ಲಿ ಬರುವ ಪಾತ್ರಗಳನ್ನು ಅಲೌಕಿಕ ದೃಷ್ಟಿಯಿಂದ ವೀಕ್ಷಿಸುವ ಭಾರತೀಯರಿಗೆ "ಸಂಚು" ಕಾದಂಬರಿ ಸ್ವಲ್ಪ ಇರಿಸುಮುರಿಸು ಉಂಟು. ಮಾಡಬಹುದು. ಶ್ರೀಕೃಷ್ಣನನ್ನು ರಾಜಕಾರಣಿ'ಯಂತೆ ಚಿತ್ರಿಸಿದ ರೀತಿಯಂತೂ ತುಂಬಾ ಅದ್ಭುತವಾಗಿದೆ. "ಸಂಚು"ನಲ್ಲಿ ಒಳಗೊಂಡಿರದ ಕೆಲವು ವಿಷಯಗಳೂ ಮಹಾಭಾರತದ ಕುರಿತು ಸಂಶಯ ತಾಳುವಂತೆ ಮಾಡುತ್ತವೆ.

ಮೊದಲನೆಯದಾಗಿ ತಂದೆಯಿಂದ ಗುರುತಿಸಲ್ಪಡುವ (ಬೀಜ ಪ್ರಧಾನ) ಭಾರತೀಯ ಸಮಾಜದಲ್ಲಿ ಐವರು ಕುಂತಿ ಪುತ್ರರನ್ನು ಪಾಂಡವರೆಂದು ಚಿತ್ರಿಸಿದ್ದೇ ಒಂದು ರೀತಿಯ ವಿಡಂಬನೆಯಂತೆ ತೋರುತ್ತದೆ! ಈಗಿನಂತೆ ವೀರ್ಯ ಬ್ಯಾಂಕ್ ಇದ್ದು ಪತಿಯ ಒಪ್ಪಿಗೆಯಿದ್ದು ಪತ್ನಿಯು ಪರಪುರುಷನ ವೀರ್ಯದಿಂದ ಬಸಿರಾದರೆ ಅದು ಕಾನೂನು ಬದ್ಧವಾದರೂ ಆ ಪುರುಷನ ಹೆಸರನ್ನು ಮಾತ್ರ ಗುಪ್ತವಾಗಿಡಲಾಗುತ್ತದೆ. ಇಲ್ಲಿ ಕಾಮತೃಷೆಗಿಂತ ಪ್ರಜೋತ್ಪತ್ತಿ ಪ್ರಮುಖ ಪಾತ್ರವಹಿಸುತ್ತದೆ. ಈಗಿನಂತೆ ವೀರ್ಯಬ್ಯಾಂಕ್‌ನ ಅನುಕೂಲವಿಲ್ಲದ ಮಹಾಭಾರತ ಕಾಲದಲ್ಲಿ ಪಾಂಡುರಾಜ ಮತ್ತು ಕುಂತಿಯರು ಒಬ್ಬನೇ ಒಬ್ಬ ವ್ಯಕ್ತಿಯನ್ನು ಅವಲಂಬಿಸಬೇಕಾಗಿತ್ತು. ಆದರೆ ಹಾಗಾಗಲಿಲ್ಲ.

ಕರ್ಣನ ಹುಟ್ಟಿನ ಕುರಿತು ಚಿಂತಿಸಿದಾಗ ಇಲ್ಲಿ ಎಡಬಿಡಂಗಿತನವನ್ನು ಪ್ರದರ್ಶಿಸಿದ್ದಾಗಿ ಕಾಣುತ್ತದೆ. ಯಾವ ರಾಜಸಭೆಯಲ್ಲಿ ತನ್ನ ಅತ್ತೆಯ ಅತ್ತೆಯಾದ ಸತ್ಯವತಿಯು ರಾಜವಂಶವನ್ನು ಬೆಳೆಸಲು ತಾನು ಈ ಹಿಂದೆ ಪರಾಶರರಿಂದ ಪಡೆದ ಪುತ್ರನ (ವ್ಯಾಸ) ಕುರಿತು ಸ್ಪಷ್ಟವಾಗಿ ಹೇಳುತ್ತಾಳೋ ಅದೇ ಸಭೆಯಲ್ಲಿ ಇನ್ನೂ ಪ್ರಗತಿಪರವಾದ ಕಾಲದಲ್ಲಿ ಕುಂತಿ ಕರ್ಣನ ಹುಟ್ಟಿನ ಕುರಿತು ಹೇಳದಿದ್ದುದು ಯಾತಕ್ಕೆ ? ಅವಾಂಛಿತವಾದ ಸನ್ನಿವೇಶವೇ ಕರ್ಣನ ಜನನಕ್ಕೆ ಕಾರಣವಾಗಿರಬಹುದು. ಆ ಕಾರಣದಿಂದಲೇ ಅವಳು ಕರ್ಣನ ಹುಟ್ಟಿನ ಕುರಿತು ಯಾವ ಸಂದರ್ಭದಲ್ಲೂ (ಕರ್ಣ ಸಾಯುವ ಮುನ್ನ) ಐವರು ಪುತ್ರರೆದುರು ಹೇಳಲಿಲ್ಲ.

ದ್ರೌಪದಿಯನ್ನು ಐದೂ ಪುತ್ರರಿಗೆ ಹಂಚಿಕೊಳ್ಳಲು ಹೇಳಿದ್ದು ಕುಂತಿಯ "ಮಾತ್ಸರ್ಯ"ವನ್ನು ಸೂಚಿಸುತ್ತದೆ. ಸ್ವತಃ ಐವರು ಪರಪುರುಷರಿಂದ ಸ್ಪರ್ಶಿಸಲ್ಪಟ್ಟ ಕುಂತಿ ಭವಿಷ್ಯದಲ್ಲಿ ತಾನು ದ್ರೌಪದಿಯಿಂದ ತಾತ್ಸಾರಕ್ಕೊಳಪಡದೇ ಇರಲು ಅವಳನ್ನು ಐದು ಜನರೊಡನೆ ಇರುವಂತೆ ಮಾಡಿರಬಹುದು. ದ್ರೌಪದಿಯನ್ನು ಗೆದ್ದ ಅರ್ಜುನನಿಗೆ ಮಾತ್ರ ಅವಳನ್ನು ಮೀಸಲಿರುವಂತೆ ಮಾಡಿ ಉಳಿದ ಪುತ್ರರಿಗೂ ಬೇರೆ ಬೇರೆ ಕನ್ಯೆಯರನ್ನು ತಂದು ಮದುವೆ ಮಾಡಬಹುದಿತ್ತು. ಆದರೆ ಸೊಸೆಯನ್ನು ತನಗಿಂತ ಶ್ರೇಷ್ಠ ವೆನಿಸದಂತೆ ಮಾಡುವುದು ಹಾಗೂ ಬೇರೆ ಬೇರೆಯವರಿಂದ ಜನಿಸಿದ ಪುತ್ರರು ಸಾಮರಸ್ಯದಿಂದಿರಲು ಒಂದು ಬಂಧನದಲ್ಲಿ ಕಟ್ಟಿ ಹಾಕುವುದು ಇವು ಕುಂತಿಯ ತಂತ್ರಗಳಾಗಿರಬಹುದು.

ಯುಧಿಷ್ಠಿರನು ಸತ್ಯಸಂಧನೆಂದು ವಿವರಿಸುವ ಧರ್ಮನ ಆರಾಧಕರು ಇದೇ ಯುಧಿಷ್ಠಿರ ಅಜ್ಞಾತವಾಸದಲ್ಲಿ ಸುಳ್ಳು ಹೇಳಿದ್ದನ್ನು ನೆನಪಿಡುವುದೇ ಇಲ್ಲ. ಆಪತ್ಕಾಲದಲ್ಲಿ ಸುಳ್ಳನ್ನು ಹೇಳುವುದು ಪ್ರತಿಯೊಬ್ಬ ಜೀವಿಯ ಮೂಲಗುಣ. ಮೂಲದಲ್ಲಿ ವ್ಯಾಸರಿಂದ ರಚಿತವಾದ ಮಹಾಭಾರತದಲ್ಲಿ ವಂಶವನ್ನು ಬೆಳೆಸುವಲ್ಲಿ ಸ್ವತಃ ವ್ಯಾಸರೇ ಪಾಲ್ಗೊಳ್ಳುತ್ತಾರೆ. ವ್ಯಾಸರಿಗೆ ಕುರುಡನಾಗಿ ಜನಿಸಿದ ಧೃತರಾಷ್ಟ್ರನಿಗಿಂತ ಪಾಂಡುವಿನ ಮೇಲೆ ಹೆಚ್ಚಿನ ಪ್ರೇಮ ಹುಟ್ಟಿರಬಹುದು.

ಒಟ್ಟಾರೆ ಮಹಾಭಾರತದಲ್ಲಿ ಕೊನೆಗೆ ಜಯಗಳಿಸಿದ ಕೌಂತೇಯರಿಗೆ ಹೆಚ್ಚಿನ ಪ್ರಾಶಸ್ತ್ಯ ಸಿಗಲು ಕಾರಣ- "ಜನರು ಗೆದ್ದೆತ್ತಿನ ಬಾಲ ಹಿಡಿಯುತ್ತಾರೆ" ಎನ್ನುವುದು. ನಮ್ಮ ನಿನ್ನೆ ಮೊನ್ನೆಯ ಇತಿಹಾಸವೇ ಎಷ್ಟೋ ಅನ್ಯಾಯ ಮಾಡಿದ ರಾಜರನ್ನು ಉತ್ತಮೋತ್ತಮರೆಂದು ಚಿತ್ರಿಸುತ್ತದೆ. ರಾಜಾಶ್ರಯದಲ್ಲಿ ಇತಿಹಾಸದ ಸೃಷ್ಟಿಯಾದಾಗ ಇಂತಹ ಕಾರ್ಯಕ್ರಮಗಳು "ದೈವೀ ಕೃಪೆ" ಎಂಬ ರೀತಿಯಲ್ಲಿ ಚಿತ್ರಿತವಾಗುತ್ತವೆ. ಮಹಾಭಾರತದ ಇತಿಹಾಸ ಸಹ ದೈವೀ ಕೃಪೆಯ ಹೆಸರಿನಲ್ಲಿ ವಿಕೃತಗೊಂಡಿರಬಾರದೇಕೆ?

●



ಈ ಆಸ್ಪತ್ರೆ ಹಾಗೂ ಅದರ ವ್ಯವಸ್ಥೆಯ ಕುರಿತು ಇನ್ನಷ್ಟು ಅಧ್ಯಯನ ನಡೆದರೆ ನಮ್ಮ ವೈದ್ಯ ಲೋಕಕ್ಕೆ ಉಪಕಾರವಾಗಬಹುದು....

ಸುಮಾರು ೯೩೫ ವರ್ಷಗಳ ಹಿಂದಿನ ಮಾತು.

ಅಷ್ಟು ಹಿಂದಿನ ಕಾಲದಲ್ಲೂ, ಸುಸಜ್ಜಿತ, ಪೂರ್ಣಪ್ರಮಾಣದ ಆಸ್ಪತ್ರೆಯೊಂದು ಅಸ್ತಿತ್ವದಲ್ಲಿತ್ತೆಂಬುದು ಆಶ್ಚರ್ಯವುಂಟು ಮಾಡಬಹುದು. ಆದರೆ "ಇದಕ್ಕೆ ನಾವೇ ಪುರಾವೆ," ಎನ್ನುತ್ತವೆ ತಮಿಳುನಾಡಿನ ಚಿಂಗಲ್‌ಪೇಟೆ ಜಿಲ್ಲೆಯ ತಿರುಮಕೂಡಲಿನಲ್ಲಿ ದೊರೆತ ಶಾಸನಗಳು. ಮೂರು ನದಿಗಳ ಸಂಗಮದ ಚಿಕ್ಕ ಹಳ್ಳಿ ಈ ತಿರುಮಕೂಡಲು (ಹೆಸರನ್ನು ಗಮನಿಸಿ: ತಿರುಮಕೂಡಲು ಅಂದರೆ ತ್ರಿವೇಣಿ ಸಂಗಮ.)

ಚೋಳರ ಅರಸ ವೀರರಾಜೇಂದ್ರನ ಆಳ್ವಿಕೆಯಲ್ಲಿ ಇಂತಹದೊಂದು ಆಸ್ಪತ್ರೆ ಇದ್ದಿತೆಂದು ಈ ಹಳ್ಳಿಯ ವಿಷ್ಣು ದೇವಾಲಯದ ಪೂರ್ವ ದಿಕ್ಕಿನ ಒಳಾಂಗಣದ ಗೋಡೆಯ ಮೇಲಿನ ತಮಿಳು ಶಿಲಾಲೇಖ ತಿಳಿಸುತ್ತದೆ. ೧೫ ಹಾಸಿಗೆಗಳ ಆ ಆಸ್ಪತ್ರೆಯಲ್ಲಿ ದಾದಿಯರೂ ವೈದ್ಯರೂ ಶಸ್ತ್ರವೈದ್ಯರು ಮತ್ತು ಕಂಪೌಂಡರ್‌ಗಳೂ ಇದ್ದರಂತೆ.

# ಸಾವಿರ ವರ್ಷಗಳ ಹಿಂದಿನ ಒಂದು ಆಸ್ಪತ್ರೆಯ ಕಥೆ

• ನಿವೇದಿತಾ ದೇಸಾಯಿ

(ಆಧಾರ: 'ಟೈಮ್ಸ್ ಆಫ್ ಇಂಡಿಯಾ'ದಲ್ಲಿ ಪ್ರಕಟವಾದ ಎ. ಆರ್. ಮಣಿಯವರ ಲೇಖನ)



ಈ ವಿಷ್ಣು ದೇವಾಲಯ ಪಲಾರ್ ಹಾಗೂ ಅದರ ಉಪನದಿಗಳಾದ ವೇಗವತಿ ಮತ್ತು ಚೆಯ್ಯಾರ್‌ಗಳ ಸಂಧಿ ಸ್ಥಳದ ದಡದಲ್ಲಿದೆ.

ಕ್ರಿಸ್ತಶಕ ೧೦೬೯ರ ಕಾಲದ ಈ ಶಾಸನಗಳು, ಆಸ್ಪತ್ರೆಯಲ್ಲಿದ್ದ ಔಷಧ ಸಂಗ್ರಹಾಗಾರ, ಸಿಬ್ಬಂದಿ ವರ್ಗದವರ ಸಂಬಳ, ವಿವಿಧ ರೋಗಗಳ ಆರೈಕೆ ಇವೇ ಮುಂತಾದ ವಿಷಯಗಳನ್ನೆಲ್ಲ ಸವಿಸ್ತಾರವಾಗಿ

ದಾಖಲಿಸಿವೆ.

ಈ ಆಸ್ಪತ್ರೆಗೂ ವಿಷ್ಣು ದೇವಾಲಯಕ್ಕೂ ಸಂಬಂಧವೇನು?

ತಮಿಳುನಾಡು ಸರಕಾರದ ದೇವಾಲಯ ಸೇವಾ ಇಲಾಖೆಯ ನಿರ್ದೇಶಕ ಟಿ. ಸತ್ಯಮೂರ್ತಿ ಇದಕ್ಕೆ ಉತ್ತರ ಹೇಳುತ್ತಾರೆ: "ರೋಗ ಶಮನ ಮಾಡುವವನು ದೇವರೆಂಬ ನಂಬಿಕೆ ನಮ್ಮಲ್ಲಿ ಬಲವಾಗಿ ಬೇರೂರಿದೆಯಲ್ಲವೆ? ಅಂದ ಮೇಲೆ ದೇವಸಾನ್ನಿಧ್ಯದಲ್ಲೇ ಆಸ್ಪತ್ರೆ ತೆರದಿರಬೇಕು."

ಆಸ್ಪತ್ರೆಯ ಕಟ್ಟಡದ ಅವಶೇಷಗಳು ದೇವಸ್ಥಾನದ ಆವರಣದಲ್ಲಿರುವುದನ್ನು ಈಗಲೂ ಕಾಣಬಹುದು. ಆಸ್ಪತ್ರೆಯ ಪರಿಸರ ನೈಸರ್ಗಿಕ ಹಿನ್ನೆಲೆಯೊಂದಿಗೆ ಅದೆಷ್ಟು ಚೆನ್ನಾಗಿ ಸೇರಿಕೊಂಡಿದೆಯೆಂದರೆ ಆಗಿನ ಜನ ನಿಸರ್ಗಚಿಕಿತ್ಸೆಗೆ ತುಂಬ ಮಹತ್ವ ನೀಡುತ್ತಿದ್ದರೆಂಬುದು ಗೊತ್ತಾಗುತ್ತದೆ.

ಅದೇ ಕಟ್ಟಡದಲ್ಲಿ ವೇದ ಪಾಠಶಾಲೆ ಹಾಗೂ ವಸತಿ ಗೃಹಗಳು ಕೂಡ ಇದ್ದವೆಂದು ಈ ಶಿಲಾ ಶಾಸನಗಳು ಸಾರುತ್ತವೆ.

ಮುಖ್ಯವಾಗಿ, ಒಂಬತ್ತನೇ ಶತಮಾನದಲ್ಲಿ ಅಂದರೆ ಪಲ್ಲವರು ಆಳುತ್ತಿದ್ದ ಕಾಲದಲ್ಲಿಯೇ ಈ ವಿಷ್ಣು ಮಂದಿರ ಅಸ್ತಿತ್ವದಲ್ಲಿತ್ತೆನ್ನಲಾಗಿದೆ. ಆದರೆ, ಅದರೊಡನೆ ಆಗ ಆಸ್ಪತ್ರೆ ಇತ್ತೋ ಇಲ್ಲವೋ ಎಂಬುದು ಸ್ಪಷ್ಟವಾಗಿಲ್ಲ.

ಸುಮಾರು ಎಂಭತ್ತು ವರ್ಷಗಳ ಹಿಂದೆ, ಶಿಲಾ ಶಾಸನ ತಜ್ಞ ಕೆ.ವಿ. ಸುಬ್ರಮಣ್ಯಂ ಅಯ್ಯರ್ ಈ ಶಾಸನಗಳನ್ನು ಹುಡುಕಿ ತೆಗೆದರು. ವೇದ ಪಾಠಶಾಲೆ, ಗುಡಿ ಹಾಗೂ ಆಸ್ಪತ್ರೆಗಳ ಸಂಬಂಧದ ಖರ್ಚು-ವೆಚ್ಚ ನಿಭಾಯಿಸಲು ಬೇಕಾದ ವ್ಯವಸ್ಥೆಯನ್ನು ಅಂದಿನ ಅರಸನೇ ಏರ್ಪಾಟು ಮಾಡಿದ ಬಗ್ಗೆ ಶಾಸನಗಳು ದಾಖಲಿಸಿವೆ.

ವಿದ್ಯಾಲಯದ ಗುರುಗಳಿಗೆ ಸ್ವಲ್ಪ ಭತ್ತ ಹಾಗೂ ಬಂಗಾರದ ನಾಣ್ಯಗಳನ್ನು ಸಂಭಾವನೆಯಾಗಿ ಕೊಡಲಾಗುತ್ತಿತ್ತು. ವಸತಿ ಗೃಹದಲ್ಲಿ ನಿತ್ಯ ಸುಮಾರು ೬೦ ಜನರಿಗೆ ಊಟ ಹಾಕಲಾಗುತ್ತಿತ್ತು.



ತಿರುಮಕೂಡಲಿನ ವಿಷ್ಣು ದೇವಾಲಯ

ಸ್ವಾರಸ್ಯವೆಂದರೆ ವಸತಿಗೃಹದಲ್ಲಿದ್ದವರು ತಾವು ಮಲಗಿಕೊಳ್ಳುವ ಚಾಪೆ; ದೀಪಕ್ಕೆ ಹಾಗೂ ೫೧ ಶನಿವಾರ ಸ್ನಾನ ಮಾಡಲು ಬೇಕಾಗುವ ತೈಲದ ವೆಚ್ಚಗಳನ್ನು ಭರಿಸಬೇಕಾಗುತ್ತಿತ್ತು. ಶನಿವಾರದಂದು ಗಂಡು ಮಕ್ಕಳು ಎಣ್ಣೆ ಸ್ನಾನ ಮಾಡುವ ಪದ್ಧತಿ ತಮಿಳು ನಾಡಿನ ಬ್ರಾಹ್ಮಣರಲ್ಲಿ ಈಗಲೂ ರೂಢಿಯಲ್ಲಿದೆ.

ವಸತಿ ಗೃಹದಲ್ಲಿನ ವಿದ್ಯಾರ್ಥಿಗಳು, ಪ್ರಾಧ್ಯಾಪಕರು ಹಾಗೂ ಗುಡಿಯಲ್ಲಿ ಸೇವೆ ಸಲ್ಲಿಸುತ್ತಿದ್ದವರಿಗಾಗಿಯೇ ಈ ಆಸ್ಪತ್ರೆ ಇದ್ದಿತೆಂದು ತೋರುತ್ತದೆ. ವೈದ್ಯನೊಬ್ಬ ಈ ಆಸ್ಪತ್ರೆಯ ಮುಖ್ಯಸ್ಥನಾಗಿದ್ದ. ಇದಲ್ಲದೆ ಒಬ್ಬ ಶಸ್ತ್ರಚಿಕಿತ್ಸಕ, ಔಷಧಿಯ ಗಿಡಮೂಲಿಕೆಗಳನ್ನು ಸರಬರಾಜು ಮಾಡುವ ಇಬ್ಬರು ಸಹಾಯಕರು (ಈಗಿನ ವೈದ್ಯಕೀಯ ಕಂಪನಿಗಳ ಪ್ರತಿನಿಧಿಗಳೆನ್ನಬಹುದು.) ಹಾಗೂ ಇಬ್ಬರು ದಾದಿಯರೂ ಇದ್ದರು.

ಆಗಿನ ಶಸ್ತ್ರ ಚಿಕಿತ್ಸಕರು ಯಾವ ರೀತಿಯ ಚಿಕಿತ್ಸೆ ನೀಡುತ್ತಿದ್ದರೆಂಬ ಬಗ್ಗೆ ಶಾಸನದಲ್ಲಿ ಏನೂ ಸುಳಿವಿಲ್ಲ. (ಆದರೆ, ಕ್ಷೌರಿಕನೇ ಚಿಕ್ಕ ಪ್ರಮಾಣದ ಶಸ್ತ್ರಕ್ರಿಯೆಗಳನ್ನು ನೆರವೇರಿಸುತ್ತಿದ್ದನು. ಇಂದಿಗೂ ತಮಿಳುನಾಡಿನ ಕೆಲ ಗ್ರಾಮೀಣ ಪ್ರದೇಶಗಳಲ್ಲಿ ಕ್ಷೌರಿಕ ವಿವಿಧ ಬಗೆಯ ಚಿಕ್ಕಪುಟ್ಟ ಚಿಕಿತ್ಸೆ ಮಾಡುವುದು ಸ್ವಾರಸ್ಯಕರವೆನಿಸುತ್ತದೆ.) ಆಸ್ಪತ್ರೆಗಳ ಕೆಲಸಗಾರರಿಗೆ, ಅವರ ಪ್ರಾಮುಖ್ಯ ಹಾಗೂ ಕೆಲಸಕ್ಕೆ ಅನುಗುಣವಾಗಿ ಭತ್ತ ಹಾಗೂ ಚಿನ್ನದ ನಾಣ್ಯಗಳನ್ನು ನೀಡಲಾಗುತ್ತಿತ್ತು.

ಆಸ್ಪತ್ರೆಯಲ್ಲಿ ಲಭ್ಯವಿದ್ದ ಔಷಧಿಗಳ ಪಟ್ಟಿಯನ್ನು ಶಾಸನಗಳಲ್ಲಿ ಕಾಣಬಹುದು. ಅವುಗಳಲ್ಲಿ, ಜ್ಞಾಪಕಶಕ್ತಿ ಹೆಚ್ಚಿಸಲು, ಬುದ್ಧಿಮತ್ತೆಯನ್ನು ಚುರುಕುಗೊಳಿಸಲು, ಆಯಾಸ ಪರಿಹಾರ, ಬಲ ಮತ್ತು ದೀರ್ಘಾಯುಷ್ಯಕ್ಕಾಗಿ ಔಷಧಿಗಳಿದ್ದವು. ಅದರಂತೆ ಇತರ ರೋಗಗಳಾದ ಕಾಮಾಲೆ, ರಕ್ತಹೆಪ್ಪುಗಟ್ಟುವಿಕೆ, ಶ್ವಾಸಕೋಶದ ಅವ್ಯವಸ್ಥೆ ಫಿಸ್ತುಲಾ ಹಾಗೂ ಮೂಲವ್ಯಾಧಿ ಮುಂತಾದವುಗಳನ್ನೂ ಗುಣಪಡಿಸುವ ಔಷಧಿಗಳು ಅಲ್ಲಿ ಲಭ್ಯವಿದ್ದವು.

ಈ ಶಾಸನಗಳ ಕೂಲಂಕಷ ಅಧ್ಯಯನ ನಡೆದರೆ ಬಹುಶಃ ಚಿಕಿತ್ಸಾ ಕ್ರಮ ಔಷಧಿಗಳ ಪ್ರಯೋಗಗಳ ಬಗ್ಗೆ ಇನ್ನಷ್ಟು ವಿವರಗಳು ದೊರೆತು ಸಾಮಾನ್ಯರಿಗೂ ವೈದ್ಯ ಸಮುದಾಯಕ್ಕೂ ಹೆಚ್ಚು ಪ್ರಯೋಜನವಾಗಬಹುದು.

## ಜಗತ್ತಿನ ಅತಿ ಪುಟ್ಟ ಟೈಪ್ ರೈಟರ್

**ಜೇ**ಬಿನಲ್ಲಿಟ್ಟುಕೊಳ್ಳಬಹುದಾದ ಟೈಪ್‌ರೈಟರನ್ನು ನೋಡಿದ್ದೀರಾ? ನೋಡಿರಲು ಸಾಧ್ಯವೇ ಇಲ್ಲ. ಯಾಕೆಂದರೆ ಸದ್ಯ ಬಹುಶಃ ಇಡಿ ಜಗತ್ತಿನಲ್ಲಿ ಇರುವುದು ಅಂಥ ಒಂದೇ ಒಂದು ಟೈಪ್‌ರೈಟರ್: ಮದ್ರಾಸಿನ ರಿಜರ್ವ್ ಬ್ಯಾಂಕ್ ಆಫ್ ಇಂಡಿಯಾ ಉದ್ಯೋಗಿ ರಾಜಗೋಪಾಲ ರಾಮಕೃಷ್ಣನ್ (೪೮) ಬಳಿ ಇದೆ. ಆತನೆ ಈ ಪುಟ್ಟ ಯಂತ್ರದ ಜನಕ-ಮಾಲಿಕ. ಸದಾ ಹೊಸತೇನಾದರೊಂದನ್ನು ಮಾಡುತ್ತಲೇ ಇರುವ ತವಕ ಈ ವ್ಯಕ್ತಿಗೆ. ಜಗತ್ತಿನ ಏಕಮೇವ ಪುಟ್ಟ ಟೈಪ್‌ರೈಟರನ್ನು ಆತ ತಯಾರಿಸಲು ಖರ್ಚು ಮಾಡಿದ್ದೆಷ್ಟು ಗೊತ್ತೆ? ಕೇವಲ ೧೫೫ ರೂಪಾಯಿಗಳು!

ಸದ್ಯ ಬಳಕೆಯಲ್ಲಿರುವ ಯಾವ ಟೈಪ್‌ರೈಟರೂ ರಾಮಕೃಷ್ಣನ್‌ಗೆ ಸಮಾಧಾನ ತಂದಿಲ್ಲವಾದ್ದರಿಂದ ಕಳೆದ ಒಂದು ದಶಕದ ಅವಧಿಯಲ್ಲಿ ಆತ 'ಅನುಕೂಲಕರ'ವಾದ ಹಾಗೂ ಪೆನ್ನು-ಪೆನ್ಸಿಲ್‌ಗಳಂತೆ ಬೇಕಾದಲ್ಲಿ ಹೊತ್ತೊಯ್ಯಬಹುದಾದ ಪುಟ್ಟ ಟೈಪ್‌ರೈಟರನ್ನು ತಯಾರಿಸಲು ಯೋಚಿಸತೊಡಗಿದ. ಉಳಿದೆಲ್ಲ ಟೈಪ್‌ರೈಟರಿನಂತೆಯೇ ಇಲ್ಲಿಯೂ ಎರಡೂ ಕೈಗಳ ಎಂಟು ಬೆರಳುಗಳನ್ನೇ ಉಪಯೋಗಿಸಲಾಗುತ್ತದೆ. ಆದರೆ ಇಲ್ಲಿರುವ ಅಂತರವೆಂದರೆ ಇರುವುವು ಎಂಟೇ ಥಿಂಬಲ್‌ಗಳು (ಅಕ್ಷರ ಕಡ್ಡಿ ಎನ್ನೋಣವೆ?) ಪ್ರತಿಯೊಂದರಲ್ಲಿ ನಾಲ್ಕು ಸಾಲ್ಕು ಅಕ್ಷರಗಳು, ಅಂಕಿಗಳು ಮತ್ತು ಪೂರ್ಣ ವಿರಾಮ ಇತ್ಯಾದಿ ಚಿಹ್ನೆಗಳು.

ಗೆಳೆಯರು "ಯಾಕಿಂಥ ಹುಚ್ಚು ಹವ್ಯಾಸ? ಬಿಟ್ಟು ಬಿಡು," ಎಂದು ಹಂಗಿಸಿ ಚೇಷ್ಟೆ ಮಾಡಿದರೂ ಲೆಕ್ಕಿಸದೇ ತನ್ನ ಗುರಿಸಾಧನೆಯತ್ತ ಎಡೆಬಿಡದೇ ನಡೆದ ರಾಜಗೋಪಾಲ್ ರಾಮಕೃಷ್ಣನ್ ಈಗ 'ದಾಖಲೆ ಪುರುಷ.'

•

# ಅತ್ತರ್

## ಯೋಗಿಗೂ ಬೇಕು, ಭೋಗಿಗೂ ಬೇಕು..

• ವಿಶಾಖದತ್ತ



ಚಾಂದನಿ ಚೌಕ್!

ಗೊತ್ತಿದ್ದವರಿಗೆಲ್ಲ ಮನ ಅರಳಿಸುವ ಹೆಸರು.

ಗೊತ್ತಿಲ್ಲದವರಿಗೆ?

ಅಂಥವರೇನಾದರೂ ಅಕಸ್ಮಾತ್ತಾಗಿ ಅದರ ಬಳಿ ಸುಳಿದಾಡಿದರೋ ಖಂಡಿತ ಅವರ ಮೂಗರಳಿಸುವ ಜಾಗ. ಕೇವಲ ಮೂಗರಳಿಸುವುದಷ್ಟೇ ಅಲ್ಲ, ಅಗೋಚರವಾದ ಕೈಯೊಂದು ತಮ್ಮ ಮೂಗನ್ನು ಹಿಡಿದು ತನ್ನೆಡೆಗೆ ಎಳೆದೊಯ್ಯುತ್ತಿದೆಯೇನೋ ಎಂಬ ಅನಿಸಿಕೆ ಉಂಟಾಗುವುದಂತೂ ದಿಟ. ಬಟ್ಟೆ-ಬರೆಗಳ, ಇನ್ನಿತರ ಶೃಂಗಾರ ವಸ್ತುಗಳ, ಸಿಹಿ ತಿಂಡಿ-ತಿನಿಸುಗಳ ಪುಟ್ಟ ಅಂಗಡಿಗಳನ್ನು ಎಡಬಲಕ್ಕೆ ನೋಡುತ್ತ ಸಂದಿಗಳಲ್ಲಿ ಸುತ್ತಿ ನೀವು ಬಂದು ನಿಲ್ಲುವುದು ಗುಲಾಬ್‌ಸಿಂಗ್ ಜೋಹ್ರಿಮಲ್ ಅಂಗಡಿಯೆದುರು. ಸಿಲ್ಕ್ ಬಟ್ಟೆಯ ಕುರ್ತಾ-ಪೈಜಾಮಗಳ ರಸಿಕರು ಕೆಲವರು ಅಲ್ಲಿದ್ದಾರೆ. ಒಬ್ಬ ಜೇಬಿನಿಂದ ರೂಪಾಯಿ ನಾಣ್ಯವೊಂದನ್ನು ತೆಗೆದು ಹೆಬ್ಬೆರಳಿಂದ ಒಮ್ಮೆ ಚಿಮ್ಮಿ ಅಂಗೈ ಅಗಲಿಸಿ ಹಿಡಿದು, ಮುಷ್ಟಿಯಲ್ಲಿ ಮುಚ್ಚಿ ಟಪ್ಪೆಂದು ಅಂಗಡಿಯವನ ಗಲ್ಲೆ ಪೆಟ್ಟಿಗೆಗೆ ಕುಕ್ಕುತ್ತಾನೆ. ಅಂಗಡಿ

ಯಾತ "ಏನು ಬೇಕು?" ಎಂದು ಕೇಳುವುದೂ ಇಲ್ಲ, "ಇಂಥದು ಬೇಕು" ಎಂದು ಈತ ಹೇಳುವುದೂ ಇಲ್ಲ, ಅದಾಗಲೇ ಗಲ್ಲೆಯಾತನ ಹಿಂದಿರುವ ಹುಡುಗ ಹಲ್ಲು ಕಿರಿದು ಕಡ್ಡಿಯೊಂದಕ್ಕೆ ಒಂದಷ್ಟು ಅರಳೆ ಸುತ್ತಿ, ಹಳೆಯ ಮಾದರಿಯ ಅಪರೂಪದ ಬಾಟಲೊಂದರ ಬೂಚು ತೆಗೆದು, ಸ್ವಲಾಗಿ ಅರಳೆಯದ್ದಿ, ಕಡ್ಡಿ ಸಹಿತ ಕೈ ಮುಂದೆ ಚಾಚುತ್ತಾನೆ. ರಸಿಕ ಸಂತೃಪ್ತನಾಗಿ ಆ ಕಡ್ಡಿಯ ತುದಿಯ ಹತ್ತಿಯನ್ನು ನಾಜೂಕಾಗಿ ಕಿತ್ತುಕೊಂಡು, ಅದನ್ನು ಎರಡು ಭಾಗ ಮಾಡಿ ಕಿವಿಗಳಲ್ಲಿರಿಸಿ, "ಫಿರ್ ಆತಾ ಹೂಂ ಭಾಯ್," ಎನ್ನುತ್ತ ಗಾಡಿ ಬಿಡುತ್ತಾನೆ. ಯಾವುದೋ ಗುಂಗಿನಲ್ಲಿ ಸಾಗಿರುವ ಆತನನ್ನೇ ಕೆಕ್ಕರಿಸಿ ನೋಡುತ್ತ, ಗಲ್ಲೆಯಾತ ಒಳಗೊಳಗೇ ಗೊಣಗಿಕೊಳ್ಳುತ್ತಾನೆ..... "ಥತ್ತೇರಿಕಿ.... ಏ ಏಕ್ ರೂಪಯ್ಯಾ ಕಾ ಬೇಪಾರ್ ಸೆ ಕ್ಯಾ ಹೋಗಾ?" ಆದರೆ ಹಾಗೆಂದು ಆತ ಆ ಒಂದು ರೂಪಾಯಿಯ ಗಿರಾಕಿಯನ್ನು ಬಿಟ್ಟುಕೊಡಲಾರ. ಪ್ರಕಟವಾಗಿ ಅವನೆದುರು ಹಾಗೆಂದಿಗೂ ಹೇಳಲಾರ. ಯಾಕೆಂದರೆ, ಇಂಥ ರಸಿಕರೇ ಆತನ ನಿತ್ಯದ ಗಿರಾಕಿಗಳು.

ಅತ್ತರಿನ ಅಂಗಡಿಗಳವರ ಪಾಡು ಹೇಳತೀರದ್ದು. ದೀಪಾವಳಿ-ದಶಹರ-ಯುಗಾದಿಯಂಥ ಸಂದರ್ಭಗಳಲ್ಲಿ ಹಿಂದುಗಳು, ತಮ್ಮ ಹಬ್ಬಗಳ ದಿನಗಳಲ್ಲಿ ಮುಸ್ಲಿಂ ಬಾಂಧವರು ಈ ಅಂಗಡಿಗಳೆದುರು ಸಾಲುಗಟ್ಟುತ್ತಾರೆ. ಆಗಲೂ 'ಕಡ್ಡಿ ತುದಿಯ ಅರಳೆ'ಯ ವ್ಯಾಪಾರವೇ ನಡೆಯುತ್ತದಾದ್ದರಿಂದ ಗಲ್ಲೆ ತುಂಬುವುದು ಅಷ್ಟಕ್ಕಷ್ಟೆ. ಐವತ್ತರಾಚೆಯವರಿಗೆ ಈ ಅಂಗಡಿಗಳಲ್ಲಿ ಇನ್ನೂ ಆಕರ್ಷಣೆ ಉಳಿದಿದೆ. ಮೊನ್ನೆ ಮೊನ್ನೆ ಹುಟ್ಟಿದವರಿಗೆ ಅತ್ತರಿನ ಕಂಪು ಅಪರಿಚಿತ. ಇದಕ್ಕೂ ತುಟ್ಟಿಯಾದ ವಿದೇಶಿ ಸುಗಂಧ ದ್ರವ್ಯಗಳೆಂದರೆ ಅವರಿಗೆ ಅಚ್ಚುಮೆಚ್ಚು. ಬೇಕೆಂದಾಗ ಗುಂಡಿಯೊತ್ತಿದರಾಯಿತು. ಸುಗಂಧದ್ರವ್ಯ ತಂತಾನೇ ಚಿಮ್ಮಿ ಬರುತ್ತದಲ್ಲ!

ಮತ್ತು ಸುತ್ತುವ ಚಾಂದನಿ ಚೌಕಿನ ಗಮ್ಮತ್ತೇ ಗಮ್ಮತ್ತು. ಈ ಅತ್ತರಿನ ಅಂಗಡಿಗಳಂತೂ ಇನ್ನೂ ಆ ದರ್ಬಾರಿನ ದಿನಗಳ ಠೀವಿಯನ್ನೇ ಉಳಿಸಿಕೊಳ್ಳಲು ಹೆಣಗುತ್ತಿವೆ. ತಲೆಮಾರುಗಳಿಂದ ನಡೆಸಿಕೊಂಡು ಬಂದ ವ್ಯಾಪಾರ ಇದು. ತಮ್ಮ ಅಂಗಡಿಯ ಪ್ರಾಚೀನತೆ, ಯಾವ ಯಾವ ಬಾದ್ಶಹನಿಗೆ, ಸುಲ್ತಾನನಿಗೆ, ರಾಜನಿಗೆ, ಸಾಮಂತನಿಗೆ ಬ್ರಿಟಿಶ್ ಅಧಿಕಾರಿಗೆ, (ಸ್ವಾತಂತ್ರ್ಯಾನಂತರ) ಮಂತ್ರಿ ಮಹೋದಯರಿಗೆ ತಮ್ಮ ಮನೆತನದ ಯಾರು ಯಾರು ಎಂಥೆಂಥ ಅತ್ತರನ್ನು ಎಷ್ಟೆಷ್ಟು ಸಲ ಕೊಟ್ಟರು; ಯಾರ್‍ಯಾರಿಂದ ಯಾವ್ಯಾವ ಖಿಲ್ಲತ್ತು, ಪದಕ, ಇನಾಮು ಪಡೆದರು ಎಂದು ಹೇಳಿಕೊಳ್ಳುವುದರಲ್ಲಿಯೇ ಅವರಿಗೆ ತೃಪ್ತಿ. ಇಷ್ಟೆಲ್ಲ ಹೇಳಿ, ಸಾಧ್ಯವಿದ್ದರೆ ತಮ್ಮ ಹಿರಿಯರ ಫೋಟೋ



ತೋರಿಸಿ, ತಾನು ಅಂಥವರ ಮೊಮ್ಮಗನೋ-ಮರಿಮಗನೋ ಎಂದು ಬಿಂಬಿಸಲು ಯತ್ನಿಸಿ, ಕೊನೆಗೆ ನೀವು ಕೊಡುವ ಐದೋ ಹತ್ತೋ ರೂಪಾಯಿಗೆ ತಕ್ಕ ಅತ್ತರನ್ನು ಕೊಟ್ಟು "ಮತ್ತೆ ಬನ್ನಿ" ಎಂದು ಹೇಳಲು ಮರೆಯುವುದಿಲ್ಲ.

ಗಾಂಧಿ ಕೃಷ್ಣ ಮೋಹನ್‌ಸಿಂಗ್‌ನ ಅಂಗಡಿ ಈಗಿರುವ ಜಾಗಕ್ಕೆ ಬಂದು ನಲವತ್ತು ವರ್ಷಗಳಾಯಿತು. ೧೮೧೬ ರಷ್ಟು ಹಿಂದೆಯೇ ಅತ್ತರಿನ



ವ್ಯಾಪಾರವನ್ನು ಅಪ್ಪಿಕೊಂಡ ಮನೆತನ ಆತನದು. ಆತನ ತಾತನ ತಾತ ಗುಲಾಬ್‌ಚಂದ್ ಗಾಂಧಿ ಪ್ರಾರಂಭಿಸಿದ ಅಂಗಡಿ ದಾರಿಬಾದಲ್ಲಿತ್ತು. ದಟ್ಟಣೆಯ ಮಾರುಕಟ್ಟೆಯ ಪ್ರದೇಶದಲ್ಲಿದ್ದುದರಿಂದ ಹೆಂಗಸರೂ-ಗಂಡಸರೂ ಅತ್ತರು ಕೊಳ್ಳಲು ಗುಲಾಬ್‌ಚಂದ್ ಗಾಂಧಿಯ ಅಂಗಡಿಗೆ ಮುಗಿಬೀಳುತ್ತಿದ್ದರು. ವ್ಯಾಪಾರ ವೃದ್ಧಿಸಿತು. ಅಂಗಡಿಗಳು ಒಂದಿದ್ದುದು ಎರಡಾಗಿ ನಾಲ್ಕಾದವು. ಕೃಷ್ಣ ಮೋಹನ್‌ನ ತಾತ ಲಾಲಾ ಬನಾರಸಿದಾಸ್ ಗಾಂಧಿ ಬಲು ಚತುರ. ಅತ್ತರನ್ನು ಬಾಟಲಿಗಳಲ್ಲಿ ತುಂಬಿ ಮಾರುವ ಪದ್ಧತಿ ಶುರುಮಾಡಿದ್ದು ಆತನೆ. ಆದರೆ ಅದನ್ನು ಸಮಕಾಲೀನ ವ್ಯಾಪಾರಿಗಳು ವಿರೋಧಿಸಿದರಾದರೂ ಈತ ಕಿವಿಗೊಡಲಿಲ್ಲ. ಅತ್ತರು ಬಾಟಲಿಗಳು ಜನಪ್ರಿಯವಾಗತೊಡಗಿದವು. ಈಗಲೂ ಗಾಂಧಿ ಕೃಷ್ಣಮೋಹನ್ ಸಿಂಗ್‌ನ ಅಂಗಡಿಯ ಅತ್ತರಿನ ಬಾಟಲಿಗೆ ಅಂದಿನ ಮನ್ನಣೆ ಇದೆ. ಬಾಟಲು ಕೊಳ್ಳಲಾರದವರಿಗೆಂದು 'ಕಡ್ಡಿ ತುದಿಯ ಅರಳೆ'ಯ ವ್ಯಾಪಾರವನ್ನೂ ಮುಂದುವರಿಸಿದ್ದಾನೆ ಕೃಷ್ಣ ಮೋಹನ್.

"ಸುಗಂಧ ದ್ರವ್ಯಗಳಲ್ಲೂ ಈಗ ನಕಲಿ ವ್ಯವಹಾರ ಜೋರು ಪಡೆದಿದೆ. ಜನಕ್ಕೆ ಬೆಲೆ ಕಡಿಮೆ ಎಂದರಾಯಿತು. ಅಸಲಿ-ನಕಲಿಗಳ ವಿಷಯವನ್ನೇ ಮರೆತುಬಿಡುತ್ತಾರೆ. ಆದರೆ ಅಸಲಿ ಅಸಲಿಯೇ; ನಕಲಿ ನಕಲಿಯೇ. ನಾವು ಅಸಲಿತನವನ್ನು ಉಳಿಸಿಕೊಂಡು ಬರಲು ಹೆಣಗುವಂಥವರು. ಸ್ವತಃ ಅತ್ತರು ತಯಾರಿಕೆ ಗೊತ್ತಿಲ್ಲದಿದ್ದರೂ ನಮ್ಮ ತಯಾರಿಕಾಗಾರಗಳಲ್ಲಿ ಅತ್ತರು ತಯಾರಿಸುವವರಿಗೆ ನಿರ್ದಿಷ್ಟ ಸೂಚನೆ-ನಿರ್ದೇಶನಗಳನ್ನು ನೀಡುತ್ತೇವೆ," ಎನ್ನುತ್ತಾರೆ ಕೃಷ್ಣಮೋಹನ್

ಬೇರೆ ಬೇರೆ ಬಗೆಯ ಅತ್ತರುಗಳಿವೆ. ಎಲ್ಲಕ್ಕೂ ಮೂಲವಸ್ತುವಾಗಿ ಶ್ರೀಗಂಧದ ಎಣ್ಣೆ ಬೇಕೇ ಬೇಕು. ಲವಂಗದೆಣ್ಣೆ ಸೇರಿಸಿಯೂ ಅತ್ತರು ತಯಾರಿಸುವ ವಿಧಾನವೊಂದಿದೆ. ಈ ಎರಡರ ಪೈಕಿ ಒಂದರೊಂದಿಗೆ ನಾನಾ ರೀತಿಯ ಹೂವುಗಳು, ಕೇದಿಗೆ ಮುಂತಾದವುಗಳನ್ನು ಭಟ್ಟಿ ಇಳಿಸುತ್ತಾರೆ. ಉದಾಹರಣೆಗೆ ಗುಲಾಬಿ ಅತ್ತರ್ ತಯಾರಿಸಲು ಶ್ರೀಗಂಧದ ಎಣ್ಣೆ ಮತ್ತು ಭಟ್ಟಿಯಿಳಿಸಿದ ತಾಜಾ ಗುಲಾಬಿಯ ಪಕಳೆಗಳು ಬೇಕು.







ಎಷ್ಟೊಂದು ಬಗೆಯ ಬಾಟಲುಗಳು!

ಅತ್ತರ್ ತಯಾರಿಕೆ ಅತಿ ಸರಳವೆಂದು ಕಂಡು ಬಂದರೂ ಅದಕ್ಕೆ ಅತ್ಯಂತ ನಿಷ್ಕೃಷ್ಟವಾದ ಸಿದ್ಧತೆ ಬೇಕಾಗುತ್ತದೆ. ತಾಜಾ ಹೂವುಗಳನ್ನು ನೀರಿನೊಂದಿಗೆ ಪಾತ್ರೆಯೊಂದರಲ್ಲಿರಿಸಿ, ಆ ಪಾತ್ರೆಯನ್ನು ನೀರು ತುಂಬಿದ ಇನ್ನೊಂದು ದೊಡ್ಡ ಪಾತ್ರೆಯಲ್ಲಿಡಲಾಗುತ್ತದೆ. 'ಕಾಲ್ಸಾ' ಎಂದು ಕರೆಯಲ್ಪಡುವ ಇನ್ನೊಂದು ಪಾತ್ರೆಗೂ ಇದಕ್ಕೂ ನಿರ್ವಾತ ಕೊಳವೆಯೊಂದರಿಂದ ಸಂಪರ್ಕ ಕಲ್ಪಿಸಿರುತ್ತಾರೆ. ಈ 'ಕಾಲ್ಸಾ'ದಲ್ಲಿ ಮೂಲ ವಸ್ತುಗಳಿಂದ ಎಣ್ಣೆಗಳನ್ನು ಕಾಯಿಸಿ ಆರಿಸಲಾಗಿರುತ್ತದೆ. 'ಕಾಲ್ಸಾ' ತಣ್ಣೀರಲ್ಲೇ ಇರುವಂತೆ ನೋಡಿಕೊಳ್ಳಬೇಕಾದ್ದು ಅತ್ಯವಶ್ಯ. ಪುಷ್ಪಪಾತ್ರೆಯ ನೀರನ್ನು ಕಾಯಿಸಲಾಗುತ್ತದೆ. ಕ್ರಮೇಣ ಆ ತಾಜಾ ಹೂಗಳ ಸುವಾಸನೆ ಹಾಗೂ ನೀರುಗಳೆರಡೂ ಆವಿಯಾಗತೊಡಗುತ್ತವೆ. ಆ ಕೊಳವೆಯ ಮೂಲಕ ಈ ಆವಿ 'ಕಾಲ್ಸಾ'ವನ್ನು ಪ್ರವೇಶಿಸುತ್ತದೆ. ಸುವಾಸನೆಯುಕ್ತ ಆವಿ ಅಲ್ಲಿ ತಂಪಿನ ಸಂಪರ್ಕದಿಂದ ನೀರಾಗಿ ಅಲ್ಲಿರುವ ಶ್ರೀಗಂಧ ಇಲ್ಲವೆ ಲವಂಗದೆಣ್ಣೆಯೊಂದಿಗೆ ಮಿಳಿತಗೊಳ್ಳುತ್ತದೆ. ಇಲ್ಲಿಗೆ ಅತ್ತರ್ ತಯಾರಿಕೆಯ ಪ್ರಮುಖ ಹಂತ ಮುಗಿಯುತ್ತದೆ. ತಾಜಾ ಹೂವುಗಳನ್ನು ಮಾತ್ರ ಅತ್ತರ್ ತಯಾರಿಕೆಗೆ ಬಳಸುವುದಕ್ಕೆ ಕಾರಣವೆಂದರೆ ಅವು ಸುಲಭವಾಗಿ ಆವಿಯಾಗುತ್ತವೆ. ಬಾಡುತ್ತಲಿರುವ ಹೂವು ಹಾಗಾಗುವುದಿಲ್ಲ. ಈ ಕಾರಣದಿಂದಲೇ ಆಯಾ ಹೂವು ಬೆಳೆಯುವ ತೋಟದ ಹತ್ತಿರವೇ ಅತ್ತರ್ ತಯಾರಿಕಾ ಘಟಕವಿರುತ್ತದೆ. ಅರುಣ ಕಿರಣ ಬೀರುವ ಹೊತ್ತಿಗಾಗಲೇ ಅರಳಿದ ಪುಷ್ಪಗಳು ಅದಾಗಲೇ ಅತ್ತರ್ ತಯಾರಿಕಾಗಾರಗಳಲ್ಲಿ ಆವಿಯಾಗುವುದಕ್ಕೆ ಸಿದ್ಧವಾಗಿರುತ್ತವೆ.

ಸಾಮಾನ್ಯವಾಗಿ ಉಳಿದ ಅತ್ತರು ತಯಾರಕರಂತೆ ಕೃಷ್ಣ ಮೋಹನ್ ಅವರೂ ಹೂವುಗಳು ಹೆಚ್ಚಾಗಿ ಬೆಳೆಯುವ ಪ್ರದೇಶಗಳಲ್ಲಿ ಅತ್ತರು ತಯಾ

ರಿಸಾ ಘಟಕಗಳನ್ನು ಪ್ರಾರಂಭಿಸಿದ್ದಾರೆ. ಅಲಿಗಢದ ಬಳಿಯ ಸಿಕಾತ್ರಾದಲ್ಲಿ 'ಗುಲಾಬ್,' ಒರಿಸ್ಸಾದ ಗಂಜಾಂನಲ್ಲಿ 'ಕೇವ್ಡಾ' (ಕೇದಿಗೆ), ಉತ್ತರ ಪ್ರದೇಶ-ಬಿಹಾರಗಳ ಗಡಿಯಲ್ಲಿರುವ ಸಿಕಂದರಪುರದಲ್ಲಿ 'ಚಮೇಲಿ' (ಮಲ್ಲಿಗೆ) ಹೀಗೆ ಬೇರೆ ಬೇರೆ ಕಡೆ ಘಟಕಗಳಿದ್ದು ಅಲ್ಲಿಂದಲೇ ಬಾಟಲು ತುಂಬಿ ದಿಲ್ಲಿಗೆ ಕಳಿಸಲಾಗುತ್ತದೆ.

ಗುಣಮಟ್ಟದ ದೃಷ್ಟಿಯಿಂದ ಭಾರತೀಯ ಅತ್ತರಿಗೆ ಎಲ್ಲೆಲ್ಲೂ ಸಮಸಮ ನಿಲ್ಲಲಾಗದ ಫ್ರೆಂಚ್ ಸುಗಂಧ ದ್ರವ್ಯಗಳೇ ಈಗ ಭರಾಟೆಯಿಂದ ಮಾರಾಟವಾಗುತ್ತಿವೆ. ಇದಕ್ಕೇನು ಕಾರಣ? ಅವುಗಳ ಅಂದಚೆಂದದ ಪ್ಯಾಕಿಂಗ್. ನಾನಾ ವಿನ್ಯಾಸದ ಬಾಟಲಿಗಳು. ಜನ ಅಂದ ಚೆಂದದ ಮೇಲ್ನೋಟಕ್ಕೆ ಮರುಳಾಗುತ್ತಾರೆಂಬುದನ್ನು ಇನ್ನೂ ನಮ್ಮ ಅತ್ತರ್ ತಯಾರಕರು ಯಾಕೆ ಅರಿತಿಲ್ಲವೋ? ಆದರೆ ಕೃಷ್ಣ ಮೋಹನ್ ಗಾಂಧಿ ಈಗ ಒಂದು ಹೆಜ್ಜೆ ಮುಂದೆ ಹೋಗಿದ್ದಾರೆ. ಅತ್ಯಾಕರ್ಷಕವಾದ, ಕಟ್ಟಿಗೆ ಹಾಗೂ ಕಲ್ಲಿನಲ್ಲಿ ಕೆತ್ತಲ್ಪಟ್ಟ ಪುಟ್ಟ ಪೆಟ್ಟಿಗೆಗಳಲ್ಲಿ ಎರಡು, ಮೂರು, ನಾಲ್ಕು ಮತ್ತು ಆರು ಬಾಟಲಿಗಳ ಸೆಟ್ಟನ್ನಿಟ್ಟು ಮಾರುವ ಉಪಕ್ರಮವನ್ನಾರಂಭಿಸಿದ್ದಾರೆ.

"ನಮ್ಮ ಅತ್ತರ್ ತುಟ್ಟಿಯೆ. ವಿದೇಶೀ ಸುಗಂಧ ದ್ರವ್ಯಗಳಲ್ಲಿ ಮದ್ಯಸಾರದ ಪ್ರಮಾಣ ಶೇಕಡಾ ೮೦ ರಿಂದ ೯೦ರಷ್ಟು. ಇನ್ನುಳಿದ ೧೦ ರಿಂದ ೨೦ ರಷ್ಟು ಮಾತ್ರ ಸುಗಂಧವಿರುತ್ತದೆ" ಕೃಷ್ಣಮೋಹನ್ ಹೇಳುತ್ತಾರೆ.

ತಮ್ಮ ಅಂಗಡಿಯಿಂದ ಪತಿಯಾಳಾ, ದರ್ಭಾಂಗಾಗಳ ಮಹಾರಾಜರುಗಳಿಗೆ ಅತ್ತರಿನ ಸರಬರಾಜಾಗುತ್ತಿತ್ತೆಂದು ನೆನೆದುಕೊಳ್ಳುವ ಅವರು "ಇಂದಿಗೂ ವಿದೇಶೀ ಗಣ್ಯರು ಬಂದರೆ ನಾವು ಅವರಿಳಿದುಕೊಂಡಲ್ಲಿಯೇ ಹೋಗಿ ನಮ್ಮ ಅತ್ತರಿನ ಮಾಸಲೆ ತೋರಿಸುತ್ತೇವೆ. ಡಾ. ರಾಧಾಕೃಷ್ಣನರು ರಾಷ್ಟ್ರಪತಿಯಾಗಿದ್ದಾಗ ನೈಜೀರಿಯದ ಪ್ರಧಾನಿ ಭಾರತಕ್ಕೆ ಭೇಟಿ ಇತ್ತರು. ನಾನು ಇದೇ ಪೆಟ್ಟಿಗೆಯಲ್ಲಿ ವಿವಿಧ ಅತ್ತರುಗಳನ್ನು ಜತೆಗೊಯ್ದು ಅವರಿಗೆ ಅರ್ಪಿಸಿದೆ," ಎಂದು ದಂತವನ್ನು ಅಳವಡಿಸಿರುವ ಪುಟ್ಟದಾದ ಹಳೆಯ ಪೆಟ್ಟಿಗೆಯನ್ನು ತೋರಿಸುತ್ತಾರೆ. ಅದು ಅವರ ತಾತನ ಕಾಲದ್ದು.

ವಿದೇಶೀ ಸೇಂಟ್‌ಗಳ ಮಹಾಪೂರದಿಂದಾಗಿ ಅತ್ತರು ಮಾರುವವರೆಲ್ಲ ಜತೆಜತೆಗೇ ಊದುಬತ್ತಿ, ಸುಗಂಧಿತ ಸಾಬೂನುಗಳು ಹಾಗೂ ಕೃತಕ ಸುಗಂಧ ದ್ರವ್ಯಗಳನ್ನು ಮಾರಬೇಕಾಗಿ ಬಂದಿದೆ. ಇವೆಲ್ಲ ರಾಸಾಯನಿಕ ಅಂಶಗಳನ್ನುಳ್ಳಂಥವು.

## ಚಿಕಿತ್ಸೆಗೂ ಅತ್ತರ್!

ಸುಗಂಧ ದ್ರವ್ಯ ಚಿಕಿತ್ಸೆಯಲ್ಲಿ ಅತ್ತರನ್ನೇ ವಿವಿಧ ರೋಗಗಳಿಗೆ ಔಷಧಿಯನ್ನಾಗಿ ಬಳಸುವ ವೈದ್ಯರಿದ್ದಾರೆ. 'ಮೋತಿಯಾ ಅತ್ತರ್'ನ ಒಂದು ಅಥವಾ ಎರಡು ಹನಿಯನ್ನು ಹಾಕುವುದರಿಂದ ಕಿವಿ ನೋವು, ಕಿವಿಯಲ್ಲಿನ ರಕ್ತಸ್ರಾವ ಹಾಗೂ ಸೋರುವಿಕೆ ನಿಲ್ಲುತ್ತದೆ. 'ಗುಲಾಬ್ ಅತ್ತರ್' ಬಂಗಾಲಿ ಸಿಹಿತಿಂಡಿಗಳಲ್ಲಿ ಬಳಸಲ್ಪಡುತ್ತದೆ. ಹೃದಯಕ್ಕೆ ಇದು ಒಳ್ಳೆಯದಂತೆ. ಧ್ಯಾನಕ್ಕೆ ಸಹಾಯಕವೂ ಆಗುತ್ತದಂತೆ. 'ಖುಶ್ ಅತ್ತರ್' ನೀಡುವ ತಂಪು ಅನುಭವದಿಂದಾಗಿ ರಕ್ತದ ಒತ್ತಡ ನಿಯಂತ್ರಣದಲ್ಲಿರುವುದಲ್ಲದೆ ಉಷ್ಣಾಘಾತದಿಂದ ನಮ್ಮನ್ನು ಇದು ಬಚಾವು ಮಾಡುತ್ತದೆ. 'ಕೇವ್ಡಾ ಅತ್ತರ್' ಅನ್ನು ಸ್ವಲ್ಪ ಮೂಸುವುದರಿಂದಲೇ ಬಿಸಿಲಿನಿಂದಾಗಿ ಉಂಟಾಗುವ ತಲೆಶೂಲೆ ಮಾಯವಾಗುತ್ತದೆ. 'ಚಮೇಲಿ ಅತ್ತರ್' ಚರ್ಮವ್ಯಾಧಿಗಳನ್ನು ಗುಣಪಡಿಸುವಲ್ಲಿ ನೆರವಿಗೆ ಬಂದರೆ 'ಕೇವ್ಡಾ ಜಲ್' ಮೂತ್ರ ನಾಳಗಳ ಏರುಪೇರನ್ನು ನಿವಾರಿಸುತ್ತದೆ.

ಅತ್ತರ್ ದೇವರಿಗೂ ಬೇಕು, ಮನುಷ್ಯರಿಗೂ ಬೇಕು. ಪೂಜಾಸಂದರ್ಭಗಳಲ್ಲಿ ಸಂಗಂಧದ್ರವ್ಯ ಪೂಸುವುದು ಷೋಡಷೋಪಚಾರಗಳಲ್ಲಿ ಒಂದು.

ಯೋಗಿಗಳಿಗೆ ಕೂಡ ಅತ್ತರ್ ಅವಶ್ಯ. ಕಠಿಣವಾದ ಪ್ರಾಣಾಯಾಮ ಯೋಗಾಸನ ಮಾಡುವಾಗ ಉಸಿರಾಟ ಕ್ರಮವನ್ನು ಸುಗಮಗೊಳಿಸಲು ಅವರು ಅತ್ತರಿಗೆ ಮೊರೆ ಹೋಗುವುದುಂಟು. ಇನ್ನು ಭೋಗಿಗಳಿಗಂತೂ ಅತ್ತರ್ ಇಲ್ಲದಿದ್ದರೆ ನಡೆಯುವುದೇ ಇಲ್ಲ.

ಅತ್ತರ್ ಎಲ್ಲ ಕಾಲಕ್ಕೂ ಎಲ್ಲ ಜನಕ್ಕೂ ಇಷ್ಟವಾಗುವಂಥದ್ದು. ಅವರಿವರನ್ನೇಕೆ ಸ್ವತಃ ನಿಮ್ಮ ಮೂಗನ್ನೇ ಕೇಳಿನೋಡಿ: ಅತ್ತರ್ ಎಂದರೆ ಅದ ಕ್ಕೆಷ್ಟು ಇಷ್ಟ ಅಂತ. ●

(ಸಾಧಾರ)

# ಸುಗಂಧ ದ್ರವ್ಯದ ಹುಲ್ಲುಗಳು

• ಟಿ.ಎಂ. ಸುಬ್ಬರಾಯ

ಹುಲ್ಲು ಮೇವಿನ ಬೆಳೆ ಎಂಬುದಾಗಿ ತಿಳಿದಿರುವವರೇ ಅಧಿಕ. ಹುಲ್ಲು ಬಹೂಪಯೋಗಿ ಸಸ್ಯ. ಫ್ಲ್ಯಾಕ್ಸ್ ಎನ್ನುವ ಹೆಸರಿನ ಹುಲ್ಲಿನಿಂದ ಕಾಗದ ತಯಾರಿಸಲಾಗುತ್ತದೆ. ಟ್ಯಾಡ್ ಹುಲ್ಲಿನಿಂದ ವಿವಿಧ ಬಗೆಯ ಟೊಪ್ಪಿಗೆಗಳನ್ನು ಸಿದ್ಧಗೊಳಿಸಲಾಗುತ್ತದೆ. ಈಚಲು ಹುಲ್ಲಿನಿಂದ ಚಾಪೆ, ಬುಟ್ಟಿಗಳನ್ನು ನೇಯಲಾಗುತ್ತದೆ. ಹಿಟ್ಟಂಡೆ ಹುಲ್ಲಿನಿಂದ ತಯಾರಿಸುವ ಕಸಬರಿಗೆ ಮಲೆನಾಡಿನ ಮನೆಮನೆಗಳಲ್ಲಿ ಬಳಕೆಯಲ್ಲಿದೆ. ಗುಡಿಸಲುಗಳ ಮುಚ್ಚಿಗೆಗೂ ಹುಲ್ಲು ಬಳಸಲ್ಪಡುತ್ತದೆ. ಕೆಲವು ಜಾತಿಯ ಹುಲ್ಲುಗಳು ಔಷಧೀಯ ಗುಣ ಹೊಂದಿವೆ ಎಂಬುದನ್ನಂತೂ ಮರೆಯುವಂತಿಲ್ಲ. ಕೆಲವು ಹುಲ್ಲುಗಳನ್ನು ಊಟಕ್ಕೆ ತಂಬುಳಿ, ಗೊಜ್ಜು ಇತ್ಯಾದಿ ಪದಾರ್ಥಗಳಾಗಿಯೂ ಹಳ್ಳಿಯ ಮಂದಿ ಬಳಸುತ್ತಾರೆ.

ಸುಗಂಧದ್ರವ್ಯ ತಯಾರಿಕೆಯ ಸಲುವಾಗಿ ಇತ್ತೀಚೆಗೆ ಹುಲ್ಲನ್ನು ಬೆಳೆಸಲಾಗುತ್ತಿದೆ. ಅವುಗಳಲ್ಲಿ ಸುಗಂಧ ದ್ರವ್ಯ ಗುಣ ಇರುವುದು ಇದಕ್ಕೆ ಕಾರಣ. ಇಂಥವುಗಳಲ್ಲಿ ಮುಖ್ಯವಾದವು ನಿಂಬೆ (ಲೆಮನ್) ಹುಲ್ಲು, ಲಾವಂಚ (ಖಸ್) ಹುಲ್ಲು.

## ನಿಂಬೆ ಹುಲ್ಲು

ನಿಂಬೆಯ ಪರಿಮಳ ನೀಡುವುದರಿಂದ ಇದಕ್ಕೆ ನಿಂಬೆ ಹುಲ್ಲು ಎನ್ನುವ ಹೆಸರು ಬಂದಿದೆ. ಇದು ಸಿಬೋ ಪೋಗಾನ್ ಫ್ಲೆಕ್ಸುಯೋಸಸ್ ಪ್ರಭೇದಕ್ಕೆ ಸೇರಿರುವ ಸಸ್ಯ. ಲೆಮನ್ ಗ್ರಾಸ್ ಅಥವಾ ನಿಂಬೆ ಹುಲ್ಲಿಗೆ 'ಈಸ್ಟ್ ಇಂಡಿಯನ್ ಲೆಮನ್ ಗ್ರಾಸ್' ಎನ್ನುವ ಹೆಸರೂ ಇದೆ. ನಮ್ಮ ದೇಶದ ಕೇರಳದಲ್ಲಿ ಇದು ಹೇರಳವಾಗಿ ಬೆಳೆಯುತ್ತದೆ. ಅಲ್ಲಿ ಇದನ್ನು 'ಚೂಮಲ ಪುಲ್ಲು' ಎಂದು ಕರೆಯುತ್ತಾರೆ. ಈ ಹುಲ್ಲಿನಿಂದ ತಯಾರಾಗುವ ಎಣ್ಣೆ 'ಈಸ್ಟ್ ಇಂಡಿಯನ್ ಲೆಮನ್ ಗ್ರಾಸ್ ಆಯಿಲ್', 'ಮಲಬಾರ್ ಆಯಿಲ್' 'ಕೊಚ್ಚಿನ್ ಲೆಮನ್ ಗ್ರಾಸ್ ಆಯಿಲ್' ಎನ್ನುವ ಹೆಸರುಗಳಿಂದ ಪ್ರಸಿದ್ಧವಾಗಿದೆ.

ಬೆಚ್ಚಗಿನ ಆರ್ದ್ರ ವಾತಾವರಣದಲ್ಲಿ ಹೆಚ್ಚು ಬಿಸಿಲು ಮತ್ತು ವರ್ಷದಲ್ಲಿ ಹಂಚಿಕೆಯಾಗಿರುವಂತಹ ೨೦೦-೨೫೦ ಸೆಂ.ಮೀ. ಮಳೆಯ ವಾತಾವರಣದಲ್ಲಿ ನಿಂಬೆ ಹುಲ್ಲು ಉತ್ತಮವಾಗಿ ಬೆಳೆಯುತ್ತದೆ. ನಿರ್ದಿಷ್ಟವಾಗಿ ಇಂಥ ಬಗೆಯ ಮಣ್ಣೇ ಇದಕ್ಕೆ ಅಗತ್ಯ ಎಂದೇನೂ ಇಲ್ಲ. ಯಾವ ಬಗೆಯ ಮಣ್ಣಿನಲ್ಲಿಯೂ ಇದನ್ನು ಬೆಳೆಯಬಹುದು. ಜಂಬಿಟ್ಟಿಗೆಯಂಥ ಮರಳು ಮಿಶ್ರಿತ ಗೋಡು ಮತ್ತು ಕೆಂಪು ಮಣ್ಣುಗಳಲ್ಲಿ ಇದನ್ನು ಬೆಳೆಯುವುದಾದರೆ ತುಸು ಮಟ್ಟಿಗೆ ಗೊಬ್ಬರ ಕೊಡಬೇಕಾಗುತ್ತದೆ.

ಬೀಜ ಬಿತ್ತಿ ಈ ಹುಲ್ಲನ್ನು ವೃದ್ಧಿಪಡಿಸುವ ವಿಧಾನ ಹೆಚ್ಚಾಗಿ ಬಳಕೆಯಲ್ಲಿದೆ. ಕೆಲವು ವೇಳೆ ಒಟ್ಟು ಪಾತಿಗಳಲ್ಲಿ ಹುಲ್ಲಿನ ಬೇರುಗಳಿರುವ ತುಂಡುಗಳಿಂದ ಸಸಿಗಳನ್ನು ಬೆಳೆಸಿ ನಾಟಿ ಮಾಡುವುದೂ ಉಂಟು. ಬೇರಿರುವ ತುಂಡುಗಳು ಹೆಚ್ಚು ಇಳುವರಿ ಕೊಡುತ್ತವೆ. ಮೇ ತಿಂಗಳ ಕೊನೆಯ ವಾರ ಅಥವಾ ಜೂನ್ ತಿಂಗಳ ಮೊದಲ ವಾರ

ಇದರ ನಾಟಿಗೆ ಸೂಕ್ತವಾದ ಕಾಲ.

ನಿಂಬೆ ಹುಲ್ಲು ಬಹುವಾರ್ಷಿಕ ಬೆಳೆ. ನಾಟಿ ಮಾಡಿದ ಆರೇಳು ವರ್ಷ ಸತತವಾಗಿ ಇದು ಇಳುವರಿ ಕೊಡುತ್ತದೆ. ಮೊದಲ ವರ್ಷ ಮೂರು ಕೊಯ್ಲು ದೊರೆತರೆ ಮುಂದಿನ ವರ್ಷಗಳಲ್ಲಿ ಐದಾರು ಕೊಯ್ಲುಗಳು ದೊರೆಯುತ್ತವೆ. ಪ್ರತಿ ಕೊಯ್ಲಿಗೆ ೧೫ ಟನ್ನಿನಷ್ಟು ಹಸಿರು ಹುಲ್ಲು ದೊರೆಯುತ್ತದೆ. ಇದರಲ್ಲಿ ಶೇ. ೦.೫ರಷ್ಟು ಎಣ್ಣೆಯ ಅಂಶ ಇರುತ್ತದೆ. ಎರಡನೆಯ ವರ್ಷದಿಂದ ಪ್ರತಿ ಹೆಕ್ಟೇರಿಗೆ ೩೭೫ ಕಿ.ಜಿ. ಎಣ್ಣೆ ದೊರಕಬಹುದು.

ನಿಂಬೆ ಹುಲ್ಲಿನಲ್ಲಿ ಒಡಿ-೧೯, ಒಡಿ-೪೦೮, ಬಿಪಿಎಲ್-೩೮, ಆರ್‌ಆರ್‌ಐ-೩೯, ಸಿಐ ಎಮ್‌ಪಿ-ಎಲ್‌ಎಸ್-೪೮ ಇತ್ಯಾದಿ ತಳಿಗಳನ್ನು ಅಭಿವೃದ್ಧಿಪಡಿಸಲಾಗಿದೆ.

ನಿಂಬೆ ಹುಲ್ಲಿಗೆ ಯಾವುದೇ ತರಹದ ಹಾನಿ ಕಾರಕ ಕೀಟಗಳ ಉಪಟಳ ಅಥವಾ ರೋಗಬಾಧೆ ಇದುವರೆಗೆ ಕಂಡುಬಂದಿಲ್ಲ, ನಮ್ಮ ದೇಶದಿಂದ ರಫ್ತಾಗುತ್ತಿರುವ ಸುಗಂಧ ತೈಲಗಳಲ್ಲಿ ನಿಂಬೆ ಹುಲ್ಲಿನಿಂದ ತಯಾರಾಗುವ ತೈಲಕ್ಕೆ ಪ್ರಥಮ ಸ್ಥಾನ. ನಿಂಬೆ ಹುಲ್ಲಿನ ಎಣ್ಣೆಯನ್ನು ಸುಗಂಧ ದ್ರವ್ಯಗಳ, ಸಾಬೂನುಗಳ, ಕಾಂತಿವರ್ಧಕ ವಸ್ತುಗಳ ತಯಾರಿಕೆಗಾಗಿ ಬಳಸಲಾಗುತ್ತಿದೆ. ಅಲ್ಲದೆ, ಸೋಂಕು ನಿವಾರಕ ಔಷಧಗಳ ತಯಾರಿಕೆಗೂ ಈ ಎಣ್ಣೆ ಬೇಕು.

ನಿಂಬೆ ಹುಲ್ಲಿನ ಎಣ್ಣೆಯಲ್ಲಿ ಶೇಕಡಾ ೭೫ ರಿಂದ ೮೫ರಷ್ಟು ಪ್ರಮಾಣದಲ್ಲಿ ಸಿಟ್ರಾಲ್ ಅಂಶ ವಿರುತ್ತದೆ. ಈ ಸಿಟ್ರಾಲ್‌ನಿಂದ 'ಆಯನೋನ್ಸ್' ಎನ್ನುವ ರಾಸಾಯನಿಕ ದ್ರವವನ್ನು ಉತ್ಪಾದಿಸಿ ಪರಿಮಳ ದ್ರವ್ಯ ತಯಾರಿಕೆಯಲ್ಲಿ ಬಳಸಲಾಗುತ್ತದೆ. ಬೀಟ ಅಯನೋನ್ಸ್ ಅಂಶದಿಂದ 'ಎ' ಜೀವ ಸತ್ವವನ್ನು ಸಹ ನಮ್ಮ ದೇಶದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ತಯಾರಿಸಲಾಗುತ್ತಿದೆ.

## ಲಾವಂಚ (ಖಸ್) ಹುಲ್ಲು

ವೆಟಿವೆರಿಯ ಜಿಜೆನಾಯ್ಡಿಸ್ ಪ್ರಭೇದಕ್ಕೆ ಸೇರಿರುವ ಲಾವಂಚ(ಖಸ್) ಹುಲ್ಲು ಒತ್ತಾಗಿ ಪೊದೆಯಂತೆ ಬೆಳೆಯುವ ಸಸ್ಯ. ಇದೂ ಬಹುವಾರ್ಷಿಕ ಬೆಳೆಯೆ. ಈ ಹುಲ್ಲಿನ ಕೆಳಭಾಗದಲ್ಲಿರುವ, ಹಳದಿ, ಬೂದು, ಕೆಂಪು ಬಣ್ಣಗಳ ತಂತುಬೇರುಗಳನ್ನು ಕತ್ತರಿಸಿ ಭಟ್ಟಿ ಇಳಿಸಿದರೆ ಸುಗಂಧ ತೈಲ ದೊರೆಯುತ್ತದೆ. ಈ ತೈಲವನ್ನು ಸೌಂದರ್ಯ ಸಾಮಗ್ರಿಗಳ, ಸುವಾಸನಾ ಸಾಬೂನುಗಳ ತಯಾರಿಕೆಗೆ ಬಳಸಲಾಗುತ್ತದೆ.

ಅನಾದಿ ಕಾಲದಿಂದಲೂ ಲಾವಂಚದ ಬೇರುಗಳನ್ನು ಬುಟ್ಟಿ, ಬೀಸಣಿಗೆ ಹಾಗೂ ಚಾಪೆಗಳನ್ನು ಹೆಣೆಯಲು ಬಳಸುತ್ತಾ ಬರಲಾಗಿದೆ. ಲಾವಂಚದ ಬೇರುಗಳಿಂದ ಹೆಣೆದ ಚಾಪೆಗಳನ್ನು ತೂಗು ಹಾಕಿ, ಅದರ ಮೇಲೆ ನೀರು ಸಿಂಪಡಿಸಿದರೆ ಸುವಾಸನೆಯೊಂದಿಗೆ ತಂಪುಗಾಳಿ ದೊರೆಯುತ್ತದೆ. ಮಣ್ಣಿನ ಸವಕಳಿಯನ್ನು ಲಾವಂಚದ ಹುಲ್ಲು ಸಮರ್ಪಕವಾಗಿ ತಡೆಯಬಲ್ಲುದು ಎಂಬುದರಿಂದ ಇತೀಚಿನ ವರ್ಷಗಳಲ್ಲಿ ಇದನ್ನು ಗ್ರಾಮೀಣ ಭಾಗದಲ್ಲಿ ಹೆಚ್ಚಾಗಿ ಬೆಳೆಯಲಾಗುತ್ತಿದೆ.

ಲಾವಂಚ ಹುಲ್ಲು ಎಲ್ಲಾ ವಿಧದ ಮಣ್ಣಿನಲ್ಲಿಯೂ ಬೆಳೆಯುತ್ತದೆ. ಸಾರವತ್ತಾದ ಕೆಂಪು ಜಂಬಟ್ಟಿಗೆ ಮಣ್ಣಿನ ಪ್ರದೇಶದಲ್ಲಿ ಬೆಳೆಯುವ ಲಾವಂಚ ಹುಲ್ಲಿನಲ್ಲಿ ತೈಲದ ಅಂಶ ಹೆಚ್ಚಾಗಿರುತ್ತದೆ.

ಲಾವಂಚ ಹುಲ್ಲಿನ ಬೆಳವಣಿಗೆ ಹಾಗೂ ಅಧಿಕ ಇಳುವರಿಗೆ ಉಷ್ಣ ಹಾಗೂ ಸಮಶೀತೋಷ್ಣ ಹವಾಗುಣ ಹೆಚ್ಚು ಸೂಕ್ತ. ಸಾಧಾರಣ ತೇವಾಂಶ ವಿರುವ ೧೦೦ ರಿಂದ ೨೦೦ ಸೆಂ.ಮೀ. ಮಳೆ ಮತ್ತು ೨೧ ರಿಂದ ೪೪ ಡಿಗ್ರಿ ಸೆಂ. ಉಷ್ಣಾಂಶ ವಿರುವ ಪ್ರದೇಶಗಳಲ್ಲಿ ಇದು ಹುಲುಸಾಗಿ ಬೆಳೆಯುತ್ತದೆ.

ಹೈಬ್ರಿಡ್-೭,೮, ಒಡಿವಿ-೧೩ ಲಾವಂಚ ಹುಲ್ಲಿನ ಮುಖ್ಯ ತಳಿಗಳು.

ನೈಸರ್ಗಿಕವಾಗಿ ಈ ಹುಲ್ಲು ಬೀಜದಿಂದ ಹಾಗೂ ಕಂತೆಗಳಿಂದ ಪ್ರಸಾರವಾಗುತ್ತದೆ. ವಾಣಿಜ್ಯ ದೃಷ್ಟಿಯಿಂದ ಇತ್ತೀಚೆಗೆ ಕಂತೆಗಳ ಮುಖಾಂತರ ಇದನ್ನು ಬೆಳೆಸಲಾಗುತ್ತಿದೆ. ನಾಟಿ ಪದ್ಧತಿಯನ್ನೂ ಕೆಲವೆಡೆ ಅಳವಡಿಸಿಕೊಳ್ಳುತ್ತಿದ್ದಾರೆ.

(ಮಾಹಿತಿ: ಉ.ಕ. ಜಿಲ್ಲಾ ತೋಟಗಾರಿಕಾ ಇಲಾಖೆ)

# ಮಹಿಳೆಯ ಕುರಿತು ನಾಲ್ಕು ಉದಾಹರಣೆಗಳು....

• ಡಾ. ಸುನೀತಿ ದೇಶಪಾಂಡೆ

ನೌಕರಿ ನಿಮಿತ್ತ ಪರದೇಶಕ್ಕೆ ಹೋಗುವುದಾದರೆ ಸ್ವಲ್ಪಿಲ್ಲ ಸ್ವಲ್ಪಾದರೂ ಭಾಷಾಜ್ಞಾನ ಬೇಕು ಅಂದುಕೊಂಡ ಗಂಡ-ಹೆಂಡತಿ ಇಬ್ಬರೂ ನಮ್ಮ 'ಬಿಸಿನೆಸ್ ಕೋರ್ಸ್' ಸೆಂಟರಿನಲ್ಲಿ ಹಾಜರ್ ಆದರು. ಒಂದು ತಾಸು ಮಾತುಕತೆ ಆಡಿದ ಮೇಲೆ ಹೆಂಡತಿಯೇ ಗಂಡನಿಗಿಂತ ಹುಶಾರು ಎಂದು ಕಂಡುಬಂತು. ವರ್ಗಪಾಠ, ಗೃಹಪಾಠ ಈ ಎರಡರಲ್ಲೂ ಆಕೆ ಚುರುಕಾಗಿಯೇ ಉತ್ತರಿಸಿದಳು. ಇದು ಗಂಡನೆಂಬ ಮಹಾಶಯನಿಗೆ ಸರಿಬಂದಿರಲಿಕ್ಕಿಲ್ಲ ಎಂದು ತೋರುತ್ತದೆ. ಕಿರಿಕಿರಿಯ ಧ್ವನಿಯಲ್ಲಿ, "ನಮ್ಮ ಸೌಭಾಗ್ಯವತಿ ತುಂಬ ಉತ್ಸಾಹಿ ಇದ್ದಾಳೆ. ಭಾಷೆಯ ಅಭ್ಯಾಸವನ್ನು ಮುಂದುವರಿಸಬೇಕೆನ್ನುತ್ತಾಳೆ...." ಎಂದ.

"ಬರೋಬರಿ. ಕಲಿಯಲಿ, ಅದಕ್ಕೇನು?"

"ರಾತ್ರಿ ಬಹಳ ಹೊತ್ತಿನ ತನಕ. ಅಷ್ಟೇ ಅಲ್ಲ, ಬೆಳಿಗ್ಗೆ ಬೇಗ ಎದ್ದು ಕೂಡಲೇ ಏನಾದರೂ ಓದು-ಬರಹ ಮಾಡುತ್ತಾಳೆ. 'ನಿಮ್ಮ ಹಾಗೆ ಡಾಕ್ಟರೇಟ್ ಮಾಡೋ ಇಚ್ಛೆ ಇದೆ' ಅನ್ನುತ್ತಾಳೆ."

"ಭೇಷ್. ಒಳ್ಳೆಯ ವಿಚಾರ."

"ಐ ಡೋಂಟ್ ವಾಂಟ್ ದಿಸ್ ನಾನ್‌ಸೆನ್ಸ್. ಷೀ ಈಸ್ ಟು ಕುಕ್ ಫಾರ್ ಮಿ. ಷೀ ಹ್ಯಾಸ್ ಟು ಬ್ರಿಂಗ್‌ಅಪ್ ಚಿಲ್ಡ್ರನ್."

ಇಷ್ಟರಲ್ಲೇ ಪತ್ನಿ ಕ್ರುದ್ಧಕಟಾಕ್ಷ ಬೀರಿದ್ದರಿಂದ ಈ ಸಂವಾದದ ಇತಿಶ್ರೀ ಅಲ್ಲಿಗೇ ಆಯಿತು.

ಎಷ್ಟೋ ದಿವಸಗಳ ನಂತರ ಕ್ಲಾಸಿಗೆ ಹೆಂಡತಿಯೊಬ್ಬಳೇ ಬರತೊಡಗಿದಳು. 'ಬಿಸಿನೆಸ್ ಕೋರ್ಸ್' ಮುಗಿಸಿ, ರೀತಿಯಂತೆ 'ಸರ್ಟಿಫಿಕೇಟ್ ಕೋರ್ಸ್'ಗೆ ಪ್ರವೇಶ ಪಡೆದಳು. ಈ ನಡುವೆ ಅವಳಿಗೆ ದಿನಗಳು ಸಮೀಪಿಸತೊಡಗಿದವು. ಹೀಗಾಗಿ ಸಂಜೆ ಕ್ಲಾಸು ಮುಗಿದ ಮೇಲೆ ಆಕೆಯನ್ನು ಕರೆದೊಯ್ಯಲು ಪತಿ ಮಹಾಶಯರೇ ಬರಲಾರಂಭಿಸಿದರು. ಆದರೆ ಎದುರಿಗೆ ಕಂಡರೂ 'ನಮಸ್ಕಾರ-ಚಮತ್ಕಾರ'ವಿಲ್ಲ! ಆಯಿತು, ಇಲ್ಲದಿದ್ದರಿಲ್ಲ ಅಂದುಕೊಂಡೆ.

ಒಂದು ದಿನ ಸಂಜೆ ಹೆಂಡತಿಗೆ ಕೆಳಗೆ ಇಳಿದು ಹೋಗಲು ಹೇಳಿ ಪತಿ ಮಹಾಶಯರು ಮೇಲೆಯೇ ಉಳಿದರು. ಆ ಮೇಲೆ ಆ ಗೃಹಸ್ಥ ಬಾಗಿಲನ್ನೂ ಬಡಿಯದೇ ಖೋಲಿಯೊಳಗೇ ನುಗ್ಗಿ ಬಂದರು. ಅಲ್ಲಿ ಇನ್ನೊಂದು ಕ್ಲಾಸು ಚಾಲೂ ಇತ್ತು.

"ನಿಮಗೆ ಎದುರಾಎದುರಾನೇ ಹೇಳ್ತೇನೆ. ಅವಳು ಇಲ್ಲಿ ಕ್ಲಾಸಿಗೆ ಬರೋದು ನನಗೆ ಎಳಷ್ಟೂ ಹಿಡಿಸೋದಿಲ್ಲ...."

"ಆಯಿತು. ನಿಮ್ಮಾಕ್ಕೆಗೆ ಹಾಗಂತ ಹೇಳಿಬಿಡಿರೆಲ್ಲ. ನೋಡ್ರಿ, ಬೇರೆಯವರ ಖೋಲಿಯೊಳಗೆ ಕಾಲಿಡುವುದಕ್ಕೆ ಮೊದಲು ಅವರ ಪರವಾನಗಿ ಪಡೀಬೇಕು. ನನಗನಿಸ್ತದೆ ನಿಮಗೆ ಸ್ವಲ್ಪ ಸಂಸ್ಕಾರ ಕಮ್ಮಿ...."

"ನಮ್ಮ ಮನೆಯೊಳಗೆ ಯಾರಿಗೂ ಇದು ಹಿಡಿಸೋದಿಲ್ಲ."

"ಸರಿ, ನೀವು ನಿಮ್ಮಾಕ್ಕೆಗೆ ಹೇಳಿಬಿಡಿರಿ ಅಂದೆನಲ್ಲಾ..."

"ನಾನು ಹೇಳಿದರೆ ಆಕೆ ಕೇಳುತ್ತಾಳೇನು...?"

"..... "

"ನೀವೆss ನೋಡಿದ್ದೀರಿ.... ಷೀ ಈಸ್ ಪ್ರೆಗ್ನೆಂಟ್."

ಅಂತೂ ಇಂತೂ ಸಂಯಮ ತಂದು ಕೊಂಡು ಹೇಳಿದೆ,

"ನಿಮ್ಮಾತ್ರೇನೇ ಹೇಳಲಿ ಹಾಗೆ ಅಂತ..."

"ಏನಂದ್ರೀ? ಆಕೇನೇ? ಐ ಯಾಮ್ ಹರ್ ಹಜ್ಬಂಡ್. ನಾನು ಹೇಳ್ತಾ ಇದ್ದೀನಿ...."

"ಅದೆಲ್ಲಾ ಆಗೋದಿಲ್ಲ. ಸ್ಟೂಡೆಂಟ್ ಯಾರು? ಅವಳೇ ಹೇಳಬೇಕು."

"ನೀವೇ ಅವಳಿಗೆ 'ಬರಬೇಡ' ಅಂತ ಹೇಳಿ ಬಿಡಿರೆಲ್ಲ...."

"ಅದು ಶಕ್ಯವಿಲ್ಲ. ಯಾರಿಗೂ ಭಾಷೆ ಕಲೀರಿ ಅಂತ ಒತ್ತಾಯ ಆಗ್ಲೀ, ಕಲೀಬೇಡಿರಿ ಅಂತ ಆಗ್ರಹಾ ಆಗ್ಲೀ ನಾವು ಮಾಡೋದಿಲ್ಲ. ಒಬ್ಬ ಹೆಣ್ಣಾಗಿ ಅವಳ ಪ್ರಕೃತಿಯ ವಿಚಾರದಿಂದ ನೋಡಿ 'ಮುಂದೆ ಕೋರ್ಸ್ ಮಾಡಬಹುದು' ಅಂತ ನಾನೇ ಹೇಳಿದ್ದೆ.... ನೀವಿನ್ನು ದಯಮಾಡಿಸಬ ಹುದು."

ಪಾಪ, ಆ ಹುಡುಗಿಗೆ ಇಂಥ ಯಾವುದರ ಮಾಹಿತಿಯೂ ಇರಲಿಲ್ಲ. ಆರೋಗ್ಯ ಜಪ್ಪಿಸಿಕೊ ಳ್ಳುವ ಕುರಿತು ಆಕೆಗೆ ಹೇಳತೊಡಗಿದೆ. ಇಲ್ಲದಿದ್ದರೆ ಪರಿಣಾಮ ಗಂಭೀರವಾಗುತ್ತದೆ ಎಂದು ಎಚ್ಚರಿ ಸಿದೆ. ಆಮೇಲಾಮೇಲೆ ಆಕೆಯೇ ಬರುವುದನ್ನು ನಿಲ್ಲಿಸಿಬಿಟ್ಟಳು.

ಇವತ್ತೇನಾಗಿದೆ ಗೊತ್ತೇನು? ಇದೇ ಹುಡುಗಿ ವಾರ್ಷಿಕ ಪರೀಕ್ಷೆಯಲ್ಲಿ ಸರ್ವಾಧಿಕ ಗುಣಗಳನ್ನು ಪಡೆದು ಸರ್ವಪ್ರಥಮಳಾಗಿ ಪಾಸಾಗಿದ್ದಾಳೆ.

★

ಇನ್ನು ನನ್ನ ಎರಡನೆಯ ಅನುಭವ ಸಾಂಸ್ಕೃತಿಕ ಕಾರ್ಯಕ್ರಮಗಳ ಸಂಬಂಧಿಯಾದದ್ದು. ಸ್ಪರ್ಧೆಗ ಳಲ್ಲಿ ಗಂಡಸಿಗಿಂತ ಹೆಂಗಸೇ ಹೆಚ್ಚು ಮೈ ಚಳಿ ಬಿಟ್ಟು ಭಾಗವಹಿಸಿ ಹೇಗೆ ವಿಜಯಿಯಾಗುತ್ತಾಳೆ ಎಂದು ತೋರಿಸುವಂಥದ್ದು. ಒಬ್ಬ ಮಾಜಿ ವಿದ್ಯಾರ್ಥಿ. ಉತ್ತಮ ಗಾಯಕ ಮತ್ತು ನಟ. ಅವನ ಹೆಂಡತಿ ಇಷ್ಟವಾದ ಉದ್ಯೋಗ ನಡೆಸುತ್ತಿದ್ದಾಳೆ. ನಮ್ಮ ಎಲ್ಲಾ ಕಾರ್ಯಕ್ರಮಗಳಲ್ಲಿಯೂ ಹಾಜರಿರು ತ್ತಾಳೆ. ತಾಲೀಮು ಸುರುವಾಯಿತೆಂದರೆ ಮನೆ ಯಿಂದ ತರತರದ ತಿಂಡಿ ಮಾಡಿ ಕಟ್ಟಿ ನಮಗಾಗಿ ಕಳಿಸುತ್ತಾಳೆ. ಇಷ್ಟೇ ಅಲ್ಲ, ಯಾವುದಾದರೂ ನಾಟಕದ ಸಂದರ್ಭದಲ್ಲಿ ಯಾವಳಾದರೂ ನಟಿ ಬರಲಿಲ್ಲವೆಂದರೂ, ಈಕೆ, ಬೇರೆ ಭಾಷಿಕಳಾಗಿ ದ್ದರೂ, ಆ ಸಂಭಾಷಣೆಗಳನ್ನು ಮಗಳಿಗೆ ಬಾಯಿ ಪಾಠ ಮಾಡಿಸಿ ಆಕೆಯೊಂದಿಗೆ ಸ್ಟೇಜಿಗೆ ಬರು ತ್ತಾಳೆ.

ತಾಲೀಮು ನಡೆಯುವಾಗ ಆಕೆ ನಿತ್ಯ ಬರು ವುದನ್ನು ನೋಡಿ ಒಮ್ಮೆ ಚೇಷ್ಟೆ ಮಾಡಿದೆ:

"ಯಾಕ್ರಿ? ಯಜಮಾನರ ಮೇಲೆ ಅಷ್ಟು ಅಪನಂಬಿಕೆಯೇನು? ದಿನಾಲೂ ಬಂದು ಒಂದು ಕಣ್ಣಿಟ್ಟಿರ್ತೀರಿ...."

ಉತ್ತರವಾಗಿ ಆಕೆ ಚೆಲ್ಲಿದ ನಗೆ ಅತ್ಯಂತ ನಿರ್ಮಲವಾದದ್ದು.

ಗಂಡ ಭಾಷೆಯನ್ನು ಸರಿಯಾಗಿ ಕಲಿಯಬೇಕು, ಕಲಿತು ಸರಿಯಾಗಿ ಅಭಿನಯಿಸಬೇಕು ಎಂಬ ಉಮೇದು ಈ ಮಹಿಳೆಗೆ. ಒಮ್ಮೆ ಫೋನು ಮಾಡಿದಳು:

"ಮೇಡಂ, 'ಇವರ್ನ' ಕಳಿಸಿಕೊಡ್ಲೇನು? ನೀವು 'ಹೂಂ' ಅಂದರೆ ಮಾತ್ರ ಕಳಿಸ್ತೀನಿ."

"ಅಲ್ಲಮ್ಮಾ, ನಿಮ್ಮೆಜಮಾನರಂಥ ಅನುಭವಿ ಗಳ ಸಂಖ್ಯೆ ತೀರ ಕಡಿಮೆ. ಮತ್ಯಾಕೆ ಕಳಿಸ್ಲೇನು ಅಂತ ಕೇಳ್ತೀರಿ?"

"ಕಲಿಯೋದು ಎಂದಿಗೂ ಮುಗೀಬಾರದಲ್ವ ಮೇಡಂ. ಅದಕ್ಕೇ...."

ಇನ್ನು ಗಂಡ? ಹೆಂಡತಿ ತನ್ನ ಬಿಜಿನೆಸ್‌ನಲ್ಲಿ ಮಗ್ನಳು, ಅವಳಿಗೆ ವಿಶ್ರಾಂತಿ ಅಪರೂಪ ಎಂಬು ದನ್ನು ಅರಿತುಕೊಂಡವನು. ಆಕೆಗೆ ಎಲ್ಲ ಕೆಲಸಗ ಳಲ್ಲೂ ನೆರವಾಗುತ್ತಾನೆ. ಪಾಕಪ್ರವೀಣನೂ ಹೌದು. ಆತ ಬಂಗಾಲಿ; ಆಕೆ ತಮಿಳು ನಾಡಿನವಳು. ಆತ ಇಂಡಿಯನ್ ಏರ್‌ಲೈನ್ಸ್‌ನ ನಿವೃತ್ತ ಉದ್ಯೋಗಿ. ಹೆಂಡತಿಯನ್ನು ಸಾಕಷ್ಟು ಸಲ ವಿದೇಶಗಳಿಗೆ ಕರೆದೊಯ್ದಿದ್ದಾನೆ. ಭಾಷೆ ಕಲಿಯಲು ನೌಕರಿಯಲ್ಲಿ ದ್ದಾಗ ಸಾಧ್ಯವಾಗಿರಲಿಲ್ಲ. ಈಗ ಅದಕ್ಕೆ ಸಾಕಷ್ಟು ಬಿಡುವು ಇದೆ.

ಕೆಲ ದಿನಗಳ ಹಿಂದೆ ತುಂಬ ಆಗ್ರಹಪಟ್ಟ ರೆಂದು ಅವರ ಮನೆಗೆ ಹೋದೆ.

"ಬಂಗಾಲಿ ಪದ್ಧತಿ ಊಟ ನಡೆದೀತಲ್ಲ? ಉಂಡು ನೋಡಿ. ಇಷ್ಟವಾದರೆ ಅದರೆಲ್ಲ ಶ್ರೇಯ

ಈ ನಿಮ್ಮ ವಿದ್ಯಾರ್ಥಿಗೆ ಸಲ್ಲಬೇಕು. ನಾನು ಈಗಷ್ಟೇ ಫ್ಯಾಕ್ಟರಿಯಿಂದ ಬಂದೆ," ಆಕೆ ಹೇಳ ಹೇಳುತ್ತಲೇ ಗಂಡನತ್ತ ಹೆಮ್ಮೆಯ ನೋಟ ಬೀರಿದಳು.

ಯಾವ ಮುಚ್ಚು-ಮರೆಯೂ ಇಲ್ಲದ ಆ ಮಹಿಳೆಯ ರೀತಿ ಕಂಡು ಕೌತುಕವೆನಿಸಿತು.

"ಇವರು ಮಾಡೋ ಮೀನು ಅಡಿಗೆ ತುಂಬ ರುಚಿಯಾಗಿರ್ತದೇರೀ. ಇನ್ನೊಂದು ದಿನ ಇವರ ಕೈಯ ಮೀನಡಿಗೆ ಉಣ್ಣುವಿರಂತೆ ಉಳಿದ ಎಲ್ಲವನ್ನೂ ಅವತ್ತು ನಾನು ಮಾಡ್ತೀನಿ...."

ಆಕೆ ಮತ್ತೊಮ್ಮೆ ನಿರ್ಮಲ ನಗೆ ಚೆಲ್ಲಿದಳು.

'ಸ್ತ್ರೀ ಮುಕ್ತಿ'ಯ ವಿಚಾರ-ಪ್ರಚಾರದ ಈ ದಿನಗಳಲ್ಲಿ ಈಕೆಯಂಥವಳನ್ನೊಮ್ಮೆ ನಮ್ಮ ಮಹಿಳೆಯರು ನೋಡಲೇಬೇಕು.

*

ಒಬ್ಬ ಕಾರಖಾನೆಯ ಒಡೆಯ ಕಾರ್ಯನಿಮಿತ್ತ ಪರದೇಶಕ್ಕೆ ಹೋಗಬೇಕಾಯಿತು. ಭಾಷೆಯ ಮಾಹಿತಿ ಒಂದಿಷ್ಟಿರಲಿ ಎನಿಸಿ 'ಲ್ಯಾಂಗ್ವೇಜ್ ಕ್ಲಾಸ್' ಸೇರಲು ಬಯಸಿ ವಿಚಾರಿಸಲು ಬಂದಿದ್ದ. ಗೇಟಿನಿಂದ ನನಗೆ ಫೋನ್ ಮಾಡಿದ.

"ನಾನು ಇಂಥಿಂಥವ. ನಿಮ್ಮಬಳಿ ಒಂದಿಷ್ಟು ಚೌಕಶಿ ಮಾಡಬೇಕಾಗಿತ್ತು."

"ಮೇಲೆ, ನನ್ನ ಚೇಂಬರಿಗೇ, ಬನ್ನಿರಿ. ನಿಮಗೆ ಬೇಕಾದ ಮಾಹಿತಿ ಎಲ್ಲಾ ಸಿಗುತ್ತದೆ," ಎಂದೆ.

ಒಂದೆರಡು ನಿಮಿಷ ಕಳೆದ ಮೇಲೆ ಮತ್ತೊಂದು ಫೋನು. ಆತನ ಡ್ರೈವರ್ ಮಾತಾಡಿದ.

"ಯಜಮಾನರಿಗೆ ಅಷ್ಟು ಸಮಯ ಇಲ್ಲವಂತೆ. ಅದಕ್ಕೆ ದಯವಿಟ್ಟು ತಾವೇ ಕೆಳಗಿಳಿದು ಬರಬೇಕಂತೆ...."

ನಾನು ಸಮಾಧಾನದಿಂದಲೇ ಹೇಳಿದೆ-

"ನಿಮ್ಮ ಸಾಹೇಬರಿಗೆ ಮೇಲೆಯೇ ಬರಲಿಕ್ಕೆ ಹೇಳಪ್ಪಾ..." ಫೋನಿಟ್ಟೆ.

ಮತ್ತೆ ಐದು ನಿಮಿಷಗಳು ಉರುಳಿದವು.

ನನ್ನ ಚೇಂಬರಿನ ಆಚೆ ಬಾಗಿಲಲ್ಲಿ ನಿಂತುಕೊಂಡ ಆ ಗೃಹಸ್ಥ. ಆತನಿಂದ ವಿಜಿಟಿಂಗ್ ಕಾರ್ಡ್ ಪಡೆದು ನನ್ನೆಡೆ ಬರುತ್ತಿದ್ದ ಡ್ರೈವರ್ ಕಂಡ.

ಆತ ಒಳಗೆ ಬಂದು, "ಯಜಮಾನ್ರು ಅಲ್ಲೇ



"ಏನ್ರಿ... ಟೆಲಿಫೋನ್ ಬಿಲ್ ಇಷ್ಟೊಂದಾಗಿದೆ! ನನ್ನ ಮಾತಿಗೆ ಅಷ್ಟೊಂದು 'ಬೆಲೆ' ಉಂಟಾ?"

ಬಾಗಿಲಲ್ಲಿ ನಿಂತಿದ್ದಾರೆ. ತುಂಬಾ ದೊಡ್ಡ ವ್ಯಕ್ತಿ. ಇದು ಅವರ ಕಾರ್ಡು," ಎಂದು ಅದನ್ನು ನನ್ನೆಡೆ ಚಾಚಿದ.

ನಾನೂ ನನ್ನ ಕಾರ್ಡನ್ನು ಡ್ರೈವರನಿಗಿತ್ತೆ, "ಅವರಿಗೆ ಕೊಡು. ಹಾಂ, ಒಳಗೆ ಬರಲು, ಹೇಳು," ಎಂದೆ.

ಆ ಮಹಾಶಯ ಕಾರ್ಡನ್ನು ಹಿಂದೆ ಮುಂದೆ ತಿರುಗಿಸಿ ನೋಡಿ, (ಒಬ್ಬ ಯಃಕಶ್ಚಿತ್ ಹೆಂಗಸು ಎದ್ದು ಕೂಡ ಬರಲಿಲ್ಲವಲ್ಲ ಎಂದುಕೊಂಡಿರಬೇಕು) ಹಾಗೆಯೇ ಮೆಟ್ಟಿಲಿಳಿಯುವುದು ಕಂಡಿತು.

*

ರಾಷ್ಟ್ರೀಕೃತ ಬ್ಯಾಂಕೊಂದರ ವರಿಷ್ಠ ಅಧಿಕಾರಿ. ನಿವೃತ್ತಿಯೋಗ್ಯ ವಯಸ್ಸಿನವರು. ನಮ್ಮ ವರ್ಗಗಳಿಗೆ ಹೆಸರು ನೋಂದಾಯಿಸಿಕೊಂಡರು. ಹಾಜರಾಗತೊಡಗಿದ ಮೇಲೆ, 'ಕಲಿಸುವವರು ಯಾರು? ಒಬ್ಬ ಹೆಣ್ಣುಮಗಳು. ವಯಸ್ಸಿನಲ್ಲಿ ತನಗಿಂತ ತುಂಬ ಕಿರಿಯಳು. ಛೆ.... ಛೆ.... ಈಕೆ ಹೇಳಿದ್ದನ್ನು ಕೇಳಿಕೊಂಡು ಬರೆದುಕೊಳ್ಳುತ್ತ ಕೂಡುವುದೆ?' ಎಂದೆಲ್ಲ ಅನಿಸತೊಡಗಿತು. ಆದ್ದರಿಂದ ಅವರು ಒಂದು ಟೇಪ್‌ರೆಕಾರ್ಡರಿನೊಂದಿಗೆ ಬರತೊಡಗಿದರು. ಆದರೆ ಉಳಿದ ವಿದ್ಯಾರ್ಥಿಗಳು ಆಕ್ಷೇಪಿಸತೊಡಗಿದ್ದರಿಂದ ಅವರ ಈ 'ಪ್ರಯೋಗ'

ಎರಡೇ ದಿನ ನಡೆಯಿತು. ಅಲ್ಲಿಂದ ಶುರುವಾಯಿತು ಆ ಮಹನೀಯನ ಪ್ರಯತ್ನ: 'ಇವಳನ್ನು ಎಲ್ಲಿ ತಪ್ಪಿನಲ್ಲಿ ಸಿಕ್ಕಿಸಬೇಕು, ಹೇಗೆ ಫಜೀತಿಗೀಡು ಮಾಡಬೇಕು?' ಮುಂತಾಗಿ. ಆದರೆ ಅದು ಬೇಸರ ತರಿಸಿತೇನೋ. ಅಂತೂ ತಿಂಗಳೊಪ್ಪತ್ತಿನ ಮೇಲೆ ಈ 'ಹಿರಿಯ' ಉಳಿದವರೊಂದಿಗೆ 'ಬೆರೆಯ' ತೊಡಗಿದರು(?)

ನಮ್ಮ ಪಠ್ಯ ಪುಸ್ತಕದಲ್ಲಿ ಒಂದೆಡೆ ಹೀಗೊಂದು ವಾಕ್ಯವಿದೆ:

"ಮಾಯ್ ಮದರ್ ಡಜ್‌ನಾಟ್ ವರ್ಕ್, ಷೀ ಈಜ್ ಎ ಹೌಸ್‌ವೈಫ್."

ವಾಚನ ಸುರುವಾದ ತುಸು ಹೊತ್ತಿನಲ್ಲಿ ಈ ವಾಕ್ಯದ ಬಗ್ಗೆ ಇಬ್ಬರು ವಿದ್ಯಾರ್ಥಿನಿಯರು ಏನೇನೋ ಆಕ್ಷೇಪವೆತ್ತಲು ಆರಂಭಿಸಿದರು. ಅವರಲ್ಲಿ ಒಬ್ಬಾಕೆಯಂತೂ ಹಿರಿಯ ಗೃಹಿಣಿ.

"ಇಧ್ಯಾಂಗೆ ಆಗ್ತದೇರಿ? ನಿಜವೆಂದರೆ ಇದು ಹೆಂಗಸರ ಮೇಲೆ ದೊಡ್ಡ ಅನ್ಯಾಯ. ಆ್ಯಕ್‌ಚ್ಯುವಲಿ ಮದರ್ಸ್ ಆ್ಯಂಡ್ ಹೌಸ್‌ವೈವ್ಸ್ ಆರ್ ದಿ ಓನ್ಲಿ ನಾನ್‌ಪೇಡ್ ವರ್ಕರ್ಸ್ ಆ್ಯಂಡ್ ಆಲ್ಸೋ ದ ಗ್ರೇಟೆಸ್ಟ್ ಆ್ಯಂಡ್ ದಿ ಓನ್ಲಿ ನಾನ್ ವೋಕೇಶನಲ್ ಕ್ಲಾಸ್."

'ಸ್ತ್ರೀ ಚಳವಳಿಯಿಂದ ನಿಜವಾಗಿಯೂ ಯಾರಿಗಾದರೂ ತೊಂದರೆಯಾಗುತ್ತಿದ್ದರೆ ಅದು ಬಹುಶಃ ಮನೆಯಲ್ಲಿ ಕೂಡುವ ಗೃಹಿಣಿಯರಿಗೆ' ಎಂಬ ಬಾರ್ಬರಾ ವಾಲ್ಟರ್ಸ್‌ಳ ಮಾತನ್ನು ನಾನು ಉದಾಹರಿಸಿದಾಗಲಂತೂ ಅದನ್ನು ಕೇಳಿ ಮತ್ತಷ್ಟು ಬಾಯಿಗಳ ಸಂತೆ ನೆರೆದಂತಾಯಿತು.

★

ಇಂದು ಪರಿಸ್ಥಿತಿ ಬದಲಾಗಿದೆ. ಮನೆಹಿಡಿದು ಕೂಡುವ ಗೃಹಿಣಿಯರ ಸಂಖ್ಯೆ ಕಡಿಮೆಯಾಗಿದೆ. ಗೃಹಕೃತ್ಯಗಳನ್ನೆಲ್ಲ ಮುಗಿಸಿಕೊಂಡು ಸಮಾಜ ಕಾರ್ಯಾರ್ಥ ಇಲ್ಲವೆ ಧನಾರ್ಜನೆಗಾಗಿಯೊ ಸ್ವತಃ ಆಕೆ ಧಡಪಡಿಸುತ್ತಲಿದ್ದಾಳೆ. ಅಷ್ಟೇ ಅಲ್ಲ, ಅದರಲ್ಲಿ ಆಕೆ ಯಶಸ್ವಿಯೂ ಆಗುತ್ತಿದ್ದಾಳೆ. ಪುರುಷ ಹುಕುಮು ನೀಡುತ್ತಲೇ ಹೋಗುವ ಮತ್ತು ಸ್ತ್ರೀ ಅದಕ್ಕೆಲ್ಲ ತಲೆಹಾಕಿ ತಪ್ಪುಗೆ ಮಾಡಿ ಮುಗಿಸುವ ಕಾಲ ಹಿಂದಾಯಿತು.

ದೃಷ್ಟಾಂತವೊಂದನ್ನು ಕೊಡುತ್ತೇನೆ. ಪತಿ-ಪತ್ನಿಯರಿಬ್ಬರೂ ದಿನವಿಡಿ ದುಡಿಯುವವರು. ಮನೆಯಲ್ಲಿಬ್ಬರು ಪುಟ್ಟ ಹುಡುಗರು. ಆಕೆ ಕೆಲಸಕ್ಕೆ ಹೋಗುವುದು ಬಹಳ ದೂರವಾದ್ದರಿಂದ ಮನೆ ಬಿಡುವುದು ಬೇಗನೆ. ಮರಳಿ ಬರುವುದು ತುಂಬ ತಡವಾಗಿ. ಲೋಕಲ್ ಗಾಡಿಯಲ್ಲಿ ಆಕೆ ನಿತ್ಯದ ಸಹಪ್ರಯಾಣಿಕ ಗೆಳತಿಯೆದುರು ಹೇಳಿದ್ದು:

"ನಾನು ಹೆಣದಂತಾಗಿ ಮನೆ ತಲಪಿ ಉಶ್ಶಪ್ಪಾ ಅಂತ ಕೂತ ಹೊತ್ತಿನಲ್ಲೆ ಪತಿರಾಯನ ಅಪ್ಪಣೆ, 'ಚಹ ಮಾಡು, ಸ್ವಲ್ಪ ತಿನ್ನಲಿಕ್ಕೂ ಏನಾದರೂ ಮಾಡು ಹೂಂ.... ಬೇಗ ಸ್ನೇಹಿತರು ಬರೋರಿದ್ದಾರೆ... "

"ಆಗ ನೀನೇನು ಹೇಳ್ದಿ?" ಗೆಳತಿ ಕೇಳಿದಳು.

"ಅಗದಿ ಸ್ಪಷ್ಟ ಹೇಳಿಬಿಡ್ತೇನೆ 'ನಾನು ದಣಿದು ಬಂದಿದ್ದೇನೆ. ನೀವೇ ಮಾಡಿಬಿಡ್ರಿ ಇಲ್ಲದಿದ್ರೆ ಹೊರಗಿನಿಂದಾದ್ರೂ ತರಿಸಿಕೊಡ್ರಿ.....,"

ಅವರಿಬ್ಬರ ಮಧ್ಯೆ ಮೌನ ನೆಲೆಸಿತು.

ಸಹ ಪ್ರಯಾಣಿಕ ಗೆಳತಿ ಏನೋ ನಿರ್ಧರಿಸಿದ್ದು ಆಕೆಯ ಹಾವಭಾವದಿಂದಲೇ ಸ್ಪಷ್ಟವಾಗಿತ್ತು. ಇಳಿಯಬೇಕಾದ ಸ್ಟೇಶನ್ ಬಂತೆಂದು ತನ್ನ ಚೀಲವನ್ನು ಸರಿಪಡಿಕೊಂಡೆದ್ದಳು. ●

---

ಆ ದೇಶದಲ್ಲಿ ಮಿತಿಮೀರಿದ ಆಲಸಿಗಳ, ಸ್ವತಃ ದುಡಿದು ತಿನ್ನದೆ, ಬೇರೆಯವರು ದುಡಿದುದ್ದನ್ನು ಕಸಿದು ತಿನ್ನುವ ಜನಗಳು ತುಂಬಿಕೊಂಡಿದ್ದರು. ಆ ದೇಶಕ್ಕೊಬ್ಬ ಸರ್ವಾಧಿಕಾರಿ; ತನ್ನ ದೇಶದಲ್ಲಿ ತುಂಬಿರುವ ಇಂತಹ ಜನರಿಗೆ ಒಂದು ಗತಿ ಕಾಣಿಸಬೇಕೆಂದು ಯೋಚಿಸಿ ಇದಕ್ಕಾಗಿ ಸೈನಿಕರ ಸಭೆ ಕರೆದ. ತುಂಬಿದ್ದ ಸಭೆಯಲ್ಲಿ ಸರ್ವಾಧಿಕಾರಿ ಘೋಷಿಸಿದ:

"ನನ್ನ ನೆಚ್ಚಿನ ಸೈನಿಕರೆ.... ಇದು ನನ್ನ ಆಜ್ಞೆ.... ಇನ್ನು ಮುಂದೆ ಈ ದೇಶದಲ್ಲಿ ಸ್ವತಃ ದುಡಿದು ತಿನ್ನದವರಿಗೆ ಜಾಗವಿಲ್ಲ. ದುಡಿಯಲು ಅರ್ಹರಾಗಿದ್ದೂ, ಬೇರೆಯವರು ದುಡಿದಿದ್ದನ್ನು ತಿನ್ನುವವರನ್ನು ಗುಂಡಿಟ್ಟು ಕೊಂದುಹಾಕಿರಿ...." ಸರ್ವಾಧಿಕಾರಿ ಮಾತು ಮುಗಿಸುವದರೊಳಗಾಗಿ, ಒಬ್ಬ ಸೈನಿಕ ಆ ಸರ್ವಾಧಿಕಾರಿಯನ್ನು ಗುಂಡಿಟ್ಟು ಕೊಂದು ಆಜ್ಞೆ ಪಾಲಿಸಿದ.

● **ಸುರೇಶ್ ವಗ್ಗಾ**

# ಕರ್ನಾಟಕ ಪ್ರಗತಿಪಥದ ಮುಂಚೂಣಿಯಲ್ಲಿ......

ಭಾರತ ದಾಸ್ಯದ ಸಂಕೋಲೆಗಳಿಂದ ಬಿಡುಗಡೆಗೊಂಡು ಈಗ 48 ವರ್ಷಗಳು ಕಳೆದಿವೆ. ಸ್ವಾತಂತ್ರ್ಯಾನಂತರದ ಅವಧಿಯಲ್ಲಿ ಎಲ್ಲ ಕ್ಷೇತ್ರಗಳಲ್ಲೂ ಆಗಿರುವ ಪ್ರಗತಿ ಅಪಾರ. ದೇಶದ ಮುನ್ನಡೆಯ ಹಾದಿಯಲ್ಲಿ ಹೆಜ್ಜೆ ಹಾಕುತ್ತಿರುವ ಕರ್ನಾಟಕದಲ್ಲಿ ಅರ್ಥಪೂರ್ಣ ಅಭಿವೃದ್ಧಿಗೆ ಬದಲಾವಣೆಯ ಹೊಸ ಗಾಳಿ ಪಸರಿಸುತ್ತಿದೆ. ರಾಜ್ಯ ಸರ್ಕಾರದ ಆಡಳಿತ ಚುಕ್ಕಾಣಿ ಹಿಡಿದಿರುವ ಮಾನ್ಯ ಮುಖ್ಯಮಂತ್ರಿ ಶ್ರೀ ಎಚ್.ಡಿ. ದೇವೇಗೌಡರವರ ದಕ್ಷ ಮುಂದಾಳತ್ವದಲ್ಲಿ ಪ್ರಗತಿಯ ಹೊಸ ಅಧ್ಯಾಯ ಆರಂಭವಾಗಿದೆ. ದಕ್ಷ ನೀತಿಪೂರ್ಣ ಆಡಳಿತದಿಂದ ಜನತೆಯ ಸರ್ವಾಂಗೀಣ ಅಭಿವೃದ್ಧಿಗೆ ಸರ್ಕಾರ ಕಂಕಣ ಬದ್ಧ.

<u>ಜನತಾ ದರ್ಶನ</u>: ಜನರ ಮನೆಬಾಗಿಲಿಗೇ ಸರ್ಕಾರವನ್ನು ಕೊಂಡೊಯ್ಯಲು ಮಾನ್ಯ ಮುಖ್ಯಮಂತ್ರಿ ಶ್ರೀ ಹೆಚ್.ಡಿ. ದೇವೇಗೌಡ ಅವರು ನಿಯೋಜಿಸಿರುವ ಅನುಪಮ ಕಾರ್ಯಕ್ರಮ 'ಜನತಾದರ್ಶನ' ಕರ್ನಾಟಕದ ನಾನಾ ಮೂಲೆಗಳಲ್ಲಿ ವಾಸಿಸುತ್ತಿರುವ ಜನರು ತಮ್ಮ ಕುಂದುಕೊರತೆಗಳ ಪರಿಹಾರಕ್ಕಾಗಿ ಈಗ ವಿಧಾನಸೌಧಕ್ಕೆ ಬರಬೇಕಾಗಿಲ್ಲ. ಮುಖ್ಯಮಂತ್ರಿಗಳೇ ಖುದ್ದಾಗಿ ಜಿಲ್ಲಾ ಕೇಂದ್ರಗಳಿಗೆ ಭೇಟಿಯಿತ್ತು, ಅವರ ಸಮಸ್ಯೆಗಳಿಗೆ ಪರಿಹಾರ ಒದಗಿಸುವ ಈ ಕಾರ್ಯಕ್ರಮದಿಂದ ಪ್ರಗತಿಪರ ಕಾರ್ಯಕ್ರಮಗಳ ಸರಾಗ ಅನುಷ್ಠಾನವನ್ನು ಪರಿಶೀಲಿಸಲು ಅವಕಾಶ.

<u>ಬರ ಪರಿಹಾರ</u>: ರಾಜ್ಯದ 106 ತಾಲ್ಲೂಕುಗಳಲ್ಲಿ ಸಕಾಲದಲ್ಲಿ ಮಳೆ ಆಗದ ಶೇ. 60-70 ರಷ್ಟು ಜಮೀನಿನಲ್ಲಿ ಕೃಷಿ ಕಾರ್ಯ ಆರಂಭವಾಗಿಲ್ಲ. ಬರ ಪರಿಹಾರ ಕಾರ್ಯಕ್ರಮಗಳಿಗೆ ಸರ್ಕಾರ ಈವರೆಗೆ ಮಾಡಿರುವ ವೆಚ್ಚ ರೂ. 44.86 ಕೋಟಿ. ಈ ಕಾರ್ಯಕ್ರಮದನ್ವಯ ಕುಡಿಯುವ ನೀರು ಪೂರೈಕೆ ಮತ್ತು ಉದ್ಯೋಗ ಸೃಷ್ಟಿಗೆ ಆದ್ಯತೆ. ಅಲ್ಲದೆ, ಕೇಂದ್ರದಿಂದ ರೂ. 250 ಕೋಟಿ ಮಂಜೂರಾತಿಗೆ ಸರ್ಕಾರದ ಮನವಿ.

<u>ವಿದ್ಯಾಭ್ಯಾಸ</u>: ಪ್ರಾಥಮಿಕ ವಿದ್ಯಾಭ್ಯಾಸವನ್ನು ಕಡ್ಡಾಯಗೊಳಿಸಲೋಸುಗ ಪ್ರಥಮ ಹೆಜ್ಜೆಯಾಗಿ 12,000 ಶಾಲಾ ಕೊಠಡಿಗಳ ನಿರ್ಮಾಣ. 18,500 ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿ.

ಬಿ.ಇಡಿ. ಟಿ.ಸಿ.ಎಚ್. ವಿದ್ಯಾಸಂಸ್ಥೆಗಳಲ್ಲಿ ಕರ್ನಾಟಕದ ವಿದ್ಯಾರ್ಥಿಗಳಿಗೆ ಮನ್ನಣೆ ದೊರೆಯುವಂತೆ ಪ್ರವೇಶ ನೀತಿಯ ತಿದ್ದುಪಡಿ.

ಪಾಲಿಟೆಕ್ನಿಕ್‌ಗಳಲ್ಲಿ ಮಹಿಳೆಯರಿಗೆ ಶೇ. 30 ಮೀಸಲಾತಿ.

ಸಂಗೀತ ಶಿಕ್ಷಕರಾಗಿ ಅರ್ಹ ಅಂಧ ಅಭ್ಯರ್ಥಿಗಳ ಆಯ್ಕೆ.

<u>ಕುಡಿಯುವ ನೀರಿನ ಸೌಲಭ್ಯ</u>: ಗ್ರಾಮೀಣ ಪ್ರದೇಶಗಳಿಗೆ ತ್ವರಿತವಾಗಿ ಕುಡಿಯುವ ನೀರು ಪೂರೈಸಲು ರೂ. 96.50 ಕೋಟಿ ಬಿಡುಗಡೆ. <u>ಉದ್ಯೋಗ ಸೃಜನೆ</u>: ಕೃಷಿ ಕಾರ್ಮಿಕರು, ಸಣ್ಣ, ಅತಿ ಸಣ್ಣ ರೈತರಾದಿ ಉದ್ಯೋಗಾಪೇಕ್ಷಿಗಳಿಗಾಗಿ ವಿವಿಧ ಕಾರ್ಯಕ್ರಮಗಳಡಿ ಹೊಸ ಉದ್ಯೋಗಗಳನ್ನು ಕಲ್ಪಿಸಲು ರೂ. 187 ಕೋಟಿ ಮಂಜೂರು. <u>ರಿಯಾಯಿತಿ ದರದಲ್ಲಿ ಅಕ್ಕಿ</u>: ಕಿಲೋಗೆ ರೂ. 3.20 ದರದಲ್ಲಿ 52,07,379 ಹಸಿರು ಪಡಿತರ ಚೀಟಿದಾರರಿಗೆ ಅಕ್ಕಿ ಸರಬರಾಜು. <u>ನೀರಾವರಿ</u>: ಕೃಷ್ಣಾ ಮೇಲ್ದಂಡೆ ಯೋಜನೆಗಾಗಿ ಈ ವರ್ಷ ಸರ್ಕಾರ ಒದಗಿಸಿರುವ ರೂ. 200 ಕೋಟಿ ಸೇರಿ ಒಟ್ಟು ರೂ. 1000 ಕೋಟಿ ವೆಚ್ಚಕ್ಕೆ ಕ್ರಮ. <u>ಆರೋಗ್ಯ ನಿಧಿ</u>: ಕ್ಯಾನ್ಸರ್, ಹೃದ್ರೋಗ, ಮೂತ್ರ ಸಂಬಂಧಿತ ರೋಗ ಇತ್ಯಾದಿ ಮಾರಕ ರೋಗಗಳಿಂದ ನರಳುತ್ತಿರುವ ಬಡಜನರಿಗೆ ಇದೊಂದು ವರದಾನ. ರೂ. 100 ಕೋಟಿ ನಿಧಿ ಸ್ಥಾಪನೆಯಾಗಿದ್ದು ಈಗಾಗಲೇ ಈ ವರ್ಷ ರೂ. 10 ಕೋಟಿ ಬಿಡುಗಡೆ. <u>ಆಧಾರ</u>: ಅಂಗವಿಕಲರಿಗೆ ಇದೊಂದು ಆಶಾಕಿರಣ. ಮೊದಲಿಗೆ 1000 ಅಂಗಡಿಗಳನ್ನು ಸ್ಥಾಪಿಸಲು ತಲಾ ರೂ. 10000 ಅನುದಾನ. ಇದಕ್ಕಾಗಿ 1 ಕೋಟಿ ರೂ. ಮಂಜೂರು. ಅಂಗವಿಕಲರ ಸೇವೆಯಲ್ಲಿ ನಿರತವಾಗಿರುವ ಸ್ವಯಂ ಸೇವಾ ಸಂಸ್ಥೆಗಳಿಗೂ ರೂ. 50 ಲಕ್ಷ ಅನುದಾನ. <u>ಸ್ವಶಕ್ತಿ</u>: ವಿಧವೆಯರಿಗೆ, ಅನಾಥ ಮಹಿಳೆಯರಿಗೆ ಇದೊಂದು ಊರುಗೋಲು. 'ಮನೆಬೆಳಕು' ಕಾರ್ಯಕ್ರಮದಡಿ ಆಪತ್ತಿನಲ್ಲಿರುವ ಮಹಿಳೆಯರ ಉದ್ಧಾರಕ್ಕಾಗಿ ರೂ. 60 ಲಕ್ಷ ಅನುದಾನ. ಪರಿಶಿಷ್ಟ ವರ್ಗ, ಜಾತಿಗಳವರಿಗೂ ಮತ್ತು ಅಲ್ಪಸಂಖ್ಯಾತ ವರ್ಗದವರಿಗಾಗಿಯೂ ವಿಶೇಷ ಕಾರ್ಯಕ್ರಮಗಳು. ಮಂಗಳೂರು, ಮೈಸೂರು, ಗುಲ್ಬರ್ಗಾ ಮತ್ತು ವಿಜಾಪುರ ಜಿಲ್ಲೆಗಳಲ್ಲಿ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಗೆ 5 ವಸತಿ ಶಾಲೆಗಳ ನಿರ್ಮಾಣ.

<u>ಈದ್ಗಾ ಮೈದಾನ ವಿವಾದಕ್ಕೆ ಶಾಂತಿಯುತ ಇತ್ಯರ್ಥ</u>: ಹುಬ್ಬಳ್ಳಿ ಈದ್ಗಾ ಮೈದಾನದಲ್ಲಿ ಧ್ವಜಾರೋಹಣ ಕುರಿತು ಸರ್ಕಾರ ಸಂಯಮ ಮತ್ತು ಚಾಣಾಕ್ಷತನ ತೋರಿದ್ದರಿಂದ ವಿವಾದಕ್ಕೆ ಶಾಂತಿಯುತ ಇತ್ಯರ್ಥ.

ಕರ್ನಾಟಕ ಇಂದು ದೇಶದಲ್ಲೇ ಮಾದರಿ ರಾಜ್ಯವಾಗಿ ರೂಪುಗೊಳ್ಳುತ್ತಿದೆ.

**ಕೇಂದ್ರ ಅರ್ಥ ಸಚಿವರ ಪ್ರಶಂಸೆ:**

"ಆರ್ಥಿಕವಾಗಿ ಮತ್ತು ಔದ್ಯೋಗಿಕವಾಗಿ ದೇಶದಲ್ಲಿಯೇ 'ಪ್ರಥಮ' ಸ್ಥಾನಕ್ಕೆ ಏರುವ ಎಲ್ಲಾ ಅರ್ಹತೆಗಳೂ ಕರ್ನಾಟಕಕ್ಕೆ ಇದ್ದು, ಮುಖ್ಯಮಂತ್ರಿ ಶ್ರೀ ಹೆಚ್. ಡಿ. ದೇವೇಗೌಡರ ನೇತೃತ್ವದ ಸರ್ಕಾರ ಅದನ್ನು ಸಾಧಿಸುವಲ್ಲಿ ನಮಗೆ ಯಾವುದೇ ಅನುಮಾನವಿಲ್ಲ" – ಡಾ. ಮನಮೋಹನ ಸಿಂಗ್

## "ಜನರಿಗಾಗಿ ದುಡಿತ, ಜನರಿಗಾಗಿಯೇ ಮಿಡಿತ

## 49ನೇ ಸ್ವಾತಂತ್ರ್ಯೋತ್ಸವದ ಶುಭಾಶಯಗಳು

<u>ಕರ್ನಾಟಕ ವಾರ್ತೆ</u>

ವಿಚಾರ

# ಸೆಕ್ಯೂಲರ್ ಮಂತ್ರ: ಹಾಗೆಂದರೇನು?

**ಮನನಾತ್ ತ್ರಾಯತೇ ಇತಿ ಮಂತ್ರಃ**

(ಮನನಮಾಡುತ್ತಿದ್ದರೆ ಕಾಪಾಡುವುದೇ ಮಂತ್ರ)

ವಿಕಾಸಶೀಲ ಭಾಷೆಗೆ ಆಕಾಶವೇ ಮಿತಿ. ಅದು ತನ್ನ ಸಂವಹನ ಕ್ರಿಯೆಯನ್ನು ಶಕ್ತವಾಗಿಯೇ ಉಳಿಸಿಕೊಳ್ಳಲು ಏನೆಲ್ಲಾ ಸಾಹಸವನ್ನೂ ಮಾಡೀತು. ಹೊಸ ಪದಗಳನ್ನು ಹುಟ್ಟಿಸಿಕೊಂಡೀತು. ಅಥವಾ ಪರಭಾಷೆಗಳಿಂದ ಪದಗಳನ್ನು ಎರವಲು ಪಡೆದೀತು. ಹೀಗೆ ತನ್ನ ಸದ್ಯದ ಅಥವಾ ದೀರ್ಘಕಾಲೀನ ಅವಶ್ಯಕತೆಯನ್ನು ನೀಗಿಸಿಕೊಂಡೀತು. ಈ ತವಕದಲ್ಲಿ ಎರವಲು ಪದಗಳ (ಅವನ್ನೇನೂ ಹಿಂದಿರುಗಿಸಬೇಕಾಗಿಲ್ಲವಲ್ಲ) ಮೂಲಾರ್ಥಕ್ಕಿಂತ ಭಿನ್ನವೇ ಆದ ಹೊಸ ಅರ್ಥವನ್ನು ಬಳಸಿ ತನ್ನ ಅಗತ್ಯವನ್ನು ಪೂರೈಸಿಕೊಂಡೀತು.

ಇಂತಹ ಜೀವಂತ ಭಾಷೆಗಳಲ್ಲೆಲ್ಲಾ ಹೆಚ್ಚು ಕಂಗೊಳಿಸುವಂಥದೆಂದರೆ ಇಂಗ್ಲಿಷ್ ಮಾತ್ರ. ಅದರ ಪದ ಭಾಂಡಾರದ ಗಣನೀಯ ಭಾಗ ಪರಭಾಷೆಗಳ ನೆರವಿನಿಂದಾದುದು. ಹಾಗೆ ಪದಸಹಾಯ ಮಾಡಿದ ಭಾಷೆಗಳಲ್ಲಿ ನಮ್ಮ ನಾಡಿನ ಭಾಷೆಗಳೂ ಸೇರಿವೆ. ಹಿಂದಿನವನ್ನು ಬಿಡಿ. ಕಳೆದ ಕಾಲು ಶತಮಾನದಲ್ಲಿ ಅದು ಸಂಸ್ಕೃತದಿಂದ ಹೀರಿಕೊಂಡು ತನ್ನದಾಗಿಸಿಕೊಂಡ ಪದಗಳೆಂದರೆ, ಗುರು, ಅವತಾರ, ಪಂಡಿತ, ಮಾಯ, ಮಂತ್ರ, ಇತ್ಯಾದಿ, (ಇತ್ಯಾದಿ, ಬಿಟ್ಟು)

ಹಿಂದೂ ಧರ್ಮದಲ್ಲಿ ಮಂತ್ರ ಶಬ್ದದ ಧಾರ್ಮಿಕ ಅರ್ಥ ಶ್ರದ್ಧೆ ವಿಶ್ವಾಸ. ಸಂದರ್ಭಗಳೇನೇ ಇರಲಿ, ಇದಾವುದೂ ಇಲ್ಲದ ಧರ್ಮಾತೀತ ಅರ್ಥವನ್ನು ಅದಕ್ಕೆ ಆರೋಪಿಸಿ ಬಳಸಬಾರದೇಕೆ? ತಪ್ಪೇನು? ಆದರೆ ಅವುಗಳ ನಿಜಾರ್ಥಕ್ಕಿಂತ ಅನ್ವಯಿತ ಅರ್ಥದಲ್ಲಿ ಸ್ವಾತಂತ್ರ್ಯವಹಿಸುವ ಧೋರಣೆಯಿಂದಾಗಿ ಯಾವ ಪರಿಣಾಮವಾಗಬಹುದೆಂಬುದನ್ನು 'ಮಂತ್ರ' ಶಬ್ದದ ಮುಖಾಂತರ ನೋಡೋಣ.

"ಸಾಧಿಸಬಲ್ಲೆನೆಂಬ ಪುಟ್ಟ ಎಂಜಿನ್"

• ವಿ. ನರಹರಿ

ವಿಷಯ ನಿಮಗೆ ಗೊತ್ತೋ? ದೊಡ್ಡ ರೈಲನ್ನು ಪರ್ವತದ ತುದಿಗೆ ಹಳಿಗಳ ಮೇಲೆ ದೊಡ್ಡ ಎಂಜಿನ್‌ಗಳೇ ಎಳೆಯಲಾಗದಾದಾಗ ಪುಟ್ಟ ಎಂಜಿನ್ನೊಂದು ಎಳೆದುಬಿಟ್ಟ ಕತೆಯಿದು. ಆ ಪುಟಾಣಿ ಎಂಜಿನ್ ಉಸ್ಸೆಂದು, ಭಕ್ಕೆಂದು, ಝುಕ್ಕೆಂದು ಏದುಸಿರು ಬಿಡುತ್ತಾ ತನ್ನ ಉಕ್ಕಿನ ನರಗಳನ್ನು ಬಿಗಿಗೊಳಿಸಿಕೊಂಡು, "ಐ ಥಿಂಕ್ ಐ ಕ್ಯಾನ್, ಐ ಥಿಂಕ್ ಐ ಕ್ಯಾನ್, ಐ ಥಿಂಕ್ ಐ ಕ್ಯಾನ್" ಎಂದು ಲೊಟಗುಟ್ಟುತ್ತಾ ಪರ್ವತದ

ತುದಿಗೆ ರೈಲನ್ನು ಎಳೆದೇ ಬಿಟ್ಟಿತಲ್ಲಾ! ಸಕ್ರಿಯವಾದ "ಸೆಕ್ಯೂಲರ್ ಮಂತ್ರ" ಕ್ಕೆ ಇದೊಂದು ಹೇಳಿ ಮಾಡಿಸಿದ ಉದಾಹರಣೆ. ಯಂತ್ರಶಕ್ತಿಗೆ ಮಂತ್ರ ಶಕ್ತಿಯ ಕಾಣಿಕೆ.

ನೀವು ಈಗಾಗಲೇ ಇಂತಹ ಸೆಕ್ಯೂಲರ್ ಮಂತ್ರದ ಬಳಕೆಯನ್ನು ಪ್ರಾಯಶಃ ಮಾಡಿರಬಹುದು. ಇದು ಯಾವುದೋ ಒಂದು ಪದ ಅಥವಾ ಪದಪುಂಜವಾಗಿದ್ದು ನೀವು ಅದನ್ನು ಮತ್ತೆ ಮತ್ತೆ ಪ್ರಜ್ಞಾಪೂರ್ವಕವಾಗಿ ಹೇಳುತ್ತಿದ್ದರೆ ನಿಮಗೆ ನಿಮ್ಮ ಶಕ್ತಿಯನ್ನು ಬಳಸಲು ಅದು ನೆರವಾಗುತ್ತದೆ. ಒಂದು ರೀತಿಯಲ್ಲಿ 'ಶಕ್ತಿಮೀರಿ' ಎಂಬ ಶಬ್ದವೇ ಅರ್ಥರಹಿತ. 'ಯಥಾನುಶಕ್ತಿ'ಯೇ ಹೆಚ್ಚು ಸರಿಯಲ್ಲವೇ?

ಮೊದಲನೆಯದಾಗಿ, ಸೆಕ್ಯೂಲರ್ ಮಂತ್ರವು ನೀವು ಸುಮ್ಮನೇ ನಿಮಗೇ ಹೇಳಿಕೊಂಡು ಬಿಡುವ ಒಂದು ಪದವಾಗಲೀ ಅಥವಾ ಒಂದು ವಾಕ್ಯಭಾಗವಾಗಲೀ ಅಲ್ಲ. ಅದು ನಿಮಗೆ ನಿಮ್ಮ ಶಕ್ತಿಯನ್ನು ಬಳಸಲು ನೆರವಾಗಬೇಕು. "ನಾನು ನನ್ನ ಮನೆಯಲ್ಲಿದ್ದರೆ" ಎಂದು ಸುಮ್ಮನೆ ನೀವು ಯೋಚಿಸಿದಾಕ್ಷಣ ಅದು ಸೆಕ್ಯೂಲರ್ ಮಂತ್ರವಾಗುವುದಿಲ್ಲ, ಆದರೆ ಈ ವಾಕ್ಯವು ಸೆಕ್ಯೂಲರ್ ಮಂತ್ರ ಹೇಗಾಗುತ್ತದೆಯೆಂದರೆ ಒಂದು ಚಳಿಯ ದಿನ ನೀವು ಮನೆಯೆಡೆಗೆ ನಡೆಯುತ್ತಾ ಪ್ರತಿ ಹೆಜ್ಜೆ ಇಟ್ಟಾಗಲೂ ಹೆಚ್ಚು ಬೇಗ ಮನೆ ಸೇರಬೇಕೆಂದು ಹೇಳತೊಡಗಿದಾಗ, ನೀವು ಅದನ್ನು ಪುನರಾವರ್ತನೆ ಮಾಡುತ್ತಿದ್ದರೆ ಮಾತ್ರ. ಅದೇ ಧಾಟಿಯಲ್ಲಿ ಹೇಳುವುದಾದರೆ, ಕೆಲಸದ ಹೊರೆಯನ್ನು ನಿಭಾಯಿಸಲು ನೀವು ಉದ್ಗರಿಸುವ ಪ್ರತಿಯೊಂದು ಪದವೂ ಸೆಕ್ಯೂಲರ್ ಮಂತ್ರವಾದೀತು. ಆದರೆ ನೀವು ಗಮನ ನೀಡದೆ ಉಚ್ಚರಿಸುವ ಪದಗಳೆಲ್ಲಾ ಶಕ್ತಿಹೀನ ಮಾತಾದೀತು.

ಎರಡನೆಯದಾಗಿ, ಸೆಕ್ಯೂಲರ್ ಮಂತ್ರವು ಕೇವಲ ನಿಮ್ಮ ಸಾಮರ್ಥ್ಯವನ್ನು ಬಳಸಲು ನಿಮಗೆ ನೆರವಾಗುತ್ತದೆ. ಅದು ಶಕ್ತಿಯನ್ನು ಉತ್ಪಾದನೆ ಮಾಡುವುದಿಲ್ಲ. ಉದಾಹರಣೆಗೆ, ಆ ಪುಟ್ಟ ಎಂಜಿನ್‌ಗೆ ರೈಲನ್ನು ಪರ್ವತದ ಮೇಲೆಳೆಯಲು ಸಾಲುವಷ್ಟು ಶಕ್ತಿಯೇನೋ ತಂತಾನಾಗಿಯೇ ಇದ್ದು ಯಾವುದರ ನೆರವಿಲ್ಲದೆಯೂ ಎಳೆದು ಬಿಡಬಹುದಿತ್ತು. ಆದರೆ 'ಐ ಥಿಂಕ್ ಐ ಕ್ಯಾನ್' ಎಂದು ಪಟಗುಟ್ಟಿದ್ದು ಅದರ ಕೆಲಸವನ್ನು ಹೇಗೋ ಸುಲಭ ಮಾಡಿತಲ್ಲವೇ? "ಎಡ-ಬಲ-ಎಡ" ಎಂದೆನ್ನುತ್ತಿದ್ದರೆ ಕವಾಯತು ಮಾಡುವುದು ಸುಲಭವೆನಿಸುವುದಿಲ್ಲವೇ ಹಾಗೆ. ನೀವು ಉದ್ದೇಶಪೂರ್ವಕವಾಗಿ ಉಚ್ಚರಿಸತೊಡಗಿದರೆ ನಿಮ್ಮ ಕ್ರಿಯೆಗೆ ಮಾಂತ್ರಿಕವಾಗಿ ನೆರವಾಗುವಂತೆ ತೋರುವ ಅಂತಹ ಯಾವುದೇ ಒಂದು ಪದ ಅಥವಾ ವಾಕ್ಯಖಂಡವೇ ಸೆಕ್ಯೂಲರ್ ಮಂತ್ರ.

ಈ ತೋರಿಕೆಯ ಯಕ್ಷಿಣಿ ಪರಿಣಾಮವನ್ನು (ನಿಜಾರ್ಥದಿಂದ ಭಿನ್ನವಾಗಿ) ಎತ್ತಿ ಹೇಳಲೆಂದೇ ಸೆಕ್ಯೂಲರ್ ಮಂತ್ರವೆಂಬ ವಿಚಿತ್ರನಾಮದಿಂದ ಈ ಉದ್ಗಾರಗಳನ್ನು ಕರೆದದ್ದು.

"ಮಂತ್ರ" ಎಂದರೆ "ಪವಿತ್ರ ಸಲಹೆ" ಎಂದು ಸಂಸ್ಕೃತ ಅರ್ಥ. ಹಿಂದೂ ಧರ್ಮದಲ್ಲಿ ಈ ಪದವು "ಪ್ರಾರ್ಥನೆ ಅಥವಾ ಮೋಡಿಯ ಒಂದು ಗೂಢಾರ್ಥವುಳ್ಳ ಒಂದು ಸೂತ್ರ," ಎನ್ನುತ್ತದೆ ವೆಬ್‌ಸ್ಟರ್ ನಿಘಂಟು. ಹಿಂದೂ ಪುರಾಣಗಳ ಪ್ರಕಾರ ಆದಿಪುರುಷನಾದ ಮನುವು ಮಾನವರಿಗೆ ಪ್ರತಿಯೊಂದು ವಿಷಯ, ವಸ್ತುವಿಗೆ ಚಿಂತನ ರೂಪವನ್ನು ಬೋಧಿಸಿ ಮೊದಲ ಭಾಷೆಯನ್ನು ಸೃಷ್ಟಿಸಿದನು. ಉದಾಹರಣೆಗೆ: ನಾವು ಈಗ 'ನೀರು' ಎಂದು ಕರೆಯುವ ವಸ್ತುವನ್ನು ಅವನು ಅವರಿಗೆ "ವಂ" ಎನ್ನಲು ತಿಳಿಸಿದನು. ಆದರೆ ಮಾನವರು ಮನುವು ಹೇಳಿದ ಬಹುತೇಕ ಚಿಂತನ ರೂಪಗಳನ್ನು ಬದಲಾಯಿಸಿಕೊಂಡರು ಅಥವಾ ಮರೆತು ಬಿಟ್ಟರು. ಹಿಂದೂ ಧರ್ಮದ ಅನುಯಾಯಿಗಳು ಮಂತ್ರಗಳನ್ನು ನಂಬುತ್ತಾರೆ. ದೇವತೆಗಳಿಂದ ಋಷಿಗಳಿಗೆ ಪರಿಚಯಿಸಲಾದ ಈ ಪುರಾತನ ಪದ ಸಮುಚ್ಚಯಗಳನ್ನು ಮೌನವಾಗಿಯಾಗಲಿ ಅಥವಾ ಗಟ್ಟಿಯಾಗಿಯಾಗಲಿ ಸೂಕ್ತ ರೀತಿಯಲ್ಲಿ ಪಠಿಸತೊಡಗಿದ್ದೇ ಆದರೆ ನಿರ್ದಿಷ್ಟ ವಸ್ತುಗಳನ್ನು ಅಥವಾ ಅಧಿದೇವತೆಗಳನ್ನು ಬರಮಾಡಿಕೊಳ್ಳಬಹುದು. ಹಿಂದೂಗಳು ಅತಿಮಾನವ ಶಕ್ತಿಗಳಿಗೆ, ರೋಗನಿವಾರಣೆಗೆ, ಮತ್ತಿನ್ನನೇಕ ಉದ್ದೇಶಗಳಿಗೆ ಮಂತ್ರೋಚ್ಚಾರಣೆಯನ್ನು ಮಾಡುತ್ತಾರೆ. ಮೊಳೆಗಳ ಹಾಸಿಗೆಗಳ ಮೇಲೆ ಮಲಗುವ ಬೀದಿ ಬದಿಯ ಸಿದ್ಧರು ನೋವಿಗೆ ಪ್ರತಿರೋಧವೊಡ್ಡಲು "ಓಂ" ಎಂದು

ಪಠಿಸುತ್ತಿರುತ್ತಾರೆ.

ನಾವೀಗ ಚರ್ಚಿಸುತ್ತಿರುವ ಮಂತ್ರಗಳು ಸೆಕ್ಯೂಲರ್. ಏಕೆಂದರೆ ಹಿಂದೂಗಳಂತೆ ಅವುಗಳನ್ನು 'ದೇವ ನಿಯೋಜಿತ'ವೆನ್ನುವುದಿಲ್ಲ. ಬದಲಿಗೆ ಅವನ್ನು ನಾವು ರೂಢಿಯಿಂದ ಪಡೆಯುತ್ತೇವೆ, ಇಲ್ಲವೆ ಒಂದು ಸಂದರ್ಭಕ್ಕೆ ಹೊಂದಿಕೊಳ್ಳುವಂತೆ ಅದನ್ನು ಹುಟ್ಟುಹಾಕುತ್ತೇವೆ, ಆ ಪುಟ್ಟ ಎಂಜಿನ್ ಮಾಡಿದಂತೆ. ಅವು ದಿವ್ಯಶಕ್ತಿಯಿಂದೇನೂ ಕಾರ್ಯ ಸಾಧಿಸುವುದಿಲ್ಲ. ಆದರೆ ನಮ್ಮ ಕೇಂದ್ರ ನರಮಂಡಲದುದ್ದಕ್ಕೂ ಸಂದೇಶ ಪ್ರಸರಣಗಳನ್ನು ನಿಭಾಯಿಸಲು ಒಂದು ರೀತಿಯಲ್ಲಿ ಅವು ನಮಗೆ ನೆರವಾಗುತ್ತವೆ.

"ಸೆಕ್ಯೂಲರ್ ಮಂತ್ರ"ಗಳು ನಮಗೆ ಒಂದು ರೀತಿಯ ದ್ವಿವಿಧ ಸಂದೇಶ (ಅದನ್ನು ಹಿಗ್ಗಿಸುವ ಮತ್ತು ಕುಗ್ಗಿಸುವ) ಸಾಮರ್ಥ್ಯವನ್ನು ಮಿದುಳಿಗೆ ನೀಡುತ್ತವೆ. ಅವನ್ನು ಮತ್ತೆ ಮತ್ತೆ ಉಚ್ಚರಿಸುವ ಕ್ರಿಯೆಯು ಸಂದೇಶ ಅಥವಾ ಆವೇಗ (ಹುರುಪು)ಗಳನ್ನು ನಮ್ಮ ನರಗಳಲ್ಲಿ ಹೆಚ್ಚಿನ ಶಕ್ತಿಯಿಂದ ತಳ್ಳುತ್ತದೆ ಅಥವಾ ನಾವು ಬಹುಶಃ ಅಲಕ್ಷಿಸಿಬಿಡುವ ಒಳಬರುವ ಸಂದೇಶಗಳನ್ನು ತಡೆಯುತ್ತವೆ. ಆಗ ನಾವು ಹೆಚ್ಚು ಸುಲಭವಾಗಿ ಕಾರ್ಯಗಳನ್ನು ಮಾಡಬಹುದು ಅಥವಾ ನಾವು ಅಪೇಕ್ಷಿಸಿದ ರೀತಿಯಲ್ಲಿ ನಿರ್ವಹಿಸಲು ಅಡ್ಡಿಪಡಿಸುವ ಒತ್ತಡವನ್ನು ನಿಭಾಯಿಸಬಹುದು. ನಾವು ಈ ಎರಡೂ ಪರಿಣಾಮಗಳನ್ನು ಒಮ್ಮೆಲೇ ಸಾಧಿಸಿಯೂ ಬಿಡಬಹುದು. ಉದಾಹರಣೆಗೆ, ವಿಮಾನದಿಂದ ಜಿಗಿಯುವವನು "ಜೆರೆನಿಮೋ" ಎಂದು ಅರಚಿಕೊಳ್ಳಬಹುದು- ತನ್ನ ಕಾಲುಗಳಿಗೆ "ಧುಮುಕಿ" ಎಂದು ನೀಡುವ ಸಂದೇಶಗಳನ್ನು ಹಿಗ್ಗಿಸಲು ಮತ್ತು ತಲೆ ತಿರುಗುತ್ತಿದೆ ಅಥವಾ ಗಾಬರಿಯಾಗಿದೆ ಎಂಬ ಸಂದೇಶವನ್ನು ಕುಗ್ಗಿಸಲು.

ಯಾವುದೇ ಕಾರ್ಯವನ್ನು ಸ್ವತಃ ಮಾಡಲು ನೆರವಾಗಿಸಿಕೊಳ್ಳುವ ದಿಶೆಯಲ್ಲಿ ನಮ್ಮಲ್ಲಿ ಯಾರು ಬೇಕಾದರೂ ಯಾವ ಪದಗಳನ್ನಾದರೂ ಈ ರೀತಿಯಾಗಿ ಬಳಸಬಹುದು.

ಮಗನು ಕಾರನ್ನು ಗುದ್ದಿಸಿ ನೆಗ್ಗು ಮಾಡಿಕೊಂಡು ಬಂದುದನ್ನು ಕಂಡಾಗ ತಂದೆ ತಾನು ಆಸ್ಫೋಟಗೊಳ್ಳುವುದನ್ನು ತಡೆದುಕೊಳ್ಳಲು ೧, ೨, ೩, ಎಂದು ೧೦ರವರೆಗೆ ಅವಡುಗಚ್ಚಿ ಫೂತ್ಕರಿಸಬಹುದು. ತಪ್ಪಾಗಿ ಆಡುವ ಟೆನ್ನಿಸ್ ಆಟಗಾರನು ತನಗೇ "ಥತ್ ತೇರಿಕಿ" ಎಂದು ಛೀಮಾರಿ ಹಾಕಿಕೊಂಡು, ಹೆಚ್ಚು ಗಮನವನ್ನು ಕೇಂದ್ರೀಕರಿಸಿ, ಚೆಂಡನ್ನು ನಿರ್ದೇಶಿಸಬಹುದು. ಟೆನ್ನಿಸ್ ಪಟು ಮೋನಿಕಾ ಸೆಲಿಸ್ ಪ್ರತಿ ಬಾರಿ ಚೆಂಡನ್ನು ತಟ್ಟಿದಾಗಲೂ 'ಆವ್' ಎಂದೊರಲುತ್ತಿದ್ದುದು ಪ್ರಸಿದ್ಧವಾಗಲಿಲ್ಲವೆ? ಜೋಂಪು ಹಿಡಿದ ತಾಯಿಯು ತನ್ನ ಅಳುವ ಮಗುವಿನೊಂದಿಗೆ ಹೆಜ್ಜೆ ಹಾಕುತ್ತಾ, "ನಿನಗೂ ಮುಂದೆ ಮಕ್ಕಳಾಗುತ್ತವೆ" ಎಂದುಕೊಳ್ಳುತ್ತಾ ತ್ರಾಸನ್ನು ಕಡಿಮೆ ಮಾಡಿಕೊಳ್ಳುವುದಿಲ್ಲವೇ? ವಿದ್ಯುತ್ ಕಂಬ ನಿಲ್ಲಿಸುವಾಗ ಅಥವಾ ಭಾರೀ ದಿಮ್ಮಿಯನ್ನು ಟ್ರಕ್ಕಿಗೆ ಹೇರುವಾಗ ಕೆಲಸಗಾರರು "ಐಸ್ಸಾಃ" ಎಂದು ಒಕ್ಕೊರಲಿನಿಂದ ಒದರುವುದಿಲ್ಲವೇ?

ನೀವು ಈಗಾಗಲೇ ನಿಮಗೆ ಪ್ರಿಯವಾದ ಸೆಕ್ಯೂಲರ್ ಮಂತ್ರವನ್ನು ಹೊಂದಿರಬಹುದು. ಅದರ ಬಗೆಗೆ ಯೋಚಿಸಿ ನೋಡಿ. ಚಳಿಗಾಲದ ಬೆಳಿಗ್ಗೆ ಬೆಚ್ಚನ್ನ ಹಾಸಿಗೆ ಬಿಟ್ಟೇಳಲು ನಿಮ್ಮನ್ನು ನೀವೇ ಒತ್ತಾಯಪಡಿಸಲು ನೀವು ಉದ್ಗಾರ ತೆಗೆಯುವ ಪದಸಮೂಹ ಯಾವುದು? ವಾಹನ ಸಂಚಾರ ನಿಯಂತ್ರಣ ದೀಪಗಳು ಎಷ್ಟು ಹೊತ್ತಾದರೂ ಬದಲಾಗದಿದ್ದರೆ ನೀವು ಅಸಹನೆಯಿಂದ ಬಿಡುಗಡೆ ಹೊಂದಲು ಪಠಿಸುವ ಪದಗಳಾವುವು? ಅಂಗಡಿಯಿಂದ ಮರೆಯದೆ ಅಕ್ಕಿಯನ್ನು ತರಲು ನೀವು ನೆನಪಿಟ್ಟುಕೊಳ್ಳುವ ಕ್ರಮವೇನು?

ಇದೀಗ ನಿಮಗೆ ಮಂತ್ರದ ಸೆಕ್ಯೂಲರ್ ಬಳಕೆ ಅರ್ಥವಾಗಿರಬಹುದು. ಅಂತಹ ಮಂತ್ರ ಶಕ್ತಿಯ ಮಾತುಗಳಿಂದ ನಿಮ್ಮ ಜೀವನವು ಎಷ್ಟು ಕಡಿಮೆ ನೋವಿನದು ಮತ್ತು ಕಡಿಮೆ ನಿರಾಶೆಯದಾಗಿದೆ ಎಂಬುದನ್ನು ಮನಗಂಡೀರಿ. ನಿಮಗೆ ಸೆಕ್ಯೂಲರ್ ಮಂತ್ರಗಳ ಬಗೆಗೆ ಇನ್ನೂ ಮನವರಿಕೆಯಾಗದಿದ್ದರೆ ಒಂದು ದಿನ ಅಂತಹದೊಂದನ್ನೂ ಬಳಸದೆ ದಿನಪೂರ್ತಿ ಕಳೆಯಲೆತ್ನಿಸಿ. ಆ ದಿನವು ಬಲು ದೀರ್ಘವಾದ, ಅಸಹನೆ ಮತ್ತು ಆಶಾಭಂಗಗಳ ದಿನವಾದರೆ ನಮ್ಮನ್ನು ಮಾತ್ರ ಜರೆಯಬೇಡಿ.

ದುರ್ಭರ ಬದುಕನ್ನು ಸಹನೀಯವಾಗಿಸುವ ಸೆಕ್ಯೂಲರ್ ಮಂತ್ರಕ್ಕೆ ಜಯವಿರಲಿ ಸದಾ. ●

# 'ರೊಟ್ಟಿ-ಕಾರ'

• ಪ್ರೊ. ಎನ್.ಜಿ. ಕಾರಜೋಳ

೧೯೫೭ರ ಜೂನ್ ತಿಂಗಳಲ್ಲಿ ಅದೇ ಹೊಸದಾಗಿ ಧಾರವಾಡ ಸರಕಾರಿ ಟ್ರೇನಿಂಗ್ ಕಾಲೇಜಿನಲ್ಲಿ ಶಿಕ್ಷಕನಾಗಿ ಸೇರಿದ್ದ ನನಗೆ ಮೂರೇ ತಿಂಗಳಲ್ಲಿ, ಪಕ್ಕದ ಕಂಪೌಂಡಿನಲ್ಲಿಯ ಹೆಣ್ಣುಮಕ್ಕಳ ಸರಕಾರಿ ಹೈಸ್ಕೂಲಿಗೆ (ಅದೀಗ ಯುನಿವರ್ಸಿಟಿ ಪಬ್ಲಿಕ್ ಸ್ಕೂಲ್) ವರ್ಗವಾಗಿತ್ತು. ವರಕವಿ ಬೇಂದ್ರೆಯವರ ಮಗಳು ಮಂಗಲಾ ಅಲ್ಲಿ ೧೧ನೇ ವರ್ಗದ ವಿದ್ಯಾರ್ಥಿನಿ.

ಅದೇ ವರುಷ ಕವಿವರ್ಯ ಬೇಂದ್ರೆಯವರ "ಷಷ್ಟಬ್ದಿ ಪೂರ್ತಿ" ಸಮಾರಂಭವೂ ಅದೇ ಶಾಲೆಯಲ್ಲಿ ಏರ್ಪಾಡಾಗಿತ್ತು. ಸತ್ಕಾರ ಸಮಾರಂಭದಲ್ಲಿ ಬೇಂದ್ರೆಯವರ ಕಾವ್ಯಕೃಷಿಯ ಬಗೆಗೆ ಮಾತನಾಡಲು ಮುಖ್ಯಾಧ್ಯಾಪಿಕೆ ಎಲಿಜಾಬೆಥ್ ಫಿಲಿಯೋಜರಿಂದ ಅವಕಾಶವನ್ನು ಪಡೆದೆ. ಬೇಂದ್ರೆಯವರ ಒಂದೊಂದು ಕವನವನ್ನೂ ಒಂದೊಂದು ರೀತಿಯಾಗಿ ನನ್ನ ಅನುಭವದ ಹಿನ್ನೆಲೆಯಲ್ಲಿ ವಿಮರ್ಶಿಸಿ, ಕೊನೆಗೆ ಅವರ ಒಂದು ಕವನದಲ್ಲಿನ, "ನನ್ನ ಮಗುವಿನ ಮುಚ್ಚಿದ ಮುಟ್ಟಿಗೆಯಲ್ಲಿ ಮೂಲೋಕದ ಭಾಗ್ಯವಡಗಿದೆಯೇ ತೆರೆದು ನೋಡಲೇ, ಬೇಡ, ಭಾಗ್ಯ ಬಂದ ಬಳಿಕ ಕೈ ತೆರೆವುದೇನು ತಡ?" ಎಂದಂದುಕೊಳ್ಳುವ ಒಬ್ಬ ಮಾತೆಯ ಮಾತನ್ನೇ ಹೊರಳಿಸಿ, "ಬೇಂದ್ರೆಯವರ ಹಸ್ತರೇಖೆಯಲ್ಲಿ ಬಯಸಿದ ಭಾಗ್ಯವಡಗಿದೆಯೇ?" ಎಂದು ಹಾಸ್ಯಕ್ಕಾಗಿ ಹೇಳಿದಾಗ ನನ್ನೆಡೆ ನೋಡಿದರು. ನನ್ನ ಮಾತು ಮುಗಿದ ಬಳಿಕ ತಮ್ಮ ಮನೆಗೆ ಬರಲು ಆಮಂತ್ರಿಸಿದರು.

ಒಂದು ರವಿವಾರ ಅವರ ಮನೆಗೆ ಹೋದೆ. ನಗುಮೊಗದಿಂದಲೇ ಸ್ವಾಗತಿಸಿದರು. ನನ್ನ ಅಡ್ಡ ಹೆಸರಿನ ಮೇಲೆ ಮಾತುಕತೆ ಸಾಗಿ, "ಸಿಹಿಯಾದ ಬಿಳಿ ಜೋಳದ ರೊಟ್ಟಿಯ ಮೇಲೆ 'ಕಾರ'ವಿದ್ದಾಗಲೇ ರುಚಿ" ಎಂದು ಹಾಸ್ಯಮಾಡಿ, ಜೀವನದಲ್ಲಿ ಬರುವ ಕಷ್ಟಸುಖ, ಸಿಹಿಕಹಿ ಎರಡನ್ನೂ ಮಧುರತೆಯಲ್ಲೇ ಸವಿಯಬೇಕೆಂದು ನನ್ನ ಅಡ್ಡ ಹೆಸರಿನಲ್ಲಿ ತತ್ವಚಿಂತನೆ ಮಾಡಿದರು. ನಂತರ ಒಂದು ಬೆಳ್ಳಿ ಚಮಚೆಯ ತುಂಬ, ಬೆಳ್ಳಿ ಬಟ್ಟಲದಲ್ಲಿನ ಬೆಳ್ಳಗಿನ ಸಕ್ಕರೆ, ಬೆರೆತ ಒಣಕೊಬ್ಬರಿ ಹೆರಕಲನ್ನು ನನ್ನ ಕೈಯಲ್ಲಿ ಹಾಕಿ, "ಈ ಪರಿಚಯ ಮಧುರ ಸ್ನೇಹವಾಗಲಿ" ಎಂದು ಹಾರೈಸಿ ಬೀಳ್ಕೊಟ್ಟರು. ಸಕ್ಕರೆ ಕೊಬ್ಬರಿಯ ಸಿಹಿ ಹಾಗೂ ಅಷ್ಟೇ ಸಿಹಿ ವ್ಯಕ್ತಿತ್ವದ ಬೇಂದ್ರೆ ನನ್ನ ಮನಸ್ಸಿನಲ್ಲಿ ಸದಾ ತುಂಬಿಕೊಂಡಿರುತ್ತಾರೆ.



ಬೇಂದ್ರೆ ನೆನಪು

# 'ತುಳಸಿ ಮಹಾತ್ಮೆ'

• ಮಾಧವಿ ಡಂಬಳ

೧೯೭೭ರ ಜುಲೈ ೯ ರಂದು ಸ್ನೇಹಿತೆ ಕುಸುಮ ಕುಲಕರ್ಣಿ ಅವರೊಂದಿಗೆ ನಾನು ಮಧ್ಯಾಹ್ನ ಸಾಧನಕೇರಿಯ 'ಶ್ರೀ ಮಾತಾ'ಕ್ಕೆ ಹೋದೆ. ಬೇಂದ್ರೆಯವರನ್ನು ಹಳೇಹುಬ್ಬಳ್ಳಿಯ ಶ್ರೀ ಸಾಯಿ ಸಮಿತಿಯ ವಾರ್ಷಿಕೋತ್ಸವಕ್ಕೆ ಅತಿಥಿಯನ್ನಾಗಿ ಆಹ್ವಾನಿಸುವುದು ನಮ್ಮ ಉದ್ದೇಶ. ಅವರ ಮನೆಗೆ ಹೋದ ಕೂಡಲೆ, ನಮ್ಮನ್ನು ಕಂಡು, "ನೀವು ಬರುತ್ತಿರೆಂದು ತಾಯಿ ನನಗೆ ಬೆಳಿಗ್ಗೆಯೇ ಹೇಳಿದ್ದಾಳೆ. ನಿಮ್ಮ ದಾರಿಯನ್ನೇ ನೋಡುತ್ತಿದ್ದೆ" ಎಂದವರೇ ನಮ್ಮ ಸಮಿತಿಯಲ್ಲಿ ಚರ್ಚಿಸಲ್ಪಟ್ಟ ವಿಷಯವನ್ನೂ ಹೇಳಿ, "ನೀವು ನಿಗದಿಪಡಿಸಿದ ದಿನವೇ ವಾರ್ಷಿಕೋತ್ಸವ ಮಾಡಿರಿ. ತಾಯಿಯ ಆಶೀರ್ವಾದವಿದೆ," ಎಂದು ನಮ್ಮನ್ನು ಸ್ತಂಭೀಭೂತರನ್ನಾಗಿ ಮಾಡಿದರು.

ನಂತರ ತಮ್ಮ ಮನೆಯನ್ನೆಲ್ಲಾ ತೋರಿಸುತ್ತ ನಡೆದರು. ಹಿತ್ತಲಿನ ಗಿಡದಲ್ಲಿ ಒಡಮೂಡಿದ ಗಣಪತಿ ಮೂರ್ತಿಯನ್ನು ತೋರಿಸಿ, ಹಾಗೆಯೇ ತುಳಸಿ ಮಹಾತ್ಮೆಯನ್ನು ವಿವರಿಸಿ ಹೇಳಿದರು. ಸ್ತ್ರೀಯರು ತುಳಸಿ ಆರಾಧನೆಯನ್ನು ಹೇಗೆ ಮಾಡಬೇಕು, ತಮ್ಮ ತಾಯಿ ಮಾಡುತ್ತಿದ್ದ ಪೂಜಾ ವಿಧಿ ವಿಧಾನಗಳೇನು, ತುಳಸಿ ಮಾತೆಯನ್ನು ಆರಾಧಿಸುವವರ ಮೈಯಿಂದ ತುಳಸಿಯ ಸುವಾಸನೆ ಹೊರಸೂಸುತ್ತದೆಂಬುದನ್ನು ತಾವು ಸ್ವತಃ ಕಂಡಿದ್ದನ್ನು ಹೇಳುತ್ತ, "ನನ್ನ ತಾಯಿ ಅಡ್ಡಾಡಿದರೆ ತುಳಸಿ ವಾಸನೆ ಹೊರಹೊಮ್ಮುತ್ತಿತ್ತು. ತುಳಸಿ ಗಿಡ ಒಯ್ಯಿರಿ, ನೀವೂ ಪೂಜೆ ಮಾಡಿರಿ," ಎಂದು ಎದುರಿಗಿದ್ದ ಒಂದು ತುಳಸಿ ಸಸಿಯನ್ನು ನನ್ನ ಸ್ನೇಹಿತೆಗೆ ಕೊಟ್ಟರು. "ನನಗೂ ಒಂದು ಕೊಡಿರಿ" ಎಂದರಾದರೂ ಅಲ್ಲಿ ಬೇರೆ ಸಸಿಯೆ ಇರಲಿಲ್ಲ, ಆದರೂ ಇಡೀ ಹಿತ್ತಲು ಅಡ್ಡಾಡಿ, "ನೋಡು, ತಾಯಿ ಇಲ್ಲಿ ಇದ್ದಾಳೆ," ಎಂದು ಒಂದು ಅತಿ ಚಿಕ್ಕ ತುಳಸಿ ಸಸಿಯನ್ನು ಕಿತ್ತು ನನ್ನ ಕೈಯಲ್ಲಿ ಕೊಟ್ಟರು. "ಪೂಜೆ ಮಾಡು" ಎಂದೆನ್ನುತ್ತ 'ಸೌಂದರ್ಯ ಲಹರಿ'ಯಲ್ಲಿಯ ಕೆಲವು ಶ್ಲೋಕಗಳನ್ನು ನಿತ್ಯವೂ ಪಠಿಸಲು ಉಪದೇಶಿಸಿ, "ಯಾವುದಕ್ಕೂ ಕಾಳಜಿ ಮಾಡಬೇಡಿರಿ. ತಾಯಿಯ ಆಶೀರ್ವಾದ ನಿಮ್ಮನ್ನು ಕಾಯುತ್ತದೆ," ಎಂದರು.

ನಾನೇ ಬರೆದ ಒಂದು ಗುರುಗೀತೆಯನ್ನು ಹಾಡಿದೆ. ತುಂಬ ಸಂತೋಷಪಟ್ಟು ಬೆನ್ನು ತಟ್ಟಿ, "ಚೆನ್ನಾಗಿದೆ, ಬರೆಯುತ್ತಹೋಗು," ಎಂದು ಹರಸಿದರು. ಅವರೊಡನೆ ಕಳೆದ ಮೂರ್ನಾಲ್ಕು ಗಂಟೆಗಳ ನೆನಪುಗಳು ನನಗೆ ಚಿರನೂತನ. ಅವರು ಅಂದು ಕೊಟ್ಟ ಆ ತುಳಸಿಯ ಸಸಿ ಇಂದು ದೊಡ್ಡ ಗಿಡವಾಗಿ ಬೆಳೆದು ನಿಂತು ಬೇಂದ್ರೆಯವರ, ತಾಯಿಯ ಆಶೀರ್ವಾದವನ್ನು ದಯಪಾಲಿಸುತ್ತಿದೆ.

# 'ಬೇಂದ್ರೆ ಬದುಕಿದ್ದು ನಿಮ್ಮಂಥವರಿಂದ'

• ಜೆ.ಎ.ತಿಗಡಿ

ಆ ದಿನ ನನಗೆ ಚೆನ್ನಾಗಿ ನೆನಪಿದೆ. ಸಾಯಂಕಾಲ ೫-೩೦ರ ಸುಮಾರಿಗೆ ವರಕವಿ ಬೇಂದ್ರೆಯವರ 'ಶ್ರೀಮಾತಾ'ದೆದುರು ನಾವು ಮೂವರು ಸ್ನೇಹಿತರು ನಿಂತಿದ್ದೆವು. ಧಾರವಾಡಕ್ಕೆ ಬಂದು ಏಳೆಂಟು ತಿಂಗಳುಗಳು ಉರುಳಿದ್ದರೂ ಕವಿವರ್ಯರನ್ನು ಕಾಣುವುದಾಗಿರಲಿಲ್ಲ, ಬೇಂದ್ರೆಯವರಂಥ ಕವಿಶ್ರೇಷ್ಠರನ್ನು ನೇರವಾಗಿ ಕಾಣಬಹುದೇ? ಕಂಡಾಗ ಹೇಗೆ ಎದುರಿಸುವುದು? ಅಲ್ಲದೇ ನಮ್ಮಂಥ ಸಾಮಾನ್ಯ ವಿದ್ಯಾರ್ಥಿಗಳನ್ನು ಕಂಡು ಮಾತನಾಡಿಸಿಯಾರೆಯೇ? ಅವರು ಮುಂಗೋಪಿಯಂತೆ, ಸಿಡಿಮಿಡಿಗೊಂಡರೆ? ಎಂಬಿವೇ ಹಲವಾರು ಸಂದೇಹಗಳ ಸರಮಾಲೆಯು ಅವರನ್ನು ಕಾಣಬೇಕೆಂಬಾಸೆಗೆ ತಣ್ಣೀರೆರಚುತ್ತಲೇ ಬಂದಿತ್ತು. ಕೊನೆಗೆ ಬೈಸಿಕೊಂಡರೂ ಚಿಂತೆಯಿಲ್ಲ, ಕಂಡು ಬರುವುದೆಂದೇ ತೀರ್ಮಾನಿಸಿ ನನ್ನಿಬ್ಬರು ಸ್ನೇಹಿತರೊಂದಿಗೆ ಹೊರಟಿದ್ದೆ.

ಮನೆಯ ಒಳಾಂಗಣದಲ್ಲಿ ಆರಾಮ

ಕುರ್ಚಿಯ ಮೇಲೆ ಕವಿವರ್ಯರು ಪುಸ್ತಕದಲ್ಲಿ ತಲ್ಲೀನರಾಗಿದ್ದರು. ನಮ್ಮ ಕಾಲ ಸಪ್ಪಳ, ಕೆಮ್ಮುವಿಕೆ ಬೇಂದ್ರೆಯವರನ್ನು ಅಧ್ಯಯನಲೋಕದಿಂದ ಎಚ್ಚರಿಸಿರಬೇಕು. ಅವರು ನಮ್ಮತ್ತ ದೃಷ್ಟಿಹರಿಸಿ ಮುಗುಳ್ನಗೆಯೊಂದನ್ನು ಚೆಲ್ಲಿದರು. ಕೈಮಾಡಿ ಕರೆದು ಸೋಫಾದ ಮೇಲೆ ಕೂಡ್ರಲು ಸೂಚಿಸಿದರು. ಮುದುರಿಕೊಂಡೇ ಕೂತೆವು.

ನಮ್ಮಲ್ಲಿಬ್ಬರು ಕನ್ನಡ ಸಾಹಿತ್ಯಾಭ್ಯಾಸಿಗಳಾಗಿದ್ದರೆ, ಮತ್ತೊಬ್ಬ ಆಂಗ್ಲಭಾಷಾಭ್ಯಾಸಿ. ಮೊದಲು ನಾನು ನನ್ನ ಹೆಸರು, ಊರು ಇತ್ಯಾದಿ ಪರಿಚಯ ಹೇಳಿ, ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಭಾಷೆಯನ್ನು ಅಧ್ಯಯನಮಾಡುತ್ತಿರುವುದಾಗಿ ತುಸು ಹೆಮ್ಮೆಯಿಂದಲೇ ಹೇಳಿದೆ. ಇದನ್ನು ಕೇಳಿದ ಬೇಂದ್ರೆಯವರು, “ಭಾಳಾ ಸಂತೋಷ ಆತು, ನಿಮ್ಮಂಥ ತರುಣರು ಕನ್ನಡ ಭಾಷಾ-ಸಾಹಿತ್ಯದ ಅಧ್ಯಯನ ಮಾಡಬೇಕು, ಅರಿಯಬೇಕು, ತಿಳೀಬೇಕು, ಉಳಿಸಿ-ಬೆಳೆಸಬೇಕು. ಕನ್ನಡ ಭಾಷಾ-ಸಾಹಿತ್ಯಕ್ಕ ಭಾಳ ದೊಡ್ಡ ಪರಂಪರೇನ ಅದ. ನಮ್ಮ ಜನರ ಉಸಿರಾದ ಕನ್ನಡವನ್ನು ಬೆಳೆಸೋದು ಎಲ್ಲಾರ ಕರ್ತವ್ಯ” ಎಂದೆಲ್ಲ ಹೇಳುತ್ತ ನನ್ನ ಹೆಮ್ಮೆಗೆ ತುರಾಯಿಯನ್ನೇ ಸಿಕ್ಕಿಸಿದರು. ನಂತರ ನನ್ನ ಆಂಗ್ಲಭಾಷಾಭ್ಯಾಸಿ ಮಿತ್ರ ತನ್ನ ಪರಿಚಯ ಹೇಳುತ್ತ, ತಾನು ಇಂಗ್ಲೀಷ್ ಸಾಹಿತ್ಯದ ವಿದ್ಯಾರ್ಥಿ ಎಂದು ತಿಳಿಸಿದ. ಕವಿಗಳು ಆತನನ್ನು ಪ್ರೋತ್ಸಾಹಿಸುತ್ತ- “ತಮ್ಮಾ ಇಂಗ್ಲಿಷ್ ಭಾಳ ವಿಶಾಲವಾದ ಭಾಷಾ. ಅದನ್ನೋದಿ ತಿಳಕೊಳ್ಳೋದು ಇಂದ ಭಾಳ ಅವಶ್ಯ ಅದ. ಅದರ ಮೂಲಕ ನಿನ್ನ ಮಾತೃಭಾಷಾನ ಬೆಳೆಸಬೇಕಪ್ಪಾ.... ಹೊರಜಗತ್ತಿನ ಜ್ಞಾನದ ಕಣ್ಣದು....” ಎಂದೆಲ್ಲ ವಿವರಿಸುತ್ತಿದ್ದಂತೆಯೇ ಅವರ ದೃಷ್ಟಿ ನನ್ನ ಇನ್ನೊಬ್ಬ ಮಿತ್ರನ ಕೈಯಲ್ಲಿದ್ದ ‘ಮೇಘದೂತ’ ಸಂಸ್ಕೃತ ಪುಸ್ತಕದತ್ತ ಹರಿಯಿತು. ಇದೇನು ಎಂಬಂತೆ ಕಣ್ಣುಮಿಟುಕಿಸಿದಾಗ ತಾನು ಸಂಸ್ಕೃತವನ್ನು ಇನ್ನೊಂದು ಭಾಷೆಯಾಗಿ (ಮೈನರ್ ವಿಷಯ) ಕಲಿಯುತ್ತಿರುವನೆಂದಾತ ಹೇಳಿದ. ಬೇಂದ್ರೆಯವರ ಮುಖ ಪ್ರಸನ್ನವಾಯಿತು. “ಹೌದಪಾ, ಸಂಸ್ಕೃತ ತುಂಬಾ ಆಳವಾದ ಭಾಷಾ. ಜಗತ್ತಿನ ಭಾಷೆಗಳ ತಾಯಿ ಸ್ಥಾನದಾಗ ನಿಲ್ಲುವಂಥದ್ದು. ಅಂಥಾ ಭಾಷಾದ ಅಧ್ಯಯನ ಅಂದ್ರ ಭಾಳ ದೊಡ್ಡ ಕಾರ್ಯ. ನಮ್ಮ ಹಳಗನ್ನಡ ಕಾವ್ಯದ ಅರ್ಥ ಸ್ಪಷ್ಟ ಆಗಬೇಕಾದ್ರ ಸಂಸ್ಕೃತ ಜ್ಞಾನ ಅತ್ಯವಶ್ಯ ಅದ....” ಎನ್ನುತ್ತ ಅವರು ಕುರ್ಚಿಯಿಂದೆದ್ದು ಸೋಫಾದಲ್ಲಿ ನಮ್ಮ ನಡುವೆ ಬಂದು ಕುಳಿತು ನಮ್ಮ ಹೆಗಲ ಮೇಲ ಕೈ ಹಾಕಿದರು. ನಮಗೊ ಆಪಾದಮಸ್ತಕ ರೋಮಾಂಚನ.

ಆಮೇಲೆ ತಮ್ಮ ಮಾತಿನ ಮೋಡಿಯ ಗಾಡಿಯಲ್ಲಿ ಕೂರಿಸಿಕೊಂಡು ನಮ್ಮನ್ನು ಹೊಸತೊಂದು ಲೋಕಕ್ಕೆ ಕೊಂಡೊಯ್ದರು. ಅವರ ಮುಕ್ತ ಮನದ ಚರ್ಚೆ, ಹಸನ್ಮುಖಿ ಭಾವ, ಆತ್ಮೀಯ ನಡವಳಿಕೆಗಳು ನಮ್ಮಲ್ಲಿದ್ದ ಅಂಜಿಕೆಯನ್ನು ದೂರ ಮಾಡಿದವು.

ಅಷ್ಟರಲ್ಲಿ ನನ್ನ ಸ್ನೇಹಿತ ಬೇಂದ್ರೆಯವರ, “ನನ್ನ ಕೈಯ ಹಿಡಿದಾಕೆ ಅಳು ನುಂಗಿ ನಗು ಒಮ್ಮೆ ನಾನೂನು ನಕ್ಕೇನ....” ಎಂಬ ಭಾವಗೀತೆಯನ್ನು ಸುಶ್ರಾವ್ಯವಾಗಿ ಹಾಡಿದ. ತನ್ಮಯತೆಯಿಂದ ಆಲಿಸುತ್ತಿದ್ದ ಕವಿವರ್ಯರ ಕಣ್ಣು ಹನಿಗೂಡಿತು. “ಭಾಳ ಚೆಂದ ಹಾಡಿದೆಪಾ, ಕಳೆದುಹೋದ ಅನುಭವ ಮರಳಿ ತಂದು ಕೊಟ್ಟೆ, ಇವತ್ತ ಬೇಂದ್ರೆ ಬದಕಿದ್ದಾ ನಿಮ್ಮಂಥವರಿಂದ. ಮುಂದೂನೂ ನಿಮ್ಮಂಥವರಿಂದಾ ಬದಕತಾನ ಬದಕಿರತಾನ,” ಎಂದೆಲ್ಲ ಹೇಳಿದರು. ಬೇಂದ್ರೆಯವರ ಕವಿ ಹೃದಯ, ನಾದಪ್ರಿಯತೆ, ಕಾವ್ಯದಲ್ಲಿ ಕ್ಷಿಪ್ರವಾಗಿ ತನ್ಮಯಗೊಳ್ಳುವ ಭಾವೋತ್ಕಟತೆಗಳು ನಮ್ಮನ್ನು ಬೆರಗುಗೊಳಿಸಿದವು.

ನಾವು ಅಲ್ಲಿಂದ ಹೊರಡುತ್ತ ಅವರ ಕಾಲಿಗೆ ನಮಸ್ಕರಿಸಲು ಮುಂದಾದಾಗ ಒಮ್ಮೆಲೇ ತಡೆಯುತ್ತ “ಛೇ... ಛೇ.... ಮನಸ್ಯಾನ ನಮಸ್ಕಾಗ ಮಾಡಬಾರದು. ಮನಸ್ಯಾನ ಮನಸಿಗೆ ನಮಸ್ಕಾರ ಮಾಡಬೇಕು, ಆತ್ಮಕ್ಕ ವಂದಿಸಬೇಕು....” ಎನ್ನುತ್ತ ಅಲ್ಲಿಟ್ಟಿದ್ದ ರಜಿಸ್ಟರಿನಲ್ಲಿ ನಮ್ಮ ಹೆಸರು ಬರೆದು ಸಹಿ ಮಾಡಲು ಹೇಳಿದರು.

ಆ ಮಹೋನ್ನತ ಕವಿ ಹೃದಯದ ಆತ್ಮೀಯತೆಯನ್ನು ಮನದಲ್ಲಿ ತುಂಬಿಕೊಂಡು ಹೊರಟೆವು. ಕಂಪೌಂಡು ದಾಟಿ ರಸ್ತೆಗಿಳಿದು ‘ಶ್ರೀಮಾತಾ’ದತ್ತ ದೃಷ್ಟಿಹಾಯಿಸಿದಾಗ, “ಆಗಾಗ ಬೇಂದ್ರೇನ ಮನೀಗೆ ಬರ್ರಿಪಾ” ಎಂಬ ಕವಿಯ ಆತ್ಮೀಯ ಕರೆ ನಮ್ಮನ್ನು ಇನ್ನಷ್ಟು ಪುಳಕಿತರನ್ನಾಗಿಸಿತು. ●

ಕಥಾನುವಾದ

# ಮಾನವ ಹುಟ್ಟಿದ

• ಮ. ಗೋರ್ಕಿ

ಕನ್ನಡಕ್ಕೆ: ಪ್ರೊ. ಪಂಚಾಕ್ಷರಿ ಹಿರೇಮಠ

ಇದು ಸನ್ ಹದಿನೆಂಟ ನೂರ ತೊಂಬತ್ತರ ಮಾತು.

ಸುಖುಮ್ ಮತ್ತು ಓಚೆಮಚೇರಿಯ ಮಧ್ಯ, ಕೋದೋರ ನದಿಯ ದಂಡೆಯ ಸಮೀಪ ನಾನು, ಬೆಟ್ಟದಿಂದ ನಿನಾದಗೈಯುತ್ತ ಕೆಳಗೆ ಧುಮ್ಮಿಕ್ಕುತ್ತಿದ್ದ ನದಿಯ ಗಂಭೀರ ಗರ್ಜನೆ ಕೇಳಿದ್ದೆ.

ಗ್ರೀಷ್ಮ ಋತುವಾದ್ದರಿಂದ ಉದುರಿದ ಹಳದಿ ಎಲೆಗಳು ಕೋದೋರ್ ನದಿಯ ತೆರೆಗಳ ಬುರುಗಿನ ಮೇಲೆ ಅತ್ತಿತ್ತ ಚಲಿಸುತ್ತಲಿದ್ದವು. ನಾನು ನದಿಯ ದಂಡೆಯ ಮೇಲಿದ್ದ ಕಾಡುಗಲ್ಲಿನ ತುದಿಯ ಮೇಲೆ ಕುಳಿತು, ವಿಭಿನ್ನ ಪ್ರಕಾರದ ಕಡಲಕ್ಕಿಗಳು ತೆರೆಗಳ ಮೇಲೆ ಅತ್ತಿತ್ತ ಚಲಿಸುತ್ತಿದ್ದ ಈ ಎಲೆಗಳನ್ನು ಮೀನುಗಳೆಂದೇ ತಿಳಿದು, ಮೋಸ ಹೋಗುತ್ತಲಿರುವುದನ್ನು ನೋಡುತ್ತಲಿದ್ದೆ. ಈ ಕಾರಣದಿಂದಾಗಿಯೇ ಎಡಗಡೆಯ ಬದಿಯಲ್ಲಿರುವ ಗಿಡದ ಹಿಂದೆ, ತೆರೆಗಳು ಬಂದು ದಡಕ್ಕೆ ಅಪ್ಪಳಿಸುವಲ್ಲಿ ಈ ಕಡಲಕ್ಕಿಗಳು ಇಷ್ಟೊಂದು ಚಿಲಿಪಿಲಿ ಗುಟ್ಟುತ್ತಲಿವೆ.

ನಾನು ಕುಳಿತಲ್ಲಿ ತಲೆಯ ಮೇಲೆ ಅಖರೋಟ ಮರ ಹಬ್ಬಿ ಚಿನ್ನದ ಹಾಗೆ ಸಿಂಗಾರಗೊಂಡಿದೆ. ಕಾಲ ಬಳಿ ಬಿದ್ದಿರುವ ಅಸಂಖ್ಯಾತ ಎಲೆಗಳು, ದೇಹದಿಂದ ಕತ್ತರಿಸಿ ಚೆಲ್ಲಿದ ಕೈಗಳ ಹಾಗೆ ತೋರುತ್ತಲಿವೆ.

ಆಚೆ ದಡದಲ್ಲಿರುವ ಗಿಡಗಳ ಟೊಂಗೆಗಳು, ಗಾಳಿಯಲ್ಲಿ ತೂಗುಬಿಟ್ಟ ಹರಿದ ಬಲೆಯ ಹಾಗೆ, ಭಾಸವಾಗುತ್ತಲಿವೆ. ಆ ಬಲೆಯಲ್ಲಿ ಹಳದಿ ಕೆಂಪು ಬಣ್ಣದ ಗುಡ್ಡಗಾಡಿನ ಒಂದು ಮರಕುಟಿಗ ಪಕ್ಷಿ ಅತ್ತಿಂದಿತ್ತ ಇತ್ತಿಂದತ್ತ ಹಾರಾಡುತ್ತಲಿದೆ. ಆ ಬಲೆಯಲ್ಲಿ ಅದು ಸಿಕ್ಕಿಕೊಂಡಿರಬೇಕೇನೋ ಎಂದೆನಿಸುತ್ತದೆ. ಅದು ತನ್ನ ಚೂಪಾದ ಕಪ್ಪು ಚುಂಚಿನಿಂದ, ಮರದ ಬೊಡ್ಡೆಯನ್ನು ಕುಕ್ಕುತ್ತ ಅದರೊಳಗಿರುವ ಕೀಟಗಳು ಹೊರಬರುವಂತೆ ಮಾಡುತ್ತಲಿತ್ತು. ಹೀಗೆ ಹೊರ ಬಂದ ಕೀಟಗಳು ಉತ್ತರದಿಂದ ಬಂದ ಅತಿಥಿಗಳಿಂದ ಕೂಡಲೇ ನುಂಗಲ್ಪಡುತ್ತಿದ್ದವು. ಅವುಗಳಲ್ಲಿ ಜಾಣ ಗುಬ್ಬಿಯೊಂದಿಗೆ ಇನ್ನಿತರ ಪಕ್ಷಿಗಳೂ ಇದ್ದವು.

ನನ್ನ ಎಡಗಡೆ ಇರುವ ಬೆಟ್ಟಗಳ ಶಿಖರದ ಮೇಲೆ, ಕಪ್ಪು ಮೋಡಗಳು ಚಲಿಸುತ್ತಲಿವೆ. ಅವುಗಳನ್ನು ನೋಡಿದರೆ ಮಳೆ ಬರುವ ಲಕ್ಷಣ ತೋರುತ್ತಲಿದೆ. ಮೋಡಗಳ ನೆರಳು, ಬೆಟ್ಟದ ಮೇಲಿನ ಹಸಿರಿನ ಮೇಲೆ ತೇಲುತ್ತಲಿವೆ. ಅಲ್ಲಿಯೇ ಗಾಳಿಮರಗಳು, ಬಹಳ ಹಿಂದೆ ಬೆಳೆಸಿದ್ದ ಲಿಂಬೆ ಹಾಗೂ ಇನ್ನಿತರ ಗಿಡಗಳಿವೆ. ಈ ಹಳೆಯ ಮರಗಳ ಪೊದರಿನಲ್ಲಿ ಮತ್ತುಬರಿಸುವ ಮಧು ಸಿಗುತ್ತದೆ. ಪ್ರಾಚೀನ ಯುಗದಲ್ಲಿ ಅದು ಮಹಾನ್ ಪೊಂಪಿಯಸ್‌ನ ಸೇನೆಯನ್ನು ಮುಗಿಸಿಯೇ ಬಿಟ್ಟಿತ್ತು. ಇದೂ ಅಲ್ಲದೆ ಈ ಮಾದಕ ಮಧು, ಆ ರೋಮನ್ ಸೇನೆಯನ್ನು ತನ್ನ ಮಾದಕತೆಯ ತೆಕ್ಕೆಗೆ ಒಕ್ಕಿಕೊಂಡು ಬಿಟ್ಟಿತ್ತು.

ಈ ಜೇನನ್ನು ಜೇನುಹುಳುಗಳು ಹತ್ತು ಹಲವು ರೀತಿಯ ಹೂಗಳ ಪರಾಗದಿಂದ ಸಿದ್ಧಗೊಳಿಸುತ್ತಿದ್ದವು. ಪ್ರವಾಸಿಗಳು ಮರದ ಪೊದರಿನಲ್ಲಿರುವ ಈ ಮಧುವನ್ನು ತಕ್ಕೊಂಡು ತಮ್ಮಲ್ಲಿದ್ದ ಗೋದಿ

ರೊಟ್ಟಿಯೊಂದಿಗೆ ಅಪಾರ ಹರ್ಷದೊಂದಿಗೆ ತಿಂದು ತೇಗುತ್ತಿದ್ದರು.

ನಾನು ಕೂಡ ಗೋದಿರೊಟ್ಟಿಗೆ ಈ ಜೇನು ಹಚ್ಚಿಕೊಂಡು ತಿನ್ನುತ್ತಲಿದ್ದೆ. ಜೇನು ತಕ್ಕೊಳ್ಳುವಾಗ ಜೇನುಹುಳ ಸಿಟ್ಟಿನಿಂದ ನನ್ನನ್ನು ಕಚ್ಚಿತ್ತು. ಅದನ್ನು ಲೆಕ್ಕಿಸದೇ ಡಬ್ಬಿಯಲ್ಲಿದ್ದ ಜೇನಿನಲ್ಲಿ ರೊಟ್ಟಿ ಎದ್ದಿಕೊಂಡು ತಿನ್ನತೊಡಗಿದೆ. ಜೊತೆಗೆ ಮರದಿಂದ ಒಣಗಿದ ಎಲೆಗಳು ಬೀಳುವ ಸಪ್ಪಳ ಕೇಳುತ್ತ ದಣಿದಂತೆ ಕಾಣುತ್ತಿದ್ದ ಸೂರ್ಯನನ್ನು ಮುಗ್ಧನಾಗಿ ನೋಡುತ್ತಲಿದ್ದೆ.

ಎಲೆಗಳು ಉದುರುವ ಈ ದಿನಗಳಲ್ಲಿ ಕೊಕೇಶಸ್ ಒಂದು ವಿಶಾಲ, ಭವ್ಯ ಮತ್ತು ಸುಂದರ ಚರ್ಚಿನ ಒಳಭಾಗದಂತೆ ಕಾಣಿಸತೊಡಗುತ್ತದೆ. ಓರ್ವ ಮಹಾನ್ ಋಷಿ, ಹಾಗೂ ಮಹಾನ್ ಪಾಪಿಯೂ ಹೌದು ಆತ, ತನ್ನ ಗತ ಜೀವನವನ್ನು ಲೋಕದ ತೀಕ್ಷ್ಣ ದೃಷ್ಟಿಯಿಂದ ರಕ್ಷಿಸಿಕೊಳ್ಳಲೋಸುಗ ಇದನ್ನು ಕಟ್ಟಿಸಿಕೊಂಡಿದ್ದ. ಆತ ಬಂಗಾರದಿಂದ, ಬೆಲೆಬಾಳುವ ರತ್ನವಜ್ರಗಳಿಂದ ಒಂದು ವಿಶಾಲ ಮಂದಿರ ಕಟ್ಟಿಸಿದ. ಬೆಟ್ಟದ ಕಡೆ ಇರುವ ಮಂದಿರದ ಗೋಡೆಯ ಮೇಲೆ ಅತ್ಯಂತ ಸುಂದರ ಜರಿಯಿಂದೊಡಗೂಡಿದ ಮಕಮಲ್ಲಿನ ಕಾರ್ಪೆಟ್ ಇಳಿಬಿಡಲಾಗಿತ್ತು. ಇದನ್ನು ಸಮರಕಂದ ಮತ್ತು ಶೆಮಾಹದ ತುರ್ಕಮಾನರು ನೇದಿದ್ದರು. ಈತ ಇಡೀ ವಿಶ್ವವನ್ನೆಲ್ಲ ಕೊಳ್ಳೆಹೊಡೆದು ಆ ಮಾಲನ್ನು ಸೂರ್ಯದೇವತೆಗೆ ಅರ್ಪಿಸಲು ತೆಗೆದುಕೊಂಡು ಬರುತ್ತಿದ್ದ. ಸೂರ್ಯದೇವನನ್ನು ಕುರಿತು, " ಪ್ರಭು ನಿನ್ನದೇ..... ನಿನ್ನಿಂದಲೇ ತಂದೆ.... ನಿನಗಾಗಿಯೇ...." ಎಂದ. ನಾನು ಸ್ವಪ್ನಸದೃಶವಾದ ಆ ಅವಸ್ಥೆಯಲ್ಲಿ ನನ್ನ ಕಲ್ಪನೆಯೊಂದಿಗೆ ನೀಳವಾದ ಗಡ್ಡ, ಮಕ್ಕಳಂಥ ಮುಗ್ಧ ಪ್ರಸನ್ನಪೂರ್ಣ ಬೊಗಸೆಗಂಗಳ ಶ್ವೇತ ಮಹಾ ಪುರುಷನೋರ್ವ, ಬೆಟ್ಟದಿಂದ ಕೆಳಗೆ ಇಳಿಯುತ್ತಿರುವುದನ್ನು ಕಂಡೆ. ಆತ ಈ ಧರಿತ್ರಿಯನ್ನು ಸುಂದರಗೊಳಿಸತೊಡಗಿದ್ದ. ಅಸಂಖ್ಯ ಬಣ್ಣಗಳ ರತ್ನಗಳಿಂದೊಡಗೂಡಿದ ಭಂಡಾರವನ್ನು ಸುತ್ತಲೂ ತನ್ನ ಕೈಗಳಿಂದ ಸೂರೆಗೊಳಿಸತೊಡಗಿದ್ದ ಬೆಟ್ಟದ ಶಿಖರಗಳ ಮೇಲೆ ಆತ ಬೆಳ್ಳಿಯ ಒಂದು ದಪ್ಪಾಗಿನ ಪದರವನ್ನೆ ನಿರ್ಮಿಸಿದ್ದ. ಅಲ್ಲಲ್ಲಿ ಅನೇಕ ಪ್ರಕಾರದ ಹಚ್ಚಹಸಿರು ವೃಕ್ಷಗಳ ರತ್ನಗಂಬಳಿ ಹಾಸಿದ್ದ. ಆತನ ಕೈಗಳಿಂದಲೇ ಚೆಲುವುಗೊಂಡ ಪೃಥ್ವಿಯ ಈ ಸ್ವರ್ಗ ಸದೃಶ ಸುಂದರ ಭಾಗ, ನೋಡಿದವರನ್ನೆಲ್ಲ ಮುಗ್ಧಗೊಳಿಸುವಂತ ಅಪಾರ ಸೌಂದರ್ಯದಿಂದ ಝಗ ಝಗಿಸುತ್ತಿತ್ತು.

ಈ ಪ್ರಪಂಚದಲ್ಲಿ ಮನುಷ್ಯನಾಗಿ ಜನಿಸುವುದು ಅತ್ಯಂತ ಸೌಭಾಗ್ಯಪೂರ್ಣವಾದುದು. ಏನೆಂಥ ಅದ್ಭುತ ವಸ್ತುಗಳನ್ನು ಈ ಮನುಷ್ಯ ತನ್ನ ಸುತ್ತಲೂ ಕಾಣುತ್ತಾನೆ! ಯಾವನು ತನ್ಮಯನಾಗಿ ಈ ಸೌಂದರ್ಯವನ್ನು ಆಸ್ವಾದಿಸುತ್ತಾನೋ, ಅವನ ಹೃದಯದಲ್ಲಿ ಒಂದು ಅವ್ಯಕ್ತ ಹಾಗೂ ವೇದನೆಯಿಂದೊಡಗೂಡಿದ ಸುಖದ ಅಲೆ ಏಳುತ್ತದೆ.

ನಿಜ, ಇದು ನಿಜಕ್ಕೂ ಸತ್ಯ. ಒಮ್ಮೊಮ್ಮೆ ಇದರ ಉಪಭೋಗ ವ್ಯಾಕುಲಗೊಳಿಸುತ್ತದೆ. ನಿನ್ನ ಹೃದಯದಲ್ಲಿ ಒಂದು ರೀತಿಯ ಅಪಾರ ತಿರಸ್ಕಾರ ಹುಟ್ಟಿಕೊಳ್ಳುತ್ತದೆ. ದುಃಖ ನಿನ್ನ ಹೃದಯದ ರಕ್ತ ಹೀರತೊಡಗುತ್ತದೆ. ಆದರೆ ಈ ಸ್ಥಿತಿ ಸದಾಕಾಲ ಇರುವುದಿಲ್ಲ, ಕೆಲಸಲ ಸೂರ್ಯ ಕೂಡ, ಮನುಷ್ಯರು ತಮ್ಮ ಹೃದಯದಲ್ಲಿ ಅಸಹ್ಯವಾದುದನ್ನು ಮುಚ್ಚಿಟ್ಟುಕೊಂಡಿರುವುದನ್ನು ಕಾಣತೊಡಗುತ್ತಾನೆ. ಆತ ಇವರಿಗಾಗಿ ಏನೆಲ್ಲ ಎನಿತು ಕಷ್ಟ ಸೋಸಿದ. ಆದರೆ ಈ ಮನುಷ್ಯ ಏನೆಂಥ ದೀನ ಮತ್ತು ದುಃಖಿಯಾದನಲ್ಲ.... ಹಾಗೆ ನೋಡಿದರೆ ಇಲ್ಲಿ ಒಳ್ಳೆಯ ಜನರೂ ಸಾಕಷ್ಟಿದ್ದಾರೆ. ಆದರೆ ಅವರಿಗೆ ಇನ್ನೂ ಹೆಚ್ಚಿನ ಸಂಸ್ಕಾರದ ಅವಶ್ಯಕತೆ ಇದೆ. ಇದೆಲ್ಲಕ್ಕಿಂತ ಹೆಚ್ಚು ಒಳ್ಳೆಯದಾಗಬೇಕಿದ್ದರೆ ಅವರ ಪುನರ್ನಿರ್ಮಾಣವಾಗಬೇಕು.

ನನ್ನ ಬಲಗಡೆಯಲ್ಲಿರುವ ಮರಗಳಾಚೆಯಿಂದ ಏನೋ ಕೋಲಾಹಲ ಕೇಳಿದೆ. ಆ ಧ್ವನಿ ಸಮುದ್ರದ ತೆರೆಗಳ ಗರ್ಜನೆಯಲ್ಲಿ ಹಾಗೂ ನದಿಯ ಕಲರವದಲ್ಲಿ ತುಂಬ ಸೀರಾಗಿ ಕೇಳಿ ಬರುತ್ತಿತ್ತು. ಅದು ಮನುಷ್ಯರ ಧ್ವನಿಯಾಗಿತ್ತು. ಇವರೆಲ್ಲ ಹಸಿದಿದ್ದರು. ಸುಖುಮ್‌ದಲ್ಲಿ ರಸ್ತೆಯ ಕೆಲಸ ಮಾಡುತ್ತಿದ್ದರು. ಅಲ್ಲಿಂದ ಅವರು ಓಚೆಮಚೇರೀಯತ್ತ ಯಾವುದಾದರೊಂದು ಹೊಸ ಕೆಲಸ ಸಿಗಬಹುದೆಂಬ ಆಶೆಯಿಂದ ಹೊರಟಿದ್ದರು.

ನಾನು ಅವರನ್ನು ಬಲ್ಲವನಾಗಿದ್ದೆ. ಅವರೆಲ್ಲ ಓರೇಲದ ನಿವಾಸಿಗಳಾಗಿದ್ದರು. ನಾನು ಅವರೊಂದಿಗೆ ಸುಖುಮ್‌ದಲ್ಲಿ ಕೆಲಸ ಮಾಡಿದ್ದೆ. ಅಲ್ಲಿ

ಒಂದು ದಿನ ಮೊದಲೇ ನಮಗೆಲ್ಲರಿಗೂ ವೇತನ ಸಿಕ್ಕಿತ್ತು. ರಾತ್ರಿ ನಾನು ಅವರಿಗಿಂತ ಮೊದಲೇ ಅಲ್ಲಿಂದ ಹೊರಟಿದ್ದೆ; ಸಮುದ್ರ ತಟದಲ್ಲಿ ಸೂರ್ಯ ಉದಯವಾಗುವುದನ್ನು ನೋಡಲೆಂದು.

ಅವರಲ್ಲಿ ನಾಲ್ಕು ಜನ ಗಂಡಸರು ಹಾಗೂ ಓರ್ವ ಯುವ ಬಸಿರಿ ಒಕ್ಕಲಗಿತ್ತಿ ಇದ್ದಳು. ಆಕೆಯ ಹೊಟ್ಟೆ ಬಹಳ ಮುಂದೆ ಚಾಚಿತ್ತು. ಆಕೆಯ ಕಣ್ಣುಗಳು ನೀಲಿ ಮಿಶ್ರಿತ ಕಂದು ಬಣ್ಣದವು. ಕಣ್ತುಂಬ ಭಯ ತುಂಬಿತ್ತು. ತಲೆಗೆ ಹಳದಿ ರುಮಾಲು ಇತ್ತು. ಅದು ಅರಳಿದ ಸೂರ್ಯಪಾನ ಹೂವಿನ ಹಾಗೆ ಗಾಳಿಯಲ್ಲಿ ಅತ್ತಿತ್ತ ಅಲೆದಾಡುತ್ತಿತ್ತು. ಆಕೆಯ ಗಂಡ ಸುಖುಮ್‌ದಲ್ಲಿ ಹೆಚ್ಚು ಹಣ್ಣು ತಿಂದುದಕ್ಕಾಗಿ ಸತ್ತು ಹೋಗಿದ್ದ. ನಾನು ಅಲ್ಲಿ ಇವರೊಂದಿಗೆ ಒಂದೇ ಗುಡಿಸಲಿನಲ್ಲಿರುತ್ತಿದ್ದೆ. ಪ್ರಾಚೀನ ರಶಿಯಾದವರ ಸ್ವಭಾವಕ್ಕನುಸಾರವಾಗಿ ಅವರು ತಮ್ಮ ತೊಂದರೆ-ತಾಪತ್ರಯಗಳನ್ನು



ತುಂಬ ಏರಿದ ಧ್ವನಿಯಲ್ಲಿ ಹೇಳಿಕೊಳ್ಳುತ್ತಿದ್ದರು. ಅವರ ಈ ಗೋಳಾಟದ ಧ್ವನಿ ಐದು ಮೈಲಿನಷ್ಟು ದೂರಕ್ಕೆ ಕೇಳಿ ಬರುತ್ತಿತ್ತು.

ಈ ಜನ ದುಃಖದಿಂದ ಬಳಲಿ ಬೆಂಡಾದವರು. ಆ ಕಷ್ಟಗಳು ಅವರನ್ನು ಸ್ವಂತ ನೆಲ-ಜಲದಿಂದ ದೂರಾಗಿಸಿದ್ದವು. ಒಣಗಿದ ಎಲೆಗಳಂತೆ ಅವರನ್ನು ಇತ್ತ ತೂರಲಾಗಿತ್ತು. ಇಲ್ಲಿಯ ಅದ್ಭುತ ಮತ್ತು ಸಮೃದ್ಧ ಜಲ-ವಾಯು ಅವರ ಕಣ್ಣು ಕುಕ್ಕಿಸಿತ್ತು ಹಾಗೂ ಅತ್ಯಧಿಕ ಕಠೋರ ಪರಿಶ್ರಮ ಅವರನ್ನು ಸಂಪೂರ್ಣ ಮುರಿದು ಹಾಕಿತ್ತು. ತಮ್ಮ ಸುತ್ತಲೂ ಚೆಲ್ಲುವರಿದ ವಸ್ತುಗಳನ್ನು ಅಚ್ಚರಿಯಿಂದ ನೋಡುತ್ತಿದ್ದರು ಮತ್ತು ಆಶ್ಚರ್ಯದಿಂದ ತಮ್ಮ ದುಃಖತಪ್ತ, ನಿಷ್ಪ್ರಭ ಕಣ್ಣುಗಳ ರೆಪ್ಪೆ ಬಡಿಯುತ್ತ, ತುಟಿಗಳಲ್ಲಿ ಕರುಣಾಪೂರಿತ ಮುಗುಳ್ನಗೆ ಚೆಲ್ಲುತ್ತ, ಪರಸ್ಪರರನ್ನು ನೋಡುತ್ತ, ಮೆತ್ತಗಿನ ದನಿಯಲ್ಲಿ ಹೇಳುತ್ತಾರೆ:

"ಓ ಹ.... ಹಾ.... ಏನೆಂಥ ಚೆಲುವಾದ ಭೂಮಿ ಅದು...."

"ಭೂಮಿ ಸೀಳಿ ವಸ್ತುಗಳು ಹೊರಬರುತ್ತವೆಯೇನೋ ಎನ್ನಿಸುತ್ತದೆ...."

"ಹಾಂ.... ಅ.... ಅಂ.... ಆದರೂ ಇದು ತುಂಬ ಕಲ್ಲು ಬಂಡೆಗಳಿಂದ ತುಂಬಿದೆ."

"ಅಷ್ಟು ಚೆನ್ನಾಗಿಲ್ಲ ಇದು, ನೀನು ಒಪ್ಪಲೇಬೇಕು..."

ಮತ್ತೆ ಕೊಂಚ ಸಮಯದಲ್ಲಿ ಅವರಿಗೆ ಆ ಮಣ್ಣಿನ ನೆನಪು ಬಂದು ಕಾಡುತ್ತದೆ. ಏಕೆಂದರೆ ಅವರಿಗೆ ಅವರ ಊರು ನೆನಪಾಯಿತು. ಕೋಬಿ, ಲೀಲೋಜೋಕ, ಸುಖೋಯೀಗೋನ್, ಮೆಕ್ರೊಂಕೀ ಇತ್ಯಾದಿ. ಅಲ್ಲಿಯ ಮಣ್ಣಿನ ಕಣ ಕಣದಲ್ಲಿ ಅವರ ಹಿರಿಯರ, ಪೂರ್ವಜರ ಬೂದಿ ಒಂದಾಗಿದೆ. ಅವರಿಗೆ ಆ ಮಣ್ಣಿನ ನೆನಪು ಬಂದು ಕಾಡುತ್ತದೆ. ಏಕೆಂದರೆ ಅವರಿಗೆ ಅದು ತುಂಬ ಪ್ರಿಯವಾಗಿತ್ತು, ಪರಿಚಿತವಾಗಿತ್ತು. ಅವರು ಅದನ್ನು ತಮ್ಮ ಪರಿಶ್ರಮದ ಬೆವರಿನಿಂದ ತೋಯಿಸಿದ್ದರು.

ಅವರೊಂದಿಗೆ ಇನ್ನೂ ಓರ್ವ ಹೆಣ್ಣು ಮಗಳಿದ್ದಳು. ಎತ್ತರದ ನಿಲುವು, ದಪ್ಪ ತುಟಿಗಳು, ಕಪ್ಪಾದ ಮೆಳ್ಳಗಣ್ಣುಗಳ ಹಳದಿ ವಸ್ತ್ರ ತಲೆಗೆ ಕಟ್ಟಿಕೊಂಡಿದ್ದ ಹೆಣ್ಣು ಮಗಳು. ಆಕೆ ಸಾಯಂಕಾಲ ಗುಡಿಸಿಲಿನ ಕಲ್ಲುಗಳ ಗುಂಪಿನ ಮೇಲೆ ಕುಳಿತುಕೊಳ್ಳುತ್ತಾಳೆ. ತನ್ನ ಅಂಗೈಯಲ್ಲಿ ಗದ್ದವಿರಿಸಿಕೊಂಡು ಒಂದೆಡೆ ತಲೆವಾಲಿಸಿ ಕ್ರೋಧದಿಂದ ತುಂಬಿದ ಎತ್ತರದ ದನಿ ತೆಗೆದು ಹಾಡುತ್ತಾಳೆ. ಆ ಹಾಡಿನ ಭಾವ ಹೀಗಿದೆ- "ಊರಿನ ಇಗರ್ಜಿಯ ನಾಲ್ಕು ಗೋಡೆಗಳ ಹಿಂದೆ, ಹಚ್ಚಹಸಿರಾದ ಗಿಡ-ಬಳ್ಳಿಗಳಲಿ ಹಳದಿ ಉಸುಕಿನ ಮೇಲೆ ನನ್ನ ಅತ್ಯಂತ ಸ್ವಚ್ಛ ಹಾಗೂ ಶುಭ್ರವಾದ ಮೇಲುಹೊದಿಕೆ ಹಾಸುತ್ತೇನೆ. ಅಲ್ಲಿ ನನ್ನ ಪ್ರಿಯತಮನ ಬರುವಿಕೆಯ ಪ್ರತೀಕ್ಷೆ ಮಾಡುತ್ತೇನೆ. ಆತ ಯಾವಾಗ ಬರುವನೋ ಆಗ ನಾನು ತುಂಬು ಹೃದಯದಿಂದ ಆತನ ಸ್ವಾಗತಗೈಯುತ್ತೇನೆ."

ಸಾಮಾನ್ಯವಾಗಿ ಈ ಹಳದಿ ವಸ್ತ್ರದ ಹೆಣ್ಣುಮಗಳು ಯಾವಾಗಲೂ ಸುಮ್ಮನೇ ಕುಳಿತು ತನ್ನ ಹೊಟ್ಟೆಯತ್ತ ನೋಡುತ್ತಿರುತ್ತಾಳೆ. ಆದರೆ ಕೆಲವೊಮ್ಮೆ ಆಕಸ್ಮಿಕವಾಗಿ ಆಳವಾದ, ಮೆದುವಾದ ಗಡಸು ದನಿಯಲ್ಲಿ ಗೀತದ ಕೊನೆಯ ಶೋಕಪೂರ್ಣ ಸಾಲುಗಳನ್ನು ಹಾಡತೊಡಗುತ್ತಾಳೆ. ಆ ಹಾಡಿನ ಭಾವ ಇಂತಿರುತ್ತದೆ- "ಓ! ನನ್ನ ಪ್ರಿಯತಮ..... ನನ್ನ ಪ್ರಿಯತಮ..... ನನ್ನ ಭಾಗ್ಯದಲ್ಲಿನ್ನು ನಿನ್ನನ್ನು ನೋಡುವ ಅವಕಾಶವಿಲ್ಲವೆಂದು ತೋರುತ್ತದೆ...."

ದಕ್ಷಿಣ ಪ್ರದೇಶದ ಕಪ್ಪು ಘೋರಾಂಧಕಾರದಲ್ಲಿ ಈ ದುಃಖಪೂರ್ಣ, ಕರುಳು ಹಿಂಡುವ ದನಿ, ನನ್ನ ಹೃದಯದಲ್ಲಿ ಉತ್ತರದ ಹಿಮಭರಿತ ನಿರ್ಜನ ಹಾಗೂ ಭೀಕರವಾದ ಬಿರುಗಾಳಿ ಮತ್ತು ತೋಳಗಳ ಭಯಂಕರ ಚೀತ್ಕಾರದ ನೆನಪನ್ನು ಜಾಗೃತಗೊಳಿಸುತ್ತದೆ.

ಕೆಲಕಾಲದ ನಂತರ ಆ ಮೆಳ್ಳಗಣ್ಣಿನ ಹೆಣ್ಣು ಮಗಳು ಜ್ವರದಿಂದ ಬಳಲ ತೊಡಗಿದಾಗ, ಆಕೆಯನ್ನು ಸ್ಟೆಚರಿನಲ್ಲಿ ಮಲಗಿಸಿಕೊಂಡು ಪಟ್ಟಣದ ಆಸ್ಪತ್ರೆಗೆ ಕರೆದೊಯ್ಯಲಾಯಿತು. ದಾರಿಯಲ್ಲಿ ಆಕೆ ನರಳುತ್ತಲಿದ್ದಳು, ನಡುಗುತ್ತಲಿದ್ದಳು. ಆ ನರಳುವಿಕೆಯ ದನಿ ಇಗರ್ಜಿಯ ನಾಲ್ಕು ಗೋಡೆಗಳ ಹಿಂದೆ ಆಕೆ ಹಾಡುತ್ತಿದ್ದ ಹಾಡನ್ನು ಈಗ ಹಾಡುತ್ತಿದ್ದಾಳೇನೋ ಎನ್ನಿಸುವಂತಿತ್ತು.

ಹಳದಿ ವಸ್ತ್ರದ ಹೆಣ್ಣುಮಗಳು ಗಿಡಗಂಟಿಗಳ

ಹಿಂದೆ ಮರೆಯಾಗಿ ಕಾಣಿಸದಾದಳು. ನಾನು ನನ್ನ (ಉಪಹಾರ) 'ನ್ಯಾರಿ' ಮುಗಿಸಿದೆ. ಚಹಾದ ಡಬ್ಬಿಯಲ್ಲಿಟ್ಟಿದ್ದ ಜೇನುತುಪ್ಪವನ್ನು ಎಲೆಗಳಿಂದ ಮುಚ್ಚಿದೆ. ಚೀಲವನ್ನು ಹೆಗಲಿಗೆ ಹಾಕಿಕೊಂಡು ಬಡಿಗೆಯನ್ನು ಗಟ್ಟಿ ನೆಲದ ಮೇಲೆ ಬಡಿಯುತ್ತ ಜನರ ಹಿಂದೆ ಹಿಂದೆ ಹೊರಟುಬಿಟ್ಟೆ. ಸೇತುವೆಯ ಮೇಲೆ ನಡೆಯತೊಡಗಿದೆ. ನನ್ನ ಎಡಗಡೆಗೆ ಆಳವಾದ ನೀಲಿ ಸಮುದ್ರದಲ್ಲಿ ತೆರೆಗಳು ಅಪ್ಪಳಿಸುತ್ತಿದ್ದವು. ಕಡಲಲ್ಲಿ ಸಾವಿರಾರು ಅದೃಶ್ಯ ಬಡಿಗರು ಉಜ್ಜುಗೊರಡದಿಂದ ಉಜ್ಜುತ್ತಿದ್ದಾರೆ ಹಾಗೂ ಉಜ್ಜುಗದಿಂದ ಈ ಬೆಳ್ಳಗಿನ ಬುರುಗು ಗಾಳಿಯಲ್ಲಿ ತೇಲಿ ತಟಕ್ಕ ಬಂದು ಬಡಿಯುತ್ತಲಿದೆಯೇನೋ ಎನ್ನುವ ಹಾಗೆ-ಅದೂ ಅಲ್ಲದೆ ಓರ್ವ ಆರೋಗ್ಯವಂತ ಯುವತಿಯ ತೇವವಾದ, ಬೆಚ್ಚಗಿನ ಹಾಗೂ ಸುಗಂಧಿತ ಉಸಿರಾಗಿದೆಯೇನೋ ಎನ್ನುವ ಹಾಗೆ ತೋರುತ್ತಲಿದೆ. ಒಂದು ತುರ್ಕಿ ನಾವೆ ಸುಖುಮ್‌ದ ಕಡೆಗೆ ಹೊರಟಿತ್ತು. ಇದರ ಮೂಲಕ ಸುಖುಮ್‌ದ ಇಂಜನೀಯರ್ ತುಂಬ ಮಹತ್ವಪೂರ್ಣ ವ್ಯಕ್ತಿಯಾಗಿದ್ದ.

ನಡೆದುಕೊಂಡು ಹೋಗುವುದು ತುಂಬ ಸೊಗಸು ಎನ್ನಿಸುತ್ತಲಿದೆ. ಗಾಳಿಯಲ್ಲಿ ತೇಲಿ ಹೋಗುತ್ತಲಿದ್ದೇವೆ ಎನ್ನುವ ಭಾವನೆ ಬರುತ್ತಲಿದೆ. ಸುಂದರ ವಿಚಾರ, ಸುಖಕರವಾದ ನೆನಪುಗಳು ಮನದಲ್ಲಿ ಸುಮಧುರ ಸಂಗೀತದ ಅಲೆಗಳನ್ನೆಬ್ಬಿಸುತ್ತಿದ್ದವು. ನನ್ನ ಆತ್ಮದಲ್ಲಿ ಈ ಶಬ್ದ, ಮೇಲೆ ಮೇಲೆ ಚಂಚಲ ಮತ್ತು ತನ್ನ ಅತುಲ ಆಳದಲ್ಲಿ ನಿತಾಂತ ಶಾಂತವಿರುವ ಕಡಲ ನೊರೆಯನ್ನೊಳಗೊಂಡ ಬೆಳ್ಳನೆಯ ಅಲೆಗಳ ಹಾಗೆ ಇತ್ತು. ಇದೇ ರೀತಿ ನನ್ನ ಆತ್ಮದಲ್ಲಿ ಅನಂತ ಶಾಂತಿಯ ಸಾಮ್ರಾಜ್ಯ ಹಬ್ಬುತ್ತಲಿತ್ತು. ಚೆಲುವಾದ, ಚಂಚಲ ಮೀನುಗಳು ಕಡಲ ಆಳದಲ್ಲಿ ಚಲಿಸುತ್ತಿರುವ ಹಾಗೆ ತಾರುಣ್ಯದ ಸುಂದರ ಆಶೆ-ಆಕಾಂಕ್ಷೆಗಳು ಮನದಾಳದಲ್ಲಿ ಚಲಿಸುತ್ತಲಿವೆ.

ಈ ದಾರಿ ಕಡಲ ತೀರಕ್ಕೆ ಹೋಗುತ್ತದೆ ಹಾಗೂ ಚಕ್ರಾಕಾರವಾಗಿ ಮರಳದಂಡೆಯ ಸಮೀಪ ಜಾರುತ್ತದೆ. ಅಲ್ಲಿ ಕುಪ್ಪಳಿಸುವ ಕಡಲ ಅಲೆಗಳು ತೀರವನ್ನು ಒದ್ದೆ ಮಾಡುತ್ತಲಿವೆ. ಗಿಡ, ಗಂಟಿಗಳು ಕಡಲ ಚೆಲುವನ್ನು ನೋಡಲು ಪರಿತಪಿಸುತ್ತಿವೆಯೇನೋ ಅನ್ನುವ ರೀತಿಯಲ್ಲಿವೆ. ಅದಕ್ಕಾಗಿಯೇ ದಾರಿಯ ಗುಂಟ ನಿಂತು ಅವು ಅತ್ತಿಂದಿತ್ತ ಇತ್ತಿಂದತ್ತ ತೂಗಾಡುತ್ತಲಿವೆ- ಆ ಅನಂತ ವಿಸ್ತಾರವಾದ ನೀಲಿ ಕಡಲಿಗೆ ವಂದಿಸುತ್ತಲಿವೆಯೇನೋ ಎನ್ನುವ ಹಾಗೆ. ಬೆಟ್ಟಗಳ ಮೇಲಿಂದ ಗಾಳಿ ಬೀಸುತ್ತಲಿತ್ತು. ಮಳೆ ಬೀಳುವ ಭಯವಿತ್ತು..... ಅಷ್ಟರಲ್ಲಿ ಕಂಟಿ ಪೊದೆಗಳ ಮರೆಯಲ್ಲಿ ಮಿದುವಾಗಿ ನಲುಗುವ, ನರಳುವ ದನಿ ಕೇಳಿಸುತ್ತಲಿತು: ಓರ್ವ ಮನುಷ್ಯನ ನರಳುವಿಕೆ ಅದಾಗಿತ್ತು. ಆ ನರಳುವಿಕೆ ನೇರವಾಗಿ ತಟ್ಟಿ ಮನವ ಗಾಸಿ ಗೊಳಿಸುತ್ತದೆ.

ಪೊದೆಗಳನ್ನು ಸರಿಸಿ ನೋಡಿದಾಗ, ತಲೆಗೆ ಹಳದಿ ವಸ್ತ್ರ ಸುತ್ತಿದ್ದ ಹೆಣ್ಣುಮಗಳು ಅಖರೋಟದ ಬೊಡ್ಡೆಗೆ ತಾಗಿ ಕುಳಿತಿರುವುದನ್ನು ಕಂಡೆ. ಆಕೆಯ ತಲೆ ಒಂದೆಡೆ ವಾಲಿತ್ತು: ಅದೇಕೋ ಮುಖ ಬಾಡಿ ಬತ್ತಿತ್ತು. ಕಣ್ಣುಗಳ ಗುಡ್ಡೆಗಳು ಇನ್ನೇನು ಹೊರಬೀಳುತ್ತವೇನೋ ಎನ್ನುವ ಹಾಗಿದ್ದವು. ಆಕೆ ತನ್ನ ದೊಡ್ಡ ಹೊಟ್ಟೆಯನ್ನು ಎರಡೂ ಕೈಗಳಿಂದ ಹಿಡಿದುಕೊಂಡು ತುಂಬ ಅಸ್ವಾಭಾವಿಕ ರೀತಿಯಲ್ಲಿ ಉಸಿರಾಡುತ್ತಿದ್ದಳು. ನೋವಿನಿಂದ ಆಕೆಯ ಹೊಟ್ಟೆ, ಮೇಲೆ ಕೆಳಗೆ ಆಗುತ್ತಲಿತ್ತು. ಆಕೆ ಮೆತ್ತಗೆ ನರಳಿದಳು.... ಆಕೆಯ ಆ ಸ್ಥಿತಿ ಕಂಡು ನಾನು ಆಕೆಯ ಹತ್ತಿರಕ್ಕೆ ಹೋಗಿ ಕೇಳಿದೆ- "ಏನಾಗಿದೆಯಮ್ಮ ನಿನಗೆ? ಯಾರಾದರೂ ಹೊಡೆದರೆ-ಬಡಿದರೆ ಹೇಗೆ?" ಎಂದು. ಆಕೆ ಕುಳಿತಂತೆಯೆ ಆ ಧೂಳಿನಲ್ಲಿ ಒಂದು ಕಾಲನ್ನು ಇನ್ನೊಂದು ಕಾಲಿಗೆ ತಿಕ್ಕಿದಳು- ಹಾಗೂ ತನ್ನ ಭಾರವಾದ ತಲೆಯನ್ನು ಅಲ್ಲಾಡಿಸುತ್ತ ಹೇಳಿದಳು, "ಹೊರಟು ಹೋಗು

**ಜಾಹೀರಾತು**

ನಿತ್ಯ ಪತ್ರಿಕೆಗಳಲ್ಲಿ ಭ್ರಷ್ಟಾಚಾರದ ಬಗೆಗೆ
ಬರುವ ಸುದ್ದಿಗಳು ಒಂದು ರೀತಿಯಲ್ಲಿ
ಭ್ರಷ್ಟಾಚಾರದ ಜಾಹೀರಾತು!
ಕೆಲವರು ಶಿಷ್ಟರೂ ಅತ್ತ ಮನಸ್ಸು
ಹರಿಸಬಹುದು, ತಮ್ಮ
ಬವಣೆಗೆ ಬೇಸತ್ತು!

● ಸಿ.ಪಿ.ಕೆ.

ಇಲ್ಲಿಂದ. ನಿನಗೆ ಎಳ್ಳಷ್ಟೂ ನಾಚಿಕೆಯಿಲ್ಲವೆಂದು ತೋರುತ್ತದೆ.... ಹುಂ.... ಹೊರಟು ಹೋಗು...."

ಈಗ ನನಗೆ ಕೊಂಚಕೊಂಚ ಸಂದರ್ಭ ಏನು ಎಂಬುದು ಅರ್ಥವಾಗತೊಡಗಿತು. ನಾನು ಈ ಮೊದಲು ಒಮ್ಮೆ ಇಂಥ ಸ್ಥಿತಿಯನ್ನು ನೋಡಿದ್ದೆ. ಅಲ್ಲಿಂದ ಪೊದೆಯ ಮರೆಗೆ ಬಂದೆ. ಅಷ್ಟರಲ್ಲಿ ಆಕೆ ಭಯವಾಗುವಂತೆ ಚೀರಿಕೊಂಡಳು. ಹೊರಳಿ ನೋಡಿದೆ. ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿರುವುದನ್ನು ಕಂಡೆ. ಮುಖದಲ್ಲಿ ಅಸಹಾಯಕತೆಯ ಛಾಯೆ ಹರಡಿತ್ತು. ಈ ಸ್ಥಿತಿಯೇ ನನ್ನನ್ನು ಆಕೆಯ ಹತ್ತಿರಕ್ಕೆ ಬಲವಂತವಾಗಿ ಎಳೆದೊಯ್ಯಿತು. ನನ್ನ ಬಗಲಲ್ಲಿದ್ದ ಜೋಳಿಗೆ, ಚಹಾದ ಡಬ್ಬಿ ಇತ್ಯಾದಿ ಸಾಮಾನುಗಳನ್ನು ನೆಲದ ಮೇಲೆ ಇರಿಸಿದೆ ಹಾಗೂ ಆಕೆಯನ್ನು ನೆಲದ ಮೇಲೆ ಅಂಗಾತ ಮಲಗಿಸಿ, ಆಕೆಯ ಎರಡೂ ಕಾಲುಗಳನ್ನು ಆಕೆಯ ಹೊಟ್ಟೆಯೆಡೆಗೆ ಮಡಚುವವನಿದ್ದೆ. ಅಷ್ಟರಲ್ಲಿ ಆಕೆ ನನ್ನನ್ನು ಜೋರಾಗಿ ಹಿಂದಕ್ಕೆ ಕಾಲಿನಿಂದ ತಳ್ಳಿಬಿಟ್ಟಳು. ನನ್ನ ಮುಖ ಎದೆಯ ಮೇಲೆ ತನ್ನ ಸಂಪೂರ್ಣ ಶಕ್ತಿ ಉಪಯೋಗಿಸಿ ಗುದ್ದಿದಳು; ಹಾಗೂ ನಿಬಿಡವಾದ ಪೊದೆಗಳಲ್ಲಿ ಹೋಗಿ ಅಡಗಿ ಕುಳಿತುಕೊಂಡು ನನ್ನತ್ತ ನೋಡುತ್ತ ಒದರಿಕೊಳ್ಳತೊಡಗಿದಳು "ಸೈತಾನನ ಮಗನೇ..... ಪಶು...." ಎಂದೆಲ್ಲಾ....

ಕೆಲ ಸಮಯದ ನಂತರ ಮತ್ತೆ ಆಕೆ ಸುಸ್ತಾದಳು. ನೆಲದ ಮೇಲೆ ಬಿದ್ದುಕೊಂಡಳು. ನರಳುತ್ತ ತನ್ನ ಕಾಲುಗಳನ್ನು ಮುದುಡಿಕೊಂಡಳು. ಇದನ್ನೆಲ್ಲ ನೋಡುತ್ತಿದ್ದ ನನಗೆ ಈ ವಿಷಯದಲ್ಲಿ ಅನುಸರಿಸಬೇಕಾದ ಎಲ್ಲ ಸಂಗತಿಗಳು ನೆನಪಾಗತೊಡಗಿದವು. ನಾನು ಮತ್ತೆ ಹೋಗಿ ಆಕೆಯನ್ನು ಅಂಗಾತ ಮಲಗಿಸಿ ಎರಡೂ ಕಾಲುಗಳನ್ನು ಹೊಟ್ಟೆಯ ಕಡೆಗೆ ಮಡಿಚಿದೆ. ಆಗ ಗರ್ಭಾಶಯದ ಬಲೆಯ ಹಾಗಿದ್ದ ಹೊರಗಿನ ಭಾಗ ಕಾಣಿಸತೊಡಗಿತು. ನಾನು ಆಕೆಗೆ ಅತ್ಯಂತ ಕರುಣೆ ತುಂಬಿದ ದನಿಯಲ್ಲಿ "ಸುಮ್ಮನೇ ಮಲಗಿರು.... ಇನ್ನೇನು ನೀನು ತಾಯಿ ಆಗಲಿರುವೆ. ಹೊಸ ಜೀವ, ರಶಿಯದ ಹೊಸ ಮನುಷ್ಯನ ಜನನವಾಗಲಿದೆ. ಧೈರ್ಯವಾಗಿ ಈ ನೋವನ್ನು ಕೊಂಚ ಸಹಿಸು...." ಎಂದು ಹೇಳಿ ಅಲ್ಲಿಯೇ ಸಮೀಪವಿದ್ದ ತೀರಕ್ಕೆ ಓಡಿದೆ. ಅಂಗಿಯ ತೋಳು ಏರಿಸಿ ಎರಡೂ ಕೈಗಳನ್ನು ಸ್ವಚ್ಛವಾಗಿ ತೊಳೆದುಕೊಂಡು ಕೂಡಲೇ ಆಕೆಯಿದ್ದಲ್ಲಿಗೆ ಮರಳಿದೆ. ಈಗ ನಾನು ಸೂಲಗಿತ್ತಿಯ ಕೆಲಸ ಮಾಡಲು ಸಂಪೂರ್ಣ ಸಿದ್ಧಗೊಂಡಿದ್ದೆ.

ತಾಯಿಯಾಗಲಿರುವ ಆಕೆ ಬೆಂಕಿಯ ಜ್ವಾಲೆಗಳಲ್ಲಿ ಬಿದ್ದಿರುವ ಕಮಲಪತ್ರದ ದೇಟಿನ ಹಾಗೆ ಒದ್ದಾಡುತ್ತಿದ್ದಳು. ಹೆರಿಗೆಯ ನೋವು ತಾಳಲಾರದೆ ಮಗ್ಗುಲಿರುವ ನೆಲವನ್ನು ತನ್ನ ಅಂಗೈಗಳಿಂದ ಜಡಿಯುತ್ತಿದ್ದಳು. ಒಣಗಿದ ಹುಲ್ಲನ್ನು ಕೈಯಿಂದ ಕಿತ್ತು ಬಾಯಲ್ಲಿ ತುರುಕಿಕೊಳ್ಳಲು ಪ್ರಯತ್ನಿಸುತ್ತಿದ್ದಳು. ಅಷ್ಟರಲ್ಲಿ ಗರ್ಭಾಶಯದಿಂದ ಮಗುವಿನ ತಲೆ ಕಾಣಿಸತೊಡಗಿತು. ನಾನು ಶಕ್ತಿಯೆಲ್ಲ ಉಪಯೋಗಿಸಿ ಆಕೆಯ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಮಗು ಹೊರಗೆ ಬರಲು ಸಹಾಯ ಮಾಡಿದೆ. ಆಕೆ ನೋವಿನಿಂದಾಗಿ ಬಾಯಲ್ಲಿ ಹುಲ್ಲು ತುರುಕಿಕೊಳ್ಳದಂತೆಯೂ ನೋಡಿಕೊಂಡೆ.

ನಾವಿಬ್ಬರೂ ಪರಸ್ಪರರನ್ನು ಬೈದುಕೊಂಡೆವು. ಆಕೆ ಹಲ್ಲು ಕಡಿಯುತ್ತಿದ್ದಳು. ನಾನು ಮೆಲ್ಲಗೆ ಏನೇನೋ ಅಂದುಕೊಳ್ಳುತ್ತಿದ್ದೆ. ಆಕೆ ಹೆರಿಗೆಯ ನೋವು ಹಾಗೂ ನಾಚಿಕೆಯಿಂದ ವಟವಟ ಅನ್ನುತ್ತಿದ್ದಳು. ನಾನೋ ಗಾಬರಿ, ಹೆದರಿಕೆ ಹಾಗೂ ಆಕೆಯ ಸ್ಥಿತಿಯ ಬಗ್ಗೆ ನನ್ನಲ್ಲಿ ಉಂಟಾಗಿದ್ದ ಪರಮ ಕರುಣೆಯಿಂದಾಗಿ ವಟವಟ ಅನ್ನುತ್ತಿದ್ದೆ.

ಆಕೆಯ ಬಾಯ ಮೂಲೆಯಿಂದ ಜೊಲ್ಲು ಸುರಿಯತೊಡಗಿತ್ತು. ಬಿಸಿಲಿನ ತಾಪ ಹಾಗೂ ತಾಯ್ತನದ ಅಸಹನೀಯ ವೇದನೆಯ ಪ್ರತೀಕವೇನೋ ಎನ್ನುವಂತೆ ಆಕೆಯ ಕಣ್ಣುಗಳಿಂದ ಕಣ್ಣೀರು ಧಾರಾಕಾರವಾಗಿ ಹರಿಯತೊಡಗಿದ್ದವು. ಆಕೆಯ ಸಮಸ್ತ ಶರೀರ ನೋವಿನಿಂದ ತತ್ತರಿಸಿ ಹೋಗಿತ್ತು..... ಇಂಥ ಸ್ಥಿತಿಯಲ್ಲೂ ಆಕೆ ನನ್ನನ್ನು- "ಹೋಗು, ಹೊರಟು ಹೋಗು, ಶೈತಾನ" ಎನ್ನುತ್ತಲೇ ಇದ್ದಳು. ಆಗ ನಾನು ಕರುಣೆ, ವಿನಮ್ರತೆಯಿಂದ ಹೇಳಿದೆ. "ಇನ್ನಿಷ್ಟು ಜೋರಾಗಿ ನಿನ್ನೆಲ್ಲ ಶಕ್ತಿ ಕೂಡಿಸಿ, ಹೊರಕ್ಕೆ ಅದುಮು ತಾಯಿ. ಈ ನೋವು ಕೊನೆಗೊಳ್ಳುತ್ತದೆ" ಎಂದು. ಆಕೆಯ ಸ್ಥಿತಿ ಕಂಡು ನಾನು ಸಂಪೂರ್ಣ ಕರಗಿ ಹೋಗಿದ್ದೆ. ನನ್ನ ಹೃದಯ ಬಾಯಿಗೇ ಬಂದಿತ್ತು. ಆಕೆಯ ಕಣ್ಣೀರು

ನನ್ನದೇ ಕಣ್ಣೀರೆಂಬ ಅನುಭವ ನನಗಾಗುತ್ತಲಿತ್ತು. ಇನ್ನೇನು ನನ್ನ ಹೃದಯ ಒಡೆದು ಚೂರಾಗುತ್ತದೆ ಕೈಸಿ ಒದರಿಕೊಂಡೆ-- "ತಾಯಿಯೇ... ಇನ್ನಿಷ್ಟು ಜೋರಾಗಿ.... ಇನ್ನೂ ಜೋರಾಗಿ ಅದುಮು." ಹಾಗೆಯೆ ಕೈ ಹಾಕಿದೆ. ಏನಚ್ಚರಿ... ನನ್ನ ಕೈಗುಂಟವೇ ಬಂತು ನವಜಾತ ಪುಟ್ಟ ಕೂಸು. ಕೆಂಪು ಕೆಂಪು ಪುಟ್ಟ ಕೂಸು... ನನ್ನ ಕಣ್ಣಿಂದ ಆನಂದ ಭಾಷ್ಪ ಗಳು ಉದುರತೊಡಗಿದುವು...... ಅವನು ಒಂದೇ ಸವನೇ ಕಾಲು ಬಡಿದು ಅಳುತ್ತಲಿದ್ದ..... ಇನ್ನೂ ಈ ಪುಟ್ಟ ಮಾನವ ತನ್ನ ತಾಯ ಸಂಬಂಧ ಕಡಿದುಕೊಂಡಿರಲಿಲ್ಲ. ಅವನ ಕಣ್ಣುಗಳು ನೀಲಿ ಯಾಗಿದ್ದವು.... ಅವನು ಚೀರಿಕೊಳ್ಳುವಾಗಲೆಲ್ಲ ಅವನ ಹವಳದಂಥ ತುಟಿಗಳು ಅಲ್ಲಾಡುತ್ತಿ ದ್ದವು..... 'ಅ.... ಯಾ.... ಉ.... ಅಹ..... ಯಾ...... ಅ.... ಅ..... ಆ.... ಅ.... ಅಹೂ....'

ನನ್ನ ಕೈಯಿಂದ ಎಲ್ಲಿ ಜಾರುವುದೋ ಎಂಬ ಭಯ ನನಗೆ. ಅಷ್ಟು ನುಣುಪಾಗಿತ್ತು ಮಗು. ನಾನು ಮೊಣಕಾಲೂರಿ ಕುಳಿತು ಆ ನವಜಾತು ಶಿಶುವನ್ನು ನೋಡುತ್ತ ನಗುತ್ತೇನೆ. ಆನಂದ ಪ್ರಸನ್ನತೆಯ ನಗು ನಗುತ್ತೇನೆ..... ಈ ಸಂತಸದಲ್ಲಿ ಮುಂದೆ ಮಾಡ ಬೇಕಾಗಿರುವ ಕೆಲಸಗಳನ್ನೆಲ್ಲ ಮರೆತು ಬಿಡು ತ್ತೇನೆ.... ಆಗ ಆಕೆ ನೆನಪಿಸುತ್ತಾಳೆ ಪಿಸುದನಿಯಲ್ಲಿ, "ಹೊಕ್ಕಳ ಹುರಿ ಕತ್ತರಿಸು..." ಆಕೆಯ ಕಣ್ಣುಗಳು ಆಯಾಸದಿಂದ ಮುಚ್ಚಿದ್ದವು. ಆದರೆ ಮುಖದಲ್ಲಿ ಈ ಮೊದಲಿದ್ದ ಮ್ಲಾನತೆ ಕಳೆದು ತೃಪ್ತಿ ಆವರಿಸಿದೆ. ಮತ್ತೆ ಸಣ್ಣನ್ನ ದನಿಯಲ್ಲಿ ಹೇಳಿದಳು, "ನಿನ್ನಲ್ಲಿ ಚಾಕು ಇರಬೇಕಲ್ಲ, ಅದರಿಂದ ಹೊಕ್ಕಳ ಹುರಿ ಕತ್ತರಿಸು...." ಆದರೆ ನನ್ನಲ್ಲಿದ್ದ ಚಾಕುವನ್ನು ಗುಡಿ ಸಲಿನಲ್ಲಿದ್ದಾಗ ಯಾರೋ ಕದ್ದಿದ್ದರು. ಆದ್ದರಿಂದ ಹೊಕ್ಕಳ ಹುರಿಯನ್ನು ಹಲ್ಲಿನಿಂದಲೇ ಕಡಿದು ಕತ್ತರಿಸಿದೆ. ಮಗು ಜೋರಾಗಿ ಕೂಗಿಕೊಂಡಿತು. ತಾಯಿ ಮುಗಳ್ನಕ್ಕಳು. ನಾನು ತಾಯಿಯ ಕಣ್ಣಲ್ಲಿ ಹೊಸ ತೇಜಸ್ಸಿನ ಬೆಳಕನ್ನು ಕಂಡೆ..... ಅದರೊಂ ದಿಗೆ ತುಂಬ ಆಳದಲ್ಲಿ ನೀಲಿ ಜ್ವಾಲೆಯನ್ನು ನೋಡಿದೆ. ಆಕೆಯ ಹೊಲಸಾದ ಹಾಗೂ ಕಪ್ಪು ಕೈಗಳು ಲಂಗದ ಜೇಬನ್ನು ಹುಡುಕಲಾರಂಭಿಸಿ ದವು. ಹಲ್ಲುಗಳಿಂದ ಕಡಿದುಕೊಂಡದ್ದರಿಂದ ರಕ್ತ ದಿಂದ ತುಂಬಿದ ತುಟಿಗಳು ಅಲುಗಾಡಿದವು.

> **ಆಚಾರ?**
>
> ಎಲ್ಲೆಡೆ ಅತ್ಯಾಚಾರದ ಕೂಗು;
> ಅರ್ಥವಾಗದು!
> ಆಚಾರವೇ ಇಲ್ಲ
> ಈ ಕಾಲದಲ್ಲಿ; ಇನ್ನು
> ಅತಿ ಆಚಾರವೆಲ್ಲಿ ಬಂತು?
>
> ● ಸಿ.ಪಿ.ಕೆ

"ನನ್ನಲ್ಲಿ ಶಕ್ತಿಯಿಲ್ಲ.... ಹೊಕ್ಕಳ ಹುರಿಯನ್ನು ನನ್ನ ಕಿಸೆಯಲ್ಲಿ ಜೋಪಾನವಾಗಿಡು..." ಎಂದು ಹೇಳಿ ದಳು. ನಾನು ಆಕೆಯ ಜೇಬಿನಲ್ಲಿದ್ದ ಬಟ್ಟೆ, ದಾರ ತೆಗೆದುಕೊಂಡು ಹೊಕ್ಕಳ ಹುರಿಯನ್ನು ಕಟ್ಟಿ ಜೋಪಾನವಾಗಿರಿಸಿದೆ. ತಾಯಿ ಇನ್ನಿಷ್ಟು ಪ್ರಸನ್ನ ಳಾಗಿ ಮುಗಳ್ನಗತೊಡಗಿದಳು. ಆ ಮುಗುಳ್ನಗು ಅದೆನಿತು ನಿರ್ಮಲ, ಪವಿತ್ರ ಹಾಗೂ ಪ್ರಖರವಾ ಗಿತ್ತೆಂದರೆ ಅದನ್ನು ನೋಡಿ ನಾನು ಆಶ್ಚರ್ಯಚಕಿ ತನಾದೆ. "ನೀನು ಹೀಗೆಯೇ ಮಲಗಿ ವಿಶ್ರಾಂತಿ ತಗೋ ತಾಯಿ.... ನಾನು ಮಗುವಿನ ಮೈ ತೊಳೆಸಿಕೊಂಡು ಬರುತ್ತೇನೆ..." ಎಂದು ನಾನೆಂ ದಾಗ ತಾಯಿ "ಹಾಂ! ಆದರೆ ಜೋಕೆ... ಮೆಲ್ಲಗೆ ಈ ಕೆಲಸ ಮಾಡು" ಎಂದು ತುಂಬ ಉದ್ವಿಗ್ನತೆ ಯಿಂದ ಹೇಳಿದಳು.

ಆದರೆ ಈ ಪುಟ್ಟ ಕೆಂಪು ನವ ಮಾನವನನ್ನು ಜೋಕೆಯಿಂದ ಎತ್ತಿಕೊಳ್ಳುವ ಅವಶ್ಯಕತೆ ಇಲ್ಲ ಎನ್ನಿಸಿತು. ಅವನು ಆಗಲೇ ತನ್ನ ಎರಡೂ ಕೈಗಳ ಮುಷ್ಟಿಗಳನ್ನು ಗಾಳಿಯಲ್ಲಿ ಬೀಸುತ್ತ "ಹಾಂ.... ಹುಂ... ಯಾ...." ಎನ್ನುತ್ತ ಕೇಕೆ ಹೊಡೆಯುತ್ತ ದ್ವಂದ್ವ ಯುದ್ಧಕ್ಕಾಗಿ ಆಹ್ವಾನ ನೀಡುತ್ತಿದ್ದಾನೇನೋ ಎನ್ನುವ ಹಾಗೆ ತೋರುತ್ತಲಿದ್ದ. 'ಯಾ ಊ.... ಅ ಉ ಯಾ ಊ....' ಆತನ ರಾಗಾಲಾಪ ನಡೆದೇ ಇತ್ತು. "ಶಹಭಾಷ್... ಶಹಭಾಷ್... ಓ... ನನ್ನ ನವಬಂಧು.... ಧೈರ್ಯ ತಾಳು. ಗದ್ದಲ ಮಾಡು ಕೇಕೆ ಹಾಕು... ಇಲ್ಲದಿದ್ದರೆ ಅಚೆ ಈಚಿನ ಜನ ನಿನ್ನ ತಲೆ ತೆಗೆಯಬಹುದು. ಸಾಹಸಿಯಾಗು... " ಎನ್ನುತ್ತ ಅವನಲ್ಲಿ ಇನ್ನಿಷ್ಟು ಹುರುಪು ತುಂಬಿದೆ.

ಮೊದಲನೆಯ ತೆರೆ ಬಂದು ನಮ್ಮಿಬ್ಬರನ್ನು

ತೋಯಿಸಿತು. ಕೂಡಲೇ ಅವನು ಚೀರತೊಡಗಿದ. ನಾನು ಮೆಲ್ಲಗೆ ನೀರಿನಿಂದ ಅವನ ಮುಖ ತೊಳೆದೆ. ಎದೆ ತೊಳೆದೆ, ಬೆನ್ನು ತೊಳೆದೆ. ಆಗ ಅವನು ಕಣ್ಣು ಸಣ್ಣಗೆ ಮಾಡತೊಡಗಿದ. ಇನ್ನೊಂದು ತೆರೆ ಬಂದು ನಮ್ಮನ್ನು ತೋಯಿಸಿದಾಗ ಮತ್ತೆ ಚೀರಿದ, ನನ್ನ ಕೈಯಿಂದ ಇನ್ನೇನು ಜಾರುತ್ತಾನೇನೋ ಎನ್ನಿಸತೊಡಗಿತು..... ಆಗ ನಾನು ಇನ್ನೂ ಚೀರು.... ನಿನ್ನೆಲ್ಲ ಶಕ್ತಿ ಕೂಡಿಸಿ ಚೀರು," ಎಂದು ಅವನಿಗೆ ಉತ್ಸಾಹ ನೀಡಿದೆ. ಅವನ ಮೈ ತೊಳೆದುಕೊಂಡು ಮರಳಿ ಅವನ ತಾಯಿಯ ಹತ್ತಿರ ತಂದಾಗ ಆಕೆ ಮಲಗಿದ್ದಳಾದರೂ, ಪ್ರಸವದ ನಂತರ ಉಂಟಾಗುವ ನೋವಿನಿಂದ ವ್ಯಾಕುಲಗೊಂಡವಳಾಗಿ ನರಳುತ್ತ ತುಟಿ ಕಚ್ಚಿಕೊಳ್ಳುತ್ತಿದ್ದಳು. ಆದರೆ ಅವಳ ವ್ಯಾಕುಲತೆ ಹಾಗೂ ನರಳುವಿಕೆಯ ಮಧ್ಯ ಆಕೆಯ ಪಿಸುದನಿ ಕೇಳಿಸಿತು....

"ಕೊಡು...... ಅವನನ್ನು.... ಇಲ್ಲಿ ಕೊಡು...... ನನಗೆ...."

"ಅವನಿನ್ನೂ ತಡಕೊಳ್ಳಬಲ್ಲ...."

"ಇಲ್ಲ.... ಇಲ್ಲ.... ಅವನನ್ನು.... ನನಗೆ ಕೊಡು...." ಎಂದಳು.

ಕಂಪಿಸುವ ಕೈಗಳಿಂದ ತನ್ನ ಬೌಜಿನ ಗುಂಡಿ ಬಿಚ್ಚಿದಳು. ನಾನು ಆಕೆಗೆ ಆ ತುಂಬಿದ ಮೊಲೆ ಹೊರ ತೆಗೆವಲ್ಲಿ ಸಹಕರಿಸಿದೆ. ದೇವರು ಇಪ್ಪತ್ತು ಮಕ್ಕಳನ್ನು ಜೋಪಾನವಾಗುವಷ್ಟು ಆದರಲ್ಲಿ ಹಾಲು ದಯಪಾಲಿಸಿದ್ದಾನೆ. ನನ್ನ ತೋಳಲ್ಲಿ ಕೈಕಾಲು ಹೊಡೆಯುತ್ತಲಿದ್ದ ಆ ಪುಟ್ಟ ಓರೇಲ ನಿವಾಸಿಯನ್ನು ಆಕೆಯ ಬೆಚ್ಚಗಿನ ಎದೆಯ ಮೇಲೆ ಮಲಗಿಸಿದೆ. ಅವನಿಗೆ ಆ ಕೂಡಲೇ ಗೊತ್ತಾಯಿತೇನೋ... ಚೀರುವುದನ್ನು ನಿಲ್ಲಿಸಿದ....

"ಪವಿತ್ರ ಕುಮಾರಿ..... ದೇವರ ತಾಯಿಯೇ" ಎನ್ನುತ್ತ ನಿಟ್ಟುಸಿರುಬಿಟ್ಟ ಆ ತಾಯಿ ತನ್ನ ಅಸ್ತವ್ಯಸ್ತ ತಲೆಯನ್ನು ಅತ್ತಿತ್ತ ಅಲ್ಲಾಡಿಸತೊಡಗಿದಳು.

ಅದೇಕೋ ಒಮ್ಮೆಲೇ ಚೀರಿದ ಆಕೆ ಕೂಡಲೇ ಸುಮ್ಮನಾದಳು. ತನ್ನ ಭಾವಶೂನ್ಯ ಸುಂದರ ಕಣ್ಣುಗಳನ್ನು ತೆರೆದಳು. ಓರ್ವ ತಾಯಿಯ ಪವಿತ್ರ ಕಣ್ಣುಗಳು..... ಈಗ ತಾನೇ ಓರ್ವ ಮಗುವಿಗೆ ಜನ್ಮ ನೀಡಿದ ತಾಯಿಯ ಕಣ್ಣುಗಳು.... ಆ ಕಣ್ಣುಗಳು ನೀಲಿ ಆಗಿದ್ದವು.... ನೀಲಿ ಆಕಾಶದತ್ತ ತದೇಕಚಿತ್ತಳಾಗಿ ನೋಡತೊಡಗಿದಳು. ಆ ಕಣ್ಣುಗಳಲ್ಲಿ ಕೃತಜ್ಞತೆ ತುಂಬಿದ, ಪ್ರಸನ್ನವಾದ ಮುಗುಳ್ನಗೆಯೊಂದು ಮಿಂಚುತ್ತಿತ್ತು. ದಣಿದ ಕೈಯನ್ನು ಅತ್ಯಂತ ಕಷ್ಟದಿಂದ ಮೇಲೆತ್ತಿ ತನ್ನೆದೆಯ ಮೇಲೆ ಮಲಗಿ ಹಾಲು ಕುಡಿಯುತ್ತಿದ್ದ ಮಗುವಿನ ಮೇಲೆ ಕ್ರಾಸ್ ಚಿಹ್ನೆ ಮಾಡಿ "ಪವಿತ್ರ ತಾಯಿ ನಿನ್ನನ್ನು ರಕ್ಷಿಸಲಿ.... ದೇವ ಮಾತೆ ನಿನ್ನನ್ನು ಕಾಪಾಡಲಿ.... ಪವಿತ್ರ ಕುಮಾರಿ ನಿನ್ನನ್ನು ರಕ್ಷಿಸಲಿ" ಎಂದು ಪ್ರಾರ್ಥಿಸಿದಳು.

ಮತ್ತೆ ಆಕೆಯ ಕಣ್ಣುಗಳಲ್ಲಿದ್ದ ಬೆಳಕು, ಮಿಂಚು ಮಾಯವಾಯಿತು. ಮುಖದ ಮೇಲೆ ಮತ್ತೆ ಮೊದಲಿನಂತೆ ಕಪ್ಪು ಛಾಯೆ ಆವರಿಸಿತು. ಆಕೆ ಬಹಳ ಹೊತ್ತಿನವರೆಗೂ ಶಾಂತವಾಗಿ ಮಲಗಿದ್ದಳು. ತುಂಬ ಕಷ್ಟದಿಂದ ಉಸಿರಾಡುತ್ತಿದ್ದಳು. ಶಕ್ತಿ ಸಂಚಯಿಸಿ ಒಮ್ಮೆಲೇ ದೃಢವಾದ ಧ್ವನಿಯಲ್ಲಿ ಹೇಳಿದಳು. "ಏ ಹುಡುಗ, ನನ್ನ ಚೀಲ ಬಿಚ್ಚು" ನಾನು ಆಕೆಯ ಚೀಲ ಬಿಚ್ಚಿದೆ. ಆಕೆ ನನ್ನತ್ತ ನೋಡಿದಳು. ಆಕೆಯ ಮುಖದಲ್ಲಿ ಪೇಲವವಾದ ಮುಗುಳ್ನಗೆಯೊಂದು ಮಿನುಗಿತು. ಆಕೆಯ ಗುಳಿ ಬಿದ್ದ ಗಲ್ಲಗಳಲ್ಲಿ ಹಾಗೂ ಬೆವರಿನಿಂದ ತುಂಬಿದ ಹುಬ್ಬುಗಳ ಮೇಲೆ ಲಜ್ಜೆಯ ಒಂದು ಅಸ್ಪಷ್ಟ ಬೆಳಕನ್ನು ಕಂಡೆ.

"ಇಲ್ಲಿಂದ ಕೊಂಚದೂರು ಹೋಗು" ಎಂದು ಆಕೆ ನನಗೆ ಹೇಳಿದಾಗ-

"ಸಾವಧಾನಿಯಾಗಿರು, ಬಹಳ ತೊಂದರೆ ತೆಗೆದುಕೊಳ್ಳಬೇಡ" ಎಂದು ಸೂಚಿಸಿದೆ.

"ಸರಿ, ಹಾಗೇ ಆಗಲಿ.... ನೀನು ಮರೆಗೆ ಹೋಗು."

ನಾನು ಆಕೆಯ ಆಶೆಯಂತೆ ಅಲ್ಲಿಯೇ ಇದ್ದ ಕಂಟಿಯ ಮರೆಯಲ್ಲಿ ಅಡಗಿದೆ. ನಾನು ಬಹಳ ದಣಿದಿದ್ದೆ.... ಹಾಗಿದ್ದರೂ ನನ್ನ ಹೃದಯದಲ್ಲಿ ಒಂದು ಸುಂದರ ಪಕ್ಷಿ ಮಧುರವಾದ ಗೀತ ಹಾಡುತ್ತಲಿದೆ. ಅದರ ಈ ಸಂಗೀತ ಸಮುದ್ರದಿಂದ ನಿರಂತರ ಹೊರಡುವ ಧ್ವನಿಯೊಂದಿಗೆ ಬೆರೆತು ಅದೆಷ್ಟು ಆಕರ್ಷಕವಾಗಿತ್ತೆಂದರೆ ಇಡೀ ವರುಷ ನಾನು ಹೀಗೆಯೇ ಇಲ್ಲಿಯೆ ಕುಳಿತು ಅದನ್ನು ಕೇಳಬೇಕೆನ್ನಿಸುತ್ತಿತ್ತು. ಗಿಡ-ಗಂಟಿಗಳ

ಸಮೂಹದಿಂದ ಯಾವುದೋ ಒಂದು ನೀರ್ಝರಿಯ ಕಲರವ ಕೇಳಿ ಬರುತ್ತಲಿತ್ತು. ಯಾವಳೋ ಸುಂದರ ಯುವತಿ ತನ್ನ ಸಖಿಯೊಂದಿಗೆ ತನ್ನ ಪ್ರಿಯತಮನ ವಿಷಯವಾಗಿ ಮಾತನಾಡುತ್ತಿದ್ದಾಳೇನೋ ಎನ್ನುವಷ್ಟು ಆ ಕಲರವದ ಧ್ವನಿ ಮಧುರವಾಗಿತ್ತು......

ಪುಟ್ಟ ಪುಟ್ಟ ಕಂಟಿಗಳ ಮೇಲೆ ಒಂದು ತಲೆ ಹೊಳೆಯಿತು. ಹಳದಿ ವಸ್ತ್ರವನ್ನು ಚೆನ್ನಾಗಿ ತಲೆಗೆ ಕಟ್ಟಿಕೊಂಡಿದ್ದಳು. "ಏ, ಇದೇನು ಮಾಡಿದೆ? ತಾಯಿ, ಇಷ್ಟು ತೀವ್ರ ನೀನು ಎದ್ದು ಕುಳಿತಿಯೇನು? ನೀನು ಹೀಗೆ ಮಾಡಬಾರದಿತ್ತು...." ಎನ್ನುತ್ತ ಆಶ್ಚರ್ಯದಿಂದ ನಾನು ಕೂಗಿದೆ.

ಆಕೆ ಗಿಡದ ಆಸರೆ ಪಡೆದು ಕೆಳಗೆ ಕುಳಿತಳು. ಅವಳೆಲ್ಲ ಶಕ್ತಿಯನ್ನು ಯಾರೋ ಹೀರಿಕೊಂಡಿದ್ದಾರೆನ್ನುವ ಹಾಗೆ ಆಕೆಯ ಸ್ಥಿತಿಯಿತ್ತು. ಆಕೆಯ ಮುಖ ನಿಸ್ತೇಜವಾಗಿತ್ತು. ಕೇವಲ ಆಕೆಯ ಕಣ್ಣುಗಳಲ್ಲಿ ಮಾತ್ರ, ನೀಲಿ ಸರೋವರದ ಹಾಗೆ ಕಾಣುವ ಕಣ್ಣುಗಳಲ್ಲಿ ಮಾತ್ರ ಒಂದು ಅಪೂರ್ವ ಪ್ರಕಾಶವಿತ್ತು. ಆಕೆ ಸ್ಮಿತವದನಳಾಗಿ ಹೇಳಿದಳು...

"ನೋಡು, ಅವನು ಮಲಗಿದ್ದಾನೆ."

ಹೌದು, ಅವನು ಗಾಢವಾದ ನಿದ್ರೆಯಲ್ಲಿದ್ದ. ಆ ಮಗುವಿನ ಮಲಗುವಿಕೆ ಕೂಡ ಅನ್ಯ ಮಕ್ಕಳಿಗಿಂತ ಭಿನ್ನವೇನೂ ಆಗಿರಲಿಲ್ಲ. ಅಂತರವೇನಾದರೂ ಇದ್ದಲ್ಲಿ ಅದು ಕೇವಲ ಪರಿಸ್ಥಿತಿಯದು ಮಾತ್ರ. ಆ ಮಗು ಮೃದುವಾದ ಎಲೆಗಳ ಹಾಸಿಗೆಯ ಮೇಲೆ ಗಿಡದ ಬುಡದಲ್ಲಿ ಮಲಗಿದೆ. ಇಂಥ ಗಿಡಗಳು ಓರೇಲ ಗುಬೆರ್ನಿಯಾದಲ್ಲಿ ಸಾಮಾನ್ಯವಾಗಿ ಹುಟ್ಟುವುದಿಲ್ಲ.

"ನೀನು ಕೂಡ ಸ್ವಲ್ಪ ಹೊತ್ತು ಮಲಗು ತಾಯಿ" ಎಂದೆ. "ಇ...ಲ್ಲ...." ತುಂಬ ಮೃದು ದನಿಯಲ್ಲಿ ಹೇಳುತ್ತ ತಲೆ ಅಲ್ಲಾಡಿಸುತ್ತ ಮತ್ತೆ ಹೇಳಿದಳು. "ನನಗಿನ್ನೂ ಬಹಳ ಕೆಲಸವಿದೆ.... ಮತ್ತೆ ಆ ಸ್ಥಳಕ್ಕೆ ಹೋಗಬೇಕು. ಅಂದ ಹಾಗೆ ಅದರ ಹೆಸರೇನು....?"

"ಓಚಿಮಚೇರೀ."

"ಹಾಂ ಅದೇ.... ನನ್ನ ಸ್ಥಳ. ನನ್ನ ಜೊತೆಗಾರರು ಇಲ್ಲಿಂದ ಕೆಲವೇ ಮೈಲುಗಳ ದೂರದಲ್ಲಿರಬಹುದು....."

> **ವಿಫಲ**
>
> ಒಂದು ಕಡೆ,
> ಮಾನವ ಕಲ್ಯಾಣಕ್ಕಾಗಿ
> ನಡೆಯುತ್ತವೆ ನಾನಾ ಜಾಥಾ;
> ಇನ್ನೊಂದು ಕಡೆ,
> ಹಾಕಿಕೊಂಡ ಕಾರ್ಯಕ್ರಮಗಳೆಲ್ಲ
> ಹೊಡೆಯುತ್ತವೆ ಗೋತಾ!
>
> ● ಸಿ.ಪಿ.ಕೆ

"ಆದರೆ ನೀನು ನಡೆಯಬಲ್ಲೆಯಾ?"

"ಪವಿತ್ರ ಕುಮಾರಿಯ ಕೃಪೆ, ಕರುಣೆ ಇದೆ. ಆಕೆ ನನಗೆ ಸಹಾಯ ಮಾಡಲಾರಳೇ?"

ಸರಿ. ಆಕೆ ಪವಿತ್ರ ಕುಮಾರಿಯ ಸಹಾಯದಿಂದ ಹೋಗಲಿರುವಾಗ ನಾನಾಕೆಗೆ ಹೇಳುವುದು ಏನೂ ಇರಲಿಲ್ಲ.

ಕೆಳಗೆ ಮಲಗಿರುವ ಆ ಪುಟ್ಟ ನವಜಾತನನ್ನು ನೋಡಿದೆ. ಮಗುವಿನ ಕಣ್ಣುಗಳಿಂದ ಸ್ನೇಹದ ಮಧುರ ಕಿರಣಗಳು ಹೊರಹೊಮ್ಮತೊಡಗಿದವು. ಮಗು ತುಟಿಗಳನ್ನು ನೆಕ್ಕಿಕೊಂಡಿತು. ಹಾಗೂ ಮೆಲ್ಲನೆ ತನ್ನೆದೆಯನ್ನು ಚಪ್ಪರಿಸಿಕೊಂಡಿತು. ನಾನು ಬೆಂಕಿ ಹೊತ್ತಿಸಿ ಕಿಟಲಿಯಿಡಲು ಕಲ್ಲುಗಳನ್ನು ಜೋಡಿಸುತ್ತ ಹೇಳಿದೆ,

"ನಾನು ಒಂದೇ ಕ್ಷಣದಲ್ಲಿ ನಿನಗೆ ಚಹಾ ಮಾಡಿಕೊಡುವೆ ತಾಯಿ."

"ಓ! ಇದು ತುಂಬ ಒಳ್ಳೆಯದು. ನನ್ನೆದೆ ಒಣಗಿದ ಹಾಗಾಗಿದೆ..." ಎಂದಳಾಕೆ.

"ಏನು, ನಿನ್ನ ಜೊತೆಗಾರರು ನಿನ್ನನ್ನು ಬಿಟ್ಟು ಹೋಗಿದ್ದಾರೇನು?"

"ಇಲ್ಲ, ನಾನೇ ಹಿಂದೆ ಉಳಿದೆ. ಅವರೆಲ್ಲ ಕೊಂಚ ಕುಡಿದಿದ್ದರು. ಅವರು ಇಲ್ಲದ್ದೇ ಒಳ್ಳೆಯದಾಯಿತು....."

ಆಕೆ ನನ್ನತ್ತ ನೋಡಿದಳು.... ಕೈಗಳಿಂದ ತನ್ನ ಮುಖ ಮುಚ್ಚಿಕೊಂಡಳು..... ನಾಚಿಕೆಯಿಂದ ಮುಗುಳ್ನಗತೊಡಗಿದಳು.....

"ಇದು ನಿನ್ನ ಮೊದಲ ಮಗುವೇನು?" ಎಂದು ಕೇಳಿದೆ.

"ಹೌದು, ನನ್ನ ಮೊದಲ ಮಗು, ಅಂದ

ಹಾಗೆ ನೀನಾರು?"

"ಗೊತ್ತಾಗುವುದಿಲ್ಲವೇ.... ಮನುಷ್ಯನ ಹಾಗೆಯೇ ಇದ್ದೇನಲ್ಲ..."

"ಹಾಂ, ಹಾಂ, ನೀನು ಅಪ್ಪಟ ಮನುಷ್ಯನ ಹಾಗೆಯೇ ಕಾಣುಸುತ್ತಿರುವೆ. ನಿನ್ನ ಮದುವೆ ಆಗಿದೆಯೇನು?"

"ನನಗಿನ್ನೂ ಈ ಗೌರವ ದೊರಕಿಲ್ಲ."

"ನೀನು ಸುಳ್ಳು ಹೇಳುತ್ತಿರುವೆ."

"ಇಲ್ಲ, ನಾನೇಕೆ ಸುಳ್ಳು ಹೇಳಲಿ?" ಮುಖ ಕೆಳಗೆ ಮಾಡಿದ ಆಕೆ ಮತ್ತೆ ಕೇಳಿದಳು.

"ಹಾಗಾದರೆ ಹೆಂಗಸರ ಈ ಕೆಲಸದ ಬಗ್ಗೆ ಇಷ್ಟೆಲ್ಲ ಹೇಗೆ ಅರಿತುಕೊಂಡಿರುವೆ?"

ಈಗ ನಾನು ಸುಳ್ಳು ಹೇಳಿದೆ. "ನಾನು ಇದನ್ನು ಕಲಿತಿದ್ದೇನೆ. ನಾನು ವಿದ್ಯಾರ್ಥಿ. ವಿದ್ಯಾರ್ಥಿ ಯಾರಿಗನ್ನುತ್ತಾರೆಂಬುದು ನಿನಗೆ ಗೊತ್ತೇನು?"

"ಹಾಂ! ನನಗೆ ಗೊತ್ತು. ನಮ್ಮ ಪಾದರಿಯ ಹಿರಿಯ ಮಗ ವಿದ್ಯಾರ್ಥಿಯಿದ್ದಾನೆ... ಅವನು ಪಾದರಿಯಾಗಲು ವಿದ್ಯೆ ಕಲಿಯುತ್ತಿದ್ದಾನೆ."

"ಸರಿ. ನಾನು ಕೂಡ ಅವರಲ್ಲೊಬ್ಬ.... ನಾನು.... ನೀರು ತರುತ್ತೇನೆ."

ಆ ಹೆಂಗಸು ಹೊರಳಿ ತನ್ನ ಮಗುವಿನತ್ತ ನೋಡಿದಳು... ಆದರೆ ಉಸಿರಾಟ ನೋಡಿ ಸಮಾಧಾನಗೊಂಡ ಆಕೆ ಮತ್ತೆ ಸಮುದ್ರದತ್ತ ನೋಡಿ ಹೇಳಿದಳು-

"ನಾನು ಸ್ನಾನ ಮಾಡಬೇಕು.... ಆದರ ಇಲ್ಲಿಯ ನೀರು ಹೇಗಿದೆಯೋ ಗೊತ್ತಿಲ್ಲ... ಇದು ಎಂಥ ನೀರು? ಇದು ಉಪ್ಪು ಹಾಗೂ ಸಪ್ಪೆ ಎರಡೂ ರೀತಿಯದಾಗಿದೆಯೋ ಹೇಗೆ?"

"ಹಾಗೇನಿಲ್ಲ, ನೀನು ಸ್ನಾನ ಮಾಡಬಹುದು. ಇದು ಒಳ್ಳೆಯ ನೀರು."

"ಏನು ಹೇಳಿದೆ?"

"ಹಾಂ... ಹಾಂ.... ನಾನು ನಿಜವನ್ನೇ ಹೇಳುತ್ತಿದ್ದೇನೆ. ನೀರ್ಝರಿಣಿಯ ನೀರಿಗಿಂತ ಈ ನೀರು ಬೆಚ್ಚಗಾಗಿದೆ. ನೀರ್ಝರಿಣಿಯ ನೀರು ಹಿಮದ ಹಾಗೆ ತಂಪಾಗಿದೆ...."

"ನೀನು ಸರಿಯಾಗಿ ತಿಳಿದಿರಬೇಕು."

ಓರ್ವ ಅಬಖಾಜಿಯಾದ ನಿವಾಸಿ ಕುರಿಯ ಉಣ್ಣೆಯ ಟೊಪ್ಪಿಗೆ ಹಾಕಿಕೊಂಡು ಕುದುರೆಯ ಮೇಲೆ ಹತ್ತಿ ಸಾವಕಾಶವಾಗಿ ಅಲ್ಲಿಂದ ಹೊರಟ. ಅವನ ತಲೆ ಹೆಗಲಿಗೆ ವಾಲಿತ್ತು. ಬಹುಶಃ ಅವನು ತೂಕಡಿಸುತ್ತಿರಬೇಕು. ಅವನ ಪುಟ್ಟ ತೆಳ್ಳಗಿನ ಕುದುರೆ, ತನ್ನೆರಡೂ ಕಿವಿಗಳನ್ನೂ ನಿಗುರಿಸಿ, ತನ್ನ ಕಣ್ಣುಗಳನ್ನು ಕೊಂಚ ತಿರುಗಿಸಿ ನಮ್ಮತ್ತ ನೋಡಿ "ಹೀ.... ಹೀ...." ಎಂದು ಹೇಕರಿಸಿತು. ಕುದುರೆಯ ಮೇಲಿದ್ದಾತ ಕೂಡಲೇ ತಲೆಯೆತ್ತಿ ನಮ್ಮತ್ತ ನೋಡಿ ತಲೆ ಬಾಗಿಸಿದ.

"ಇಲ್ಲಿಯ ಮನುಷ್ಯರು ತುಂಬ ವಿಚಿತ್ರ ಹಾಗೂ ತುಂಬ ಭಯಂಕರ ಕಾಣಿಸುತ್ತಾರೆ," ಎಂದು ಓರೇಲದ ಆ ಹೆಣ್ಣು ಮಗಳು ಮೆಲ್ಲಗೆ ನುಡಿದಳು.

ನಾನು ನೀರ್ಝರಿಣಿಯತ್ತ ಹೋದೆ. ಅದರ ನೀರು ಪಾರದರ್ಶಕದ ಹಾಗೆ ಹೊಳೆಯುತ್ತಿತ್ತು. ಚಂಚಲವಾಗಿತ್ತು. ಕಲ್ಲಿನ ಮೇಲೆ ಬೀಳುತ್ತ ಚೆಲ್ಲು ವರಿಯುತ್ತ, ಹಾರುತ್ತ ಕೆಳಗೆ ಧುಮುಕುತ್ತಿತ್ತು. ಶಿಶಿರದಲ್ಲಿ ಉದುರಿದ ಎಲೆಗಳು ಇದರಲ್ಲಿ ಬಿದ್ದು ಆನಂದದಿಂದ ನೃತ್ಯಗೈಯುತ್ತಲಿದ್ದವು. ಎಂಥ ಅದ್ಭುತ ಹಾಗೂ ಸುಂದರ ದೃಶ್ಯವದು! ನಾನು ಕೈ ಕಾಲು ಮುಖ ತೊಳೆದುಕೊಂಡೆ, ನೀರು ತುಂಬಿಕೊಂಡೆ. ನನ್ನ ಬೆನ್ನಿಗೆ ಇದ್ದ ಕಂಟಿಯಲ್ಲಿ ಆಕೆ ಅತ್ತಿತ್ತ ಚಲಿಸುತ್ತಿರುವಂತೆ ಕಂಡೆ. ಆಕೆ ಚಿಂತಿತಳಾಗಿ ಹಿಂದೆ ನೋಡುತ್ತಿದ್ದಳು.

"ಏನು ವಿಷಯ?" ಎಂದು ನಾನು ಕೇಳಿದೆ. ಆಕೆ ನಿಂತಳು. ಬಹುಶಃ ಹೆದರಿಕೊಂಡಿರಬೇಕು. ಆಕೆಯ ಮುಖ ಕಪ್ಪಾಯಿತು. ಆಕೆ ತನ್ನ ಶರೀರದ ಕೆಳಗಡೆ ಏನನ್ನೋ ಬಚ್ಚಿಡಲು ಹವಣಿಸುತ್ತಿದ್ದಳು. ಅದೇನು ಎಂಬುದನ್ನು ನಾನು ತಿಳಿದುಕೊಂಡೆ. "ಅದನ್ನು ಇಲ್ಲಿ ನನಗೆ ಕೊಡು. ನಾನದನ್ನು ಭೂಮಿಯಲ್ಲಿ ಹುಗಿಯುತ್ತೇನೆ"

"ಓ! ನನ್ನ ಪ್ರೀತಿಯವನೇ, ನೀನು ಯಾವುದರ ಬಗ್ಗೆ ಮಾತನಾಡುತ್ತಿರುವೆ? ಇದನ್ನು ಯಾವುದಾದರೊಂದು ಬಚ್ಚಲು ಮನೆಯ ನೆಲದೊಳಗೆ ಹುಗಿಯಬೇಕು..."

"ಅವರು, ನಿನಗಾಗಿ ಇಲ್ಲಿ ಸ್ನಾನ ಗೃಹಕಟ್ಟಬಹುದೆಂದು ತಿಳಿದಿದ್ದೀಯಾ?"

"ನೀನು ಚೇಷ್ಟೆ ಮಾಡುತ್ತಿರುವೆ, ನನಗೆ ನೋಡಿದರೆ ಹೆದರಿಕೆಯಾಗುತ್ತಲಿದೆ. ಯಾವುದಾದರೂ

ಪ್ರಾಣ್ ಇದನ್ನು ಕಿದರಿ ತೆಗೆದು ತಿಂದರೆ.... ಅವರೂ ಇದನ್ನು ಹುಗಿಯಲೇ ಬೇಕು..." ಎಂದೆ ನ್ನುತ್ತ ಅತ್ತ ಮುಖ ಹೊರಳಿಸಿ ನನ್ನ ಕೈಗೆ ಹಸಿಹಸಿಯಾಗಿರುವ ಚೀಲವೊಂದನ್ನು ಇರಿಸಿ, ಸಾಚುತ್ತ, ಮೆಲ್ಲಗೆ ವಿನಂತಿ ಮಾಡಿಕೊಳ್ಳುವ ರೀತಿಯಲ್ಲಿ ಹೇಳಿದಳು,

"ಇದನ್ನು ಆಳವಾದ ತಗ್ಗಿನಲ್ಲಿ ಹುಗಿಯುತ್ತೀ ತಾನೇ? ಎಷ್ಟು ಸಾಧ್ಯವೋ ಅಷ್ಟು ಆಳದ ತಗ್ಗಿನಲ್ಲಿ.... ದೇವರಿಗಾಗಿ.... ನನ್ನ ಮಗುವಿಗಾಗಿ.... ನೀನು ಹೀಗೆ ಮಾಡುತ್ತೀ.... ತಾನೇ?"

ನಾನು ಹಾಗೆ ಮಾಡುವುದಾಗಿ ಹೇಳಿ, ಆಕೆಯ ಆಶಯದಂತೆ ಅದನ್ನು ಆಳವಾದ ತಗ್ಗಿನಲ್ಲಿ ಹುಗಿದು ಬಂದಾಗ ಆಕೆ ಕಡಲ ತೀರದಲ್ಲಿ ಹೊಯ್ದಾಡುತ್ತ ನಡೆದಾಡುವುದನ್ನು ಕಂಡೆ. ಆಕೆಯ ಲಂಗ ಟೊಂಕದವರೆಗೂ ಹಸಿಯಾಗಿತ್ತು. ಆಕೆಯ ಮುಖದಲ್ಲಿ ಒಂದು ಅಮೋಘ ಕಳೆ ಲಾಸ್ಯವಾಡ ತೊಡಗಿತ್ತು. ಅದು ಆಕೆಯ ಅಂತರಂಗದ ಕಳೆ. ತೇಜವಾಗಿತ್ತು, ಪ್ರಸನ್ನತೆಯಾಗಿತ್ತು. ಆಕೆಗೆ ನಾನು ಆಸರೆ ನೀಡಿ ಉರಿಯುತ್ತಿದ್ದ ಬೆಂಕಿಯ ಹತ್ತಿರ ಕರೆದು ತಂದೆ. ಅಚ್ಚರಿಯಿಂದ ಯೋಚಿಸತೊಡ ಗಿದೆ, ಆಕೆಯಲ್ಲಿದ್ದ ಅಪೂರ್ವ ಶಕ್ತಿಯ ಬಗ್ಗೆ....

ಅನಂತರ ನಾವಿಬ್ಬರೂ ಜೇನು ಸಹಿತ ಚಹಾ ಕುಡಿಯತೊಡಗಿದಾಗ ಆಕೆ ನನ್ನನ್ನು ಕೇಳಿದಳು.

"ನಿನ್ನ ಓದು ಮುಗಿಸಿದ್ದೀಯಾ?"

"ಹಾಂ...."

"ಏಕೆ? ನೀನು ಸೆರೆ ಕುಡಿಯಲು ಕಲಿ ತೆಯಾ?"

"ಹಾಂ ತಾಯೆ, ನಾನು ಕೆಟ್ಟ ಜನರ ಸಹವಾ ಸಕ್ಕೊಳಗಾಗಿದ್ದೆ."

"ಅವರ ಸಹವಾಸ ಬಿಟ್ಟು ಈಗ ಒಳ್ಳೆಯದು ಮಾಡಿದೆ. ನನಗೆ ನಿನ್ನ ನೆನಪಿದೆ. ಸುಖುಮ್‌ದಲ್ಲಿ ನಿನ್ನನ್ನು ನಾನು ನೋಡಿದ್ದೆ. ಮಾಲಿಕನೊಂದಿಗೆ ಊಟದ ಬಗ್ಗೆ ಜಗಳವಾಡುತ್ತಿದ್ದೆ. ನಾನಾಗ ನನ್ನ ಲ್ಲಿಯೇ ಅಂದುಕೊಂಡಿದ್ದೆ. ಅವನು ಅವಶ್ಯ ಸೆರೆ ಕುಡಿಯುತ್ತಿರಬೇಕು, ಅವನು ಯಾರಿಗೂ ಹೆದರು ವುದಿಲ್ಲ ಎಂದು."

ಊದಿಕೊಂಡಿದ್ದ ತುಟಿಗಳಿಂದ ಜೇನುತುಪ್ಪ ನೆಕ್ಕುತ್ತ ಅವಳು ತನ್ನ ನೀಲಿ ಕಣ್ಣುಗಳನ್ನು ಮತ್ತೆ ಮತ್ತೆ ಬಳಿ ಕಂಟೆಗಳತ್ತ ಹೊರಳಿಸುತ್ತಿದ್ದಳು.... ಅಲ್ಲಿ ನವಜಾತ ಓರೇಲವಾಸಿ ಶಾಂತವಾಗಿ ನಿದ್ರೆ ಮಾಡುತ್ತಿರುವುದನ್ನು ನೋಡಲು.

"ಅವನು ಹೇಗೆ ಜೀವಿಸಿರಬಲ್ಲ?" ಎಂದು ಅವಳು ನನ್ನತ್ತ ನೋಡುತ್ತ ನಿಟ್ಟುಸಿರುಬಿಡುತ್ತ ಮತ್ತೆ ಹೇಳಿದಳು "ನೀನು ನನಗೆ ಸಹಾಯ ಮಾಡಿದೆ. ಅದಕ್ಕಾಗಿ ಧನ್ಯವಾದಗಳು."

ಊಟ ಮಾಡಿದ ನಂತರ ನಾನು ನನ್ನ ಸಾಮಾನುಗಳನ್ನೆಲ್ಲ ಕಟ್ಟಿಕೊಳ್ಳುವವರೆಗೂ ಆಕೆ ಹಾಯಾಗಿ ಕುಳಿತು ನೆಲವನ್ನೇ ದಿಟ್ಟಿಸಿ ನೋಡುತ್ತ, ಯಾವುದೋ ವಿಚಾರದಲ್ಲಿ ಮಗ್ನಳಾಗಿದ್ದಳು. ಆಕೆಯ ಕಣ್ಣುಗಳಲ್ಲಿ ಈ ಮುಂಚೆ ಇದ್ದ ಹೊಳಪು ಈಗ ಮಾಯವಾಗಿತ್ತು. ಕೆಲ ಹೊತ್ತಿನ ನಂತರ ಆಕೆ ಮೇಲಕ್ಕೆದ್ದಳು.

"ನಿಜವಾಗಿಯೂ ನೀನು ಹೊರಟಿದ್ದೀಯಾ?"

"ಹಾಂ..."

"ನಿನ್ನ ಬಗ್ಗೆ ಕಾಳಜಿ ವಹಿಸು ತಾಯೀ."

"ಕುಮಾರಿ ಮೇರಿ ನನ್ನನ್ನು ಕಾಯುತ್ತಾಳೆ.... ಆ ಕೂಸನ್ನು ಎತ್ತಿ ನನ್ನ ಕೈಗೆ ಕೊಡು...."

"ಇಲ್ಲ.... ನಾನು ಎತ್ತಿಕೊಳ್ಳುವೆ."

ಈ ಮಾತಿನ ಬಗ್ಗೆ ಕೊಂಚ ಚರ್ಚೆ ಆಯಿತು. ಆಮೇಲೆ ಆಕೆ ಒಪ್ಪಿಕೊಂಡಳು. ಆಗ ನಾವಿಬ್ಬರೂ ಜೊತೆ-ಜೊತೆಯಾಗಿ ಹೆಗಲಿಗೆ ಹೆಗಲು ಹಚ್ಚಿ ನಡೆಯತೊಡಗಿದೆವು.... "ನಾನು ಜೋಲಿ ಹೋಗ ದಂತೆ ನಡೆಯಬಲ್ಲೆ ಎಂದೆನ್ನಿಸಿದೆ...." ಎಂದಳು, ಒಂದು ರೀತಿಯ ಅಪರಾಧಿ ಮನೋಭಾವ ತಾಳುತ್ತ ನನ್ನ ಹೆಗಲ ಮೇಲೆ ಕೈಯಿಟ್ಟು. ರಶಿಯಾದ ನವನಿವಾಸಿ, ಆತನ ಭಾಗ್ಯದಲ್ಲಿ ಏನಿದೆಂಬುದು

---

**ಅಜೀರ್ಣ**

ಗೃಹಿಣಿ ಹೇಳಿದ್ದು:
"ಪತಿಗೆ ಊಟ ಬೇಕಿಲ್ಲ;
ನನಗೆ ಮತ್ತು ಮಕ್ಕಳಿಗೆ ಮಾತ್ರ
ಅಡುಗೆ ಮಾಡುತ್ತೇನೆ ಕೊಂಚ!"
"ಏನಾಗಿದೆ ಪತಿಗೆ?"
"ಅವರು ಕಚೇರಿಯಲ್ಲೇ ತಿಂದು ಬರುತ್ತಾರೆ
ಅಜೀರ್ಣವಾಗುವಷ್ಟು ಲಂಚ!"

• ಸಿ.ಪಿ.ಕೆ

ಯಾರಿಗೂ ಗೊತ್ತಿರಲಿಲ್ಲ. ಅಂಥ ಮಗು ನನ್ನ ಕೈಯಲ್ಲಿ ನಿಡಿದಾದ ಉಸಿರು ತೆಗೆದುಕೊಳ್ಳುತ್ತ ಹಾಯಾಗಿ ಮಲಗಿದೆ. ಸಮುದ್ರ, ಬಿಳಿ ನೊರೆಯಿಂದ ಮುಚ್ಚಿದ ತೆರೆಗಳು ತಟಕ್ಕೆ ಅಪ್ಪಳಿಸುತ್ತಿದ್ದವು.... ಗಿಡಗಂಟಿಗಳು ಪರಸ್ಪರರ ಕಿವಿಯಲ್ಲಿ ಏನೋ ಹೇಳಿಕೊಳ್ಳುತ್ತಿದ್ದವು..... ಸೂರ್ಯ ಮಧ್ಯಾಹ್ನದ ರೇಖೆಯನ್ನು ದಾಟುತ್ತ ಹೊಳೆಯುತ್ತಿದ್ದ....

ನಾವು ಮೆಲ್ಲ ಮೆಲ್ಲಗೆ ನಡೆಯುತ್ತಲಿದ್ದೆವು. ಆಗೊಮ್ಮೆ ಈಗೊಮ್ಮೆ ತಾಯಿ ನಿಲ್ಲುತ್ತಿದ್ದಳು..... ನಿಟ್ಟುಸಿರು ಬಿಡುತ್ತ ತಲೆಯೆತ್ತಿ ಸುತ್ತಲೂ ಸಮುದ್ರ, ಗಿಡಗಂಟಿ, ಬೆಟ್ಟಗುಡ್ಡ ಮತ್ತೆ ತನ್ನ ಮಗನ ಮುಖ ನೋಡುತ್ತಿದ್ದಳು.... ಅವಳ ಕಣ್ಣುಗಳು ನೋವಿನಿಂದ, ನೋವಿನ ಕಣ್ಣೀರಿನಿಂದ ತುಂಬಿಕೊಂಡಿದ್ದವು..... ಅಂಥ ಕಣ್ಣುಗಳು ಈಗ ಮತ್ತೆ ಆಶ್ಚರ್ಯವೆನ್ನುವಂತೆ ಕಂಗೊಳಿಸತೊಡಗಿದ್ದವು.... ಅವುಗಳಲ್ಲಿ ಮತ್ತೆ ಅಸೀಮಸ್ನೇಹ, ಮಮತೆ ಮಾತೃತ್ವದ ಪ್ರಕಾಶ ಹೊಳೆಯತೊಡಗಿತ್ತು....

ನಡೆಯುತ್ತಿರುವಂತೆಯೆ ಆಕೆ ತಟ್ಟನೆ ಒಂದೆಡೆ ನಿಂತು ಹೇಳಿದಳು "ಓ! ದೇವರೇ ನನ್ನ ಒಳ್ಳೆಯ ದೇವರೆ! ನೀನೆಷ್ಟು ಒಳ್ಳೆಯವನು, ಅದೆಷ್ಟು ಒಳ್ಳೆಯವನು.... ಓ! ನಾನು ಇದೇ ರೀತಿ ನಡೆಯುತ್ತಲೇ ಇದ್ದರೆ..... ಸದ್ಯೆವ ಲೋಕದ ಕೊನೆಯ ತುದಿಯವರೆಗೂ.... ಮತ್ತು ಅವನು..... ನನ್ನ ಪುಟ್ಟ ಮಗು.... ದೊಡ್ಡವನಾಗುತ್ತ ಹೋದರೆ.... ಸ್ವತಂತ್ರವಾಗಿ ಅವನು ಮುಂದೆ ಮುಂದೆ ಹೋಗುತ್ತಲಿದ್ದರೆ..... ತನ್ನ ತಾಯಿಯ ಎದೆಯ ಹತ್ತಿರ ಇರುತ್ತ.... ನನ್ನ ಮುದ್ದು ಮಗು...."

ಸಮುದ್ರದಿಂದ ನಿರಂತರ ಮರ್ಮರ ಧ್ವನಿ ಕೇಳುತ್ತಲೇ ಇತ್ತು.... ●

(೧೯೧೨ರಲ್ಲಿ ಮ.ಗೋರ್ಕಿ ಬರೆದ ಈ ನೀಳ್ಗತೆ ಲೋಕಪ್ರಸಿದ್ಧಿ ಪಡೆದಿದೆ.)

## ನಿರಾಲಾರ ನಿರಾಳತೆ

ಹಿಂದೀ ಸಾಹಿತ್ಯ ಜಗತ್ತಿನ ಸುಪ್ರಸಿದ್ಧ ಸಾಹಿತಿ ಪಂಡಿತ್ ಸೂರ್ಯಕಾಂತ ತ್ರಿಪಾಠಿ "ನಿರಾಲಾ"ರವರ ಹತ್ತಿರ ಒಂದು ಜೊತೆ ಚಪ್ಪಲಿಯಾಗಲಿ ಅಥವಾ ಒಂದು ಕಂಬಳಿಯಾಗಲಿ ಇರಲಿಲ್ಲ. ಉತ್ತರ ಭಾರತದ ಚಳಿ ಎಂದರೆ ಗೊತ್ತಲ್ಲ ನಖಶಿಖಾಂತ ನಡುಗಿಸುವಂಥದ್ದು. ಒಬ್ಬ ಶ್ರದ್ಧಾಳು ಇವರನ್ನು ಈ ಸ್ಥಿತಿಯಲ್ಲಿ ನೋಡಲಾರದೆ ಒಂದು ಜೊತೆ ಚಪ್ಪಲಿ ಕೊಂಡು, ಇವರಿಗೆ ಅರ್ಪಿಸಿ ಹೋದ. ಮತ್ತೊಬ್ಬ ಶ್ರದ್ಧಾಳು ಒಂದು ಹೊಸ ಕಂಬಳಿ ಕೊಂಡು ಇವರಿಗೆ ಹೊದಿಸಿದ.

ಮಾರನೆ ದಿನ ಬೆಳಿಗ್ಗೆ ಇವರು ಹಾಲು ತರಲು ಹೊರಗೆ ಹೋಗುತ್ತಿದ್ದರು. ಬೆಳಿಗ್ಗೆ ದಾರಿಯಲ್ಲಿ ಗುಡಿಸುವವನು ಕಾಲಲ್ಲಿ ಚಪ್ಪಲಿ ಇಲ್ಲದೆ ರಸ್ತೆ ಗುಡಿಸುತ್ತಿದ್ದ. ಇವರು ಚಪ್ಪಲಿಯನ್ನೂ ಹಾಕಿಕೊಳ್ಳದೆ ಇಂತಹ ಚಳಿಯಲ್ಲಿ ರಸ್ತೆಯಲ್ಲಿ ಕೆಲಸ ಮಾಡುತ್ತಿದ್ದಾನೆ! ಪಾಪ ಎಷ್ಟು ಚಳಿಯಾಗುತ್ತಿರಬಹುದು ಎಂದುಕೊಂಡು "ಚಪ್ಪಲಿ ಯಾಕೆ ಹಾಕಿಕೊಂಡಿಲ್ಲ?" ಎಂದು ಕೇಳಿದರು. 'ಬಡವರ ಹತ್ತಿರ ಚಪ್ಪಲಿ ಎಲ್ಲಿರುತ್ತೆ' ಎಂದ ಕಸಗುಡಿಸುವವ. ತಕ್ಷಣ ನಿರಾಲಾ ತಮ್ಮ ಹೊಸ ಚಪ್ಪಲಿಯನ್ನು ಅವನಿಗೆ ನೀಡಿ ಬರೀ ಕಾಲಲ್ಲಿ ನಡೆದು ಬಿಟ್ಟರು.

ಹಾಲಿನವಳ ಮನೆಗೆ ತಲುಪಿದರು. ಹಾಲಿನವಳು ಒಂದು ತೆಳುವಾದ ನೂಲಿನ ವಸ್ತ್ರ ಹೊದ್ದು ನಡುಗುತ್ತಾ ಹೊರಗೆ ಬಂದು ಇವರಿಗೆ ಹಾಲು ಅಳೆದು ಹಾಕಿದಳು.

'ನಿರಾಲಾ' ತಾವು ಹೊದ್ದಿದ್ದ ಕಂಬಳಿ ತೆರೆದು ಹಾಲಿನವಳಿಗೆ ಇತ್ತು ಮನೆಗೆ ಬಂದರು. ಮನೆಯಲ್ಲಿ ಚಪ್ಪಲಿ ಹಾಗೂ ಕಂಬಳಿ ಎಲ್ಲಿ ಎಂದು ಕೇಳಿದರು ಮನೆಯವರು. ಅವೆರಡನ್ನೂ ದಾನ ಮಾಡಿ ಬಂದೆ ಎಂದು ನಿರ್ಲಿಪ್ತರಾಗಿ ಉತ್ತರಿಸಿದರು ನಿರಾಲಾ.

● ಟೇಕಲ್ ಗೋಪಾಲಕೃಷ್ಣ

# "ಕೃತಿ" ಎಂಬ 'ವಿಶೇಷ' ಹುಡುಗಿ

• ಸೋನಿ

ಇಂದ್ರಜಾಲ, ಭರತನಾಟ್ಯ, ಈಜು, ರೋಲರ್ ಸ್ಕೇಟಿಂಗ್, ಟೇಬಲ್ ಟೆನ್ನಿಸ್, ಬ್ಯಾಡ್ಮಿಂಟನ್, ಚದುರಂಗ, ಶಾಸ್ತ್ರೀಯ ಸಂಗೀತ, ಕುದುರೆ ಸವಾರಿ, ಗುರಿ ಹೊಡೆಯುವಿಕೆ, ತಬಲಾ ಮತ್ತು ಪಿಯಾನೋ ವಾದನ.

ಒಬ್ಬನೇ ವ್ಯಕ್ತಿ ಇಷ್ಟೆಲ್ಲದರಲ್ಲಿ ಪರಿಣತನಾಗಿರುವುದು ಸಾಧ್ಯವೆ?

"ಬಹು ವರ್ಷಗಳ ಸತತ ಶ್ರಮದಿಂದ ಇದು ಅಸಾಧ್ಯವೇನಲ್ಲ" ಎನ್ನಬಹುದಾದರೂ ಕೇವಲ ಹತ್ತು ವರ್ಷದ ಒಬ್ಬ ಬಾಲೆ ಹನ್ನೆರಡಕ್ಕೂ ಹೆಚ್ಚು ಕಲೆ-ಕ್ರೀಡೆಗಳಲ್ಲಿ ಸಮಸಾಮರ್ಥ್ಯವನ್ನು ಬೆಳೆಸಿಕೊಂಡಿದ್ದಾಳೆ ಎಂಬುದು ಮಾತ್ರ ಬೆರಳು ಕಚ್ಚಬೇಕಾದಂಥ ಸಂಗತಿ.

ಇವೆಲ್ಲಕ್ಕಿಂತ ಈ ಬಾಲೆಯ ಕುರಿತು ಹೇಳಲೇಬೇಕಾದಂಥ ಇನ್ನೂ ಒಂದು ವಿಶೇಷವಿದೆ. ಈಕೆ ಭಾರತದ ಪ್ರಪ್ರಥಮ ಪ್ರನಾಳಶಿಶು.

ಹೌದು, ೧೯೮೬ರ ಜೂನ್ ೨೯ರಂದು ಮುಂಬಯಿಯ ಜಯಶ್ರೀ ಮತ್ತು ಸುಭಾಷ್ ಪರೇಖ್ ಎಂಬ ದಂಪತಿಗೆ ಆಶಾಕಿರಣವಾಗಿ ಜನಿಸಿ ಅವರ ಮನೆಮನಗಳೆರಡಕ್ಕೂ ಮುದ ತಂದವಳು ಈ ಮುದ್ದು ಹುಡುಗಿ. ಪ್ರನಾಳ ಶಿಶುವಿನ ಪರಿಕಲ್ಪನೆಯನ್ನು ಜಗತ್ತಿಗೆ ನೀಡಿದವರು ಡಾ. ಪ್ಯಾಟ್ರಿಕ್ ಸ್ಟೆಪ್ಟೊ. ಅವರ ಧೈರ್ಯದ ಮಾತು ಪರೇಖ್ ದಂಪತಿಯನ್ನು ಭಾರತದ ಪ್ರಥಮ ಪ್ರನಾಳ ಶಿಶುವಿನ ಅಪ್ಪ-ಅಮ್ಮನಾಗುವಂತೆ ಮಾಡಿತು.

"ಕೃತಿ!" ಮಗುವಿಗೆ ಎರಡೇ ಅಕ್ಷರಗಳ ಅರ್ಥಪೂರ್ಣ ಹೆಸರನ್ನಿಟ್ಟು ಅನನ್ಯ ಪ್ರೀತಿಯಿಂದ ಬೆಳೆಸಿದರು ಜಯಶ್ರಿ-ಸುಭಾಷ್. ಈಗ ಈ ಹುಡುಗಿಯ ಪ್ರತಿ ಕೃತಿಯೂ ಒಂದೊಂದು ದಾಖಲೆಯೆ.

ಅಂದಹಾಗೆ "ಕೃತಿ" ಭಾರತದ ಅತಿ ಕಿರಿಯ ಐಂದ್ರಜಾಲಿಕಳೂ ಹೌದು. ಕಳೆದ ಐದು ವರ್ಷಗಳಿಂದ ಆಕೆ ಇಂದ್ರಜಾಲ ಪ್ರದರ್ಶನಗಳನ್ನು ನೀಡುತ್ತಲೇ ಬಂದಿದ್ದಾಳೆ. "ಲೋಣಾವಳದಲ್ಲಿದ್ದಾಗ ಬೀದಿ ಬದಿಯಲ್ಲೊಬ್ಬ ನೀಡುತ್ತಿದ್ದ ಜಾದೂ ಪ್ರದರ್ಶನ ನನ್ನನ್ನು ಆಕರ್ಷಿಸಿತು. ಅವನಿಗೆ ದುಂಬಾಲು ಬಿದ್ದು ಕೆಲವು ಟ್ರಿಕ್‌ಗಳನ್ನು ಕಲಿತುಕೊಂಡೆ" ಎನ್ನುವ ಕೃತಿಗೆ ನಂತರದ ದಿನಗಳಲ್ಲಿ ಈ ವಿದ್ಯೆಯ 'ಅ ಆ ಇ ಈ'ಗಳನ್ನು ಕಲಿಸಿದವರು ಸುಪ್ರಸಿದ್ಧ ಐಂದ್ರಜಾಲಿಕ ವಿಲಿಯಂ ಝುಂಬಾಗೊ. ಈಗ ಜಗತ್ಪ್ರಸಿದ್ಧರಾಗಿರುವ ಪಿ.ಸಿ. ಸರಕಾರ್ ಮತ್ತು ಕೆ. ಲಾಲ್ ಮುಂತಾದವರಿಗೆ ಈ ಝುಂಬಾಗೋ ಅವರೇ ಮೊದಲ ಗುರು.

"ಅವಳಿಗೆ ಹೇಳಿಕೊಡುವುದೆಂದರೆ ನನಗೆ ತುಂಬ ಅಪ್ಯಾಯ. ಈ ಚುರುಕಿನ ಹುಡುಗಿಗೆ ಮೊದಲಿನಿಂದಲೂ ಅಷ್ಟೇ; ಎಳ್ಳಷ್ಟೂ 'ವೇದಿಕೆ ಭಯ'ವಿಲ್ಲ," ಎಂದು ಅಭಿಮಾನದಿಂದ ಹೇಳುತ್ತಾರೆ ೮೬ ವರ್ಷದ ಹಿರಿಯ ಝುಂಬಾಗೋ.

ಯಾವುದೇ ವಿದ್ಯೆಯಿರಲಿ, ಮೂಲ ಸೂತ್ರಗಳನ್ನು ಮಾತ್ರ ಗುರು ಕಲಿಸಿಕೊಡುತ್ತಾನೆ. ಆ ನಂತರ ತನ್ನದೇ ಆದ ಹೊಸ ಚಳಕಗಳನ್ನು, ಶೈಲಿಯನ್ನು ರೂಢಿಸಿಕೊಳ್ಳಬೇಕಾದ್ದು ಶಿಷ್ಯ ಅಥವಾ ಶಿಷ್ಯೆಯ ಪ್ರಯತ್ನ ಹಾಗೂ ಚಿಂತನೆಗಳನ್ನು ಅವಲಂಬಿಸಿರುತ್ತದೆ. 'ಮರಳಿ ಯತ್ನವ ಮಾಡು' ಎಂಬ ನುಡಿ ಇಲ್ಲಿ ಹೆಚ್ಚು ಅನ್ವಯಿಸುತ್ತದೆ. ಮತ್ತೆ ಮತ್ತೆ ಯತ್ನಿಸಿದಾಗಲೇ ಅಲ್ಲವೆ ಯಶ ದೊರೆಯುವುದು? ಹೀಗೆ ಪ್ರತಿ ಯತ್ನದಲ್ಲೂ ಹಿಂದಿನ ಸಲದ ತಪ್ಪನ್ನು ತಿದ್ದಿಕೊಂಡು, ಕೊರತೆಯನ್ನು ತುಂಬಿಕೊಂಡು ಮುಂದುವರಿಯುವುದು ಪ್ರತಿಭಾವಂ

ತನ ಲಕ್ಷಣ. "ಕೃತಿ" ಅಂಥ ಅಪ್ರತಿಮ ಪ್ರತಿಭಾವಂತೆ.

"ಜಾದೂವಿನಲ್ಲಿ ಮೂರು ರೀತಿ: ನಿಕಟವಾಪ ಕೈಚಳಕ, ಕಣ್ಕಟ್ಟು ಮತ್ತು ಭ್ರಮೆ ಹುಟ್ಟಿಸುವಿಕೆ. ಬಹುತೇಕರು ಈ ಮೂರರ ಪೈಕಿ ಒಂದನ್ನು ಮಾತ್ರ ಕರಗತಗೊಳಿಸಿಕೊಂಡಿರುತ್ತಾರೆ. ಆದರೆ ನನ್ನ ಸೌಭಾಗ್ಯ, ಮೂರರಲ್ಲೂ ನಾನು ಪ್ರದರ್ಶನ ನೀಡಬಲ್ಲೆ," ಎನ್ನುತ್ತಾಳೆ ಕೃತಿ.

"ಎಡೆ ಬಿಡದೆ ೧೨ ಗಂಟೆಗಳ ಕಾಲ ನನ್ನ ಮಗಳು ಪ್ರದರ್ಶನ ನೀಡಬಲ್ಲಳು," ಎಂದು ಹೆಮ್ಮೆಯಿಂದ ಹೇಳುವ ಸುಭಾಷ್ ಪರೇಖ್, "ಆದರೆ ಅಷ್ಟು ದೀರ್ಘಕಾಲ ಕೂತಲ್ಲೇ ಕೂತು ವೀಕ್ಷಿಸಬಲ್ಲ ತಾಳ್ಮೆ ಮತ್ತು ಸಾಧ್ಯತೆ ಇರುವ ಪ್ರೇಕ್ಷಕರು ಸಿಗುತ್ತಾರೆಯೆ? ಹೀಗಾಗಿ ತನ್ನ ಪ್ರದರ್ಶನಗಳ ಅವಧಿಯನ್ನು ಮೂರು ಗಂಟೆಗಳಿಗೆ ಸೀಮಿತಗೊಳಿಸಿಕೊಂಡಿದ್ದಾಳೆ," ಎನ್ನುತ್ತಾರೆ. ಸಾಮಾನ್ಯವಾಗಿ ರಜಾ ದಿನಗಳಲ್ಲೇ "ಕೃತಿ"ಯ ಪ್ರದರ್ಶನಗಳು ಇರುವುದರಿಂದ ಆಕೆಯ ಅಭ್ಯಾಸಕ್ಕೆ ಇದು ಅಡ್ಡಿಯಾಗುವುದಿಲ್ಲ. 'ಲಿಮ್ಕಾ ಬುಕ್ ಆಫ್ ರೆಕಾರ್ಡ್ಸ್'ನಲ್ಲಿ ಭಾರತದ ಅತ್ಯಂತ ಕಿರಿಯ ಐಂದ್ರಜಾಲಿಕಳು ಎಂದು ದಾಖಲಿಸಲ್ಪಟ್ಟಿರುವ "ಕೃತಿ" ಭಾರತ ಹಾಗೂ ಅಮೆರಿಕಗಳ ಐಂದ್ರಜಾಲಿಕರ ಸಂಸ್ಥೆಗಳ ಸದಸ್ಯೆಯೂ ಆಗಿದ್ದಾಳೆ. ಮೊನ್ನೆ ಮೇ ತಿಂಗಳಲ್ಲಿ ಅಮೆರಿಕದಲ್ಲಿ ಲೋಕಪ್ರಸಿದ್ಧ ಐಂದ್ರಜಾಲಿಕರೆದುರು ಈ ಪುಟ್ಟ ಹುಡುಗಿ ಪ್ರದರ್ಶನ ನೀಡಿದಳು.

"ಈ ವರೆಗೆ ಭಾರತ ಮತ್ತು ವಿದೇಶಗಳಲ್ಲಿ ಒಟ್ಟು ೩೧೧ ಪ್ರದರ್ಶನಗಳನ್ನಿತ್ತಿರುವೆ," ಎಂದು ಮುಗ್ಧ ಸಹಜತೆಯಿಂದ ಹೇಳುವ ಕೃತಿ 'ಭಗವದ್ಗೀತೆ'ಯ ೧೫ನೆಯ ಅಧ್ಯಾಯವನ್ನು ಪಟಪಟನೆ ಹೇಳಿಬಿಡಬಲ್ಲವಳು. ಎಲ್ಲಿಯೂ ಉಚ್ಚಾರ ದೋಷವಾಗಲಿ, ಮರೆಯುವಿಕೆ ಇಲ್ಲವೆ ಪುನರಾವರ್ತನೆಯಾಗಲಿ, ಸ್ಖಾಲಿತ್ಯವಾಗಲಿ ಕಂಡುಬರುವುದೇ ಇಲ್ಲ. ೧೯೯೨ರಲ್ಲಿ ಮಹಾರಾಷ್ಟ್ರ ರೋಲರ್ ಸ್ಕೇಟಿಂಗ್ ಚಾಂಪಿಯನ್‌ಶಿಪ್‌ನಲ್ಲೂ, ಉದಯಪುರದಲ್ಲಿ ನಡೆದ ಸ್ಪರ್ಧೆಯಲ್ಲೂ ಈ ಹುಡುಗಿ ಕಣ್ಣು ಪಟ್ಟಿ ಕಟ್ಟಿಕೊಂಡು ಸ್ಕೇಟಿಂಗ್ ಮಾಡಿದಳು. ಇನ್ನು ಶಾಸ್ತ್ರೀಯ ಗಾಯನ, ವಾದ್ಯಗಳ ವಾದನ, ಟೇಬಲ್ ಟೆನ್ನಿಸ್ ಮತ್ತು ಬ್ಯಾಡ್ಮಿಂಟನ್ ಕುರಿತು ಆಕೆ ಹೇಳುವುದೇನು ಗೊತ್ತೆ? "ಈ ಎಲ್ಲವನ್ನೂ ನಾನು ನನ್ನ ಇಂದ್ರಜಾಲ ಪ್ರದರ್ಶನಗಳಲ್ಲಿ ಅಳವಡಿಸಿಕೊಳ್ಳಬಯಸುತ್ತೇನೆ."

ನೆರೆಹೊರೆಯ ಜನಕ್ಕೆ ಮತ್ತು 'ಈಕೆ ಪ್ರಪ್ರಥಮ ಪ್ರನಾಳಶಿಶು' ಎಂದು ಗೊತ್ತಾದವರಿಗೆ "ಕೃತಿ" ವಿಶೇಷ ಹುಡುಗಿಯಾಗಿ ಕಾಣಿಸುತ್ತಾಳೆ. ಆದರೆ ಇಷ್ಟೆಲ್ಲ ವೈಶಿಷ್ಟ್ಯಗಳನ್ನಿಟ್ಟುಕೊಂಡೂ ತಾನು ಒಬ್ಬ ಸಾಮಾನ್ಯ ಹುಡುಗಿ; ಕಲಿಯಬೇಕಾದ ನೂರಾರು ವಿದ್ಯೆಗಳಲ್ಲಿ ತಾನು ರೂಢಿಸಿಕೊಂಡಿರುವುದು ಕೆಲವನ್ನು ಮಾತ್ರ ಎಂಬ ಅರಿವನ್ನು ಮೂಡಿಸಿಕೊಂಡಿದ್ದಾಳೆ "ಕೃತಿ." ಪ್ರದರ್ಶನಗಳ ವಿಷಯದಲ್ಲಿ ಪಕ್ಕಾ ವ್ಯವಹಾರಸ್ಥಳಂತೆ, ವೃತ್ತಿಪರಳಂತೆ ವರ್ತಿಸುವ "ಕೃತಿ" ಉಳಿದ ವೇಳೆಯಲ್ಲಿ ವಯೋಸಹಜವಾದ ಆಟಗಳಲ್ಲಿ ಗೆಳತಿಯರೊಂದಿಗೆ ಓಣಿಯ ಬೀದಿಗಳಲ್ಲಿ, ಸಂದಿಗೊಂದಿಗಳಲ್ಲಿ ಓಡುತ್ತಾಳೆ, ಅಡಗಿ ಕೂಡುತ್ತಾಳೆ, ಹುಡುಕ ಬರುವ ಗೆಳತಿಯ ಬೆನ್ನ ಹಿಂದಿಂದ ಕಳ್ಳಹೆಜ್ಜೆಯಿರಿಸಿ ಬಂದು 'ಅವುಕ್' ಎಂದು ಅಂಜಿಸುತ್ತಾಳೆ.

ಮುಂದೆ ಡಾಕ್ಟರಾಗುವ ಗುರಿಯಿರಿಸಿಕೊಂಡಿರುವ ಹುಡುಗಿ ಈ "ಕೃತಿ."

ಮೊನ್ನೆ ಜೂನ್ ತಿಂಗಳಲ್ಲಿ ತನ್ನ ಬದುಕು ಹತ್ತು ವರ್ಷಗಳ ಹಿಂದೆ ಅಂಕುರಿಸಿದ ತಾಣವಾದ ಕೆಂಬ್ರಿಜ್ಜಿನ ಬೌರ್ನ್‌ಹಾಲ್ ಕ್ಲಿನಿಕ್‌ನಲ್ಲಿ ವಿಶೇಷ ಪ್ರದರ್ಶನವೊಂದನ್ನು "ಕೃತಿ" ಸಾವಿರ ಜನರೆದುರು ಕೊಟ್ಟಳು. "ಇದರಲ್ಲೇನು ವಿಶೇಷ?" ಎನ್ನುತ್ತೀರೇನು? ಈ ಸಾವಿರ ಮಂದಿ ಅಂದೆನಲ್ಲ, ಅವರೆಲ್ಲ ವಯಸ್ಕ ಪ್ರೇಕ್ಷಕರಲ್ಲ, "ಕೃತಿ"ಯ ಹಾಗೆಯೆ ಪ್ರನಾಳ ಮೂಲಕ ಜನಿಸಿದ ಶಿಶುಗಳಾಗಿ ಬೆಳೆದವರು; ಆ ಕ್ಲಿನಿಕ್ಕಿನಲ್ಲಿ 'ಪ್ರನಾಳ ಶಿಶು ಪರಿಕಲ್ಪನೆ'ಯ ೧೫ನೆಯ ವಾರ್ಷಿಕೋತ್ಸವವನ್ನು ಆಚರಿಸಲು ಆಹ್ವಾನಿಸಲ್ಪಟ್ಟಿದ್ದವರು.

*

ಅಂದಹಾಗೆ ಈ ಲೇಖನದೊಟ್ಟಿಗೆ "ಕೃತಿ"ಯ ಮುಖವನ್ನು ನಿಮಗೆ ತೋರಿಸಲು ಸಾಧ್ಯವಾಗುತ್ತಿಲ್ಲ. ಇದಕ್ಕೆ ಕಾರಣ ಆಕೆ ಫೋಟೋಗೆ ಪೋಸ್ ಕೊಡಲು ನಿರಾಕರಿಸಿದುದು. ●

ಹರಟೆ

# ಹೊಂದಾಣಿಕೆ

• ಕೆ. ಆರ್. ಸಂಧ್ಯಾ ರೆಡ್ಡಿ

"ಯಶಸ್ವಿ ಏಕಪಕ್ಷೀಯ ಹೊಂದಾಣಿಕೆಯೊಂದಿಗೆ ನಮ್ಮ ವಿವಾಹದ ಹತ್ತನೇ ವಾರ್ಷಿಕೋತ್ಸವವನ್ನು ಆಚರಿಸುತ್ತಿದ್ದೇವೆ, ನೀನು ಬರಲೇಬೇಕು," ಎಂದು ಶೈಲಿ ಕಾಗದ ಬರೆದಿದ್ದಳು. ನಮ್ಮ ಪರಿಚಿತವಲಯದಲ್ಲಿ 'ಸದಾ ಜಗಳವಾಡುವ ಗಂಡ-ಹೆಂಡತಿ' ಎಂದೇ ಹೆಸರಾಗಿದ್ದ ಶೈಲಿ-ರವೀಂದ್ರರ ಜಗಳದ ಫ್ರೀಕ್ವೆನ್ಸಿಯನ್ನು ನೋಡಿದವರಾರೂ ಇವರ ದಾಂಪತ್ಯ ಈ ರೀತಿ ಯಶಸ್ವಿಯಾದೀತು ಎಂದು ಕನಸುಮನಸಿನಲ್ಲೂ ಊಹಿಸಿರಲಿಕ್ಕಿಲ್ಲ. ನಮ್ಮ ಮಾತುಕತೆಯ ಬಹುಪಾಲು ಅವರ ಜಗಳದ ವೈಖರಿ, ವ್ಯಾಪ್ತಿ, ಅತಿವ್ಯಾಪ್ತಿಯ ವರ್ಣನೆಗೇ ಮೀಸಲಾಗಿರುತ್ತಿತ್ತು. ನಾನು ಮೈಸೂರು ಬಿಟ್ಟು ಬೆಂಗಳೂರು ಸೇರಿದ ನಂತರ ಅವಳ ಭೇಟಿ, ಪತ್ರ ಏನೂ ಇಲ್ಲದೆ ಹಲವು ವರ್ಷಗಳೇ ಆಗಿದ್ದವು. ಬಿಡುವಿಲ್ಲದ ಕೆಲಸಗಳಿಂದಾಗಿ ಈ ಸಮಾರಂಭಕ್ಕೂ ಹೋಗಲಾಗಲಿಲ್ಲ. ಅವಳಿಗೆ ನನ್ನ ಹಾರ್ದಿಕ ಅಭಿನಂದನೆಗಳನ್ನು ತಿಳಿಸಿ," 'ಏಕಪಕ್ಷೀಯ ಹೊಂದಾಣಿಕೆ' ಎಂದರೇನು? ವಿವರವಾಗಿ ತಿಳಿಸು," ಎಂದು ಪತ್ರ ಬರೆದೆ. ಇದಕ್ಕೆ ಪ್ರತಿಯಾಗಿ ಅವಳ ಉತ್ತರ ಒಂದು ಸುದೀರ್ಘ ಲೇಖನ ರೂಪದಲ್ಲಿ ಬಂದಿತು. ಅದನ್ನೇ ಯಥಾವತ್ತಾಗಿ ನಿಮ್ಮ ಮುಂದಿಡುತ್ತಿದ್ದೇನೆ.

"..... ಗಂಡಹೆಂಡಿರ ಜಗಳದ ಮೂಲ ಕಾರಣ ಮಾತು. ಈ ಸಂಬಂಧದಲ್ಲಿ ಮಾತೇ ಅತ್ಯಂತ ಅಪಾಯಕಾರಿ. ಮೂಕರಾದರೆ ಸಮಸ್ಯೆ ಇಲ್ಲ. ಇಲ್ಲಿ ಮಾಡಿಕೊಳ್ಳಬೇಕಾದ ಹೊಂದಾಣಿಕೆ ಏನೆಂದರೆ ಗಂಡ ಏನೇ ಹೇಳಲಿ, ಹೆಂಡತಿ ಹೌದು, ಹೂಂ, Yes ಎಂಬ ಅರ್ಥದ ಮೂರು ನಾಲ್ಕು ಸಕಾರಾತ್ಮಕ ಪದಗಳನ್ನು ಮಾತ್ರ ಬಳಸಬೇಕು. ಹಾಗೆ ಮಾಡಿದಾಗ ಜಗಳ ನಾಸ್ತಿ. ಉದಾಹರಣೆ ಬೇಕೆ? ರೇಣುಕಾ ಸಹಾನೆ ವಿಗ್ ಹಾಕ್ತಾಳೆ.... 'ಹೌದು.'

'ಕುಕ್ಕರ್‌ನಲ್ಲಿ ಮಾಡಿದ ಅನ್ನ, ಮಿಕ್ಸಿಯಲ್ಲಿ ರುಬ್ಬಿದ ಚಟ್ನಿ ರುಚಿ ಇರುವುದಿಲ್ಲ.... 'ಹೌದು'.

ದಿನಕ್ಕೊಂದು ಅಥವಾ ಎರಡು ಪ್ಯಾಕ್ ಸಿಗರೇಟಿನಿಂದ ಆರೋಗ್ಯಕ್ಕೆ ಹಾನಿ ಇಲ್ಲ--- 'ಹೌದೇ ಹೌದು.'

'ಲೈಟ್ ಆಫ್ ಮಾಡಿಕೊಂಡೇ ಟಿವಿ ನೋಡಬೇಕು....' 'ಖಂಡಿತ.'

(ಕ್ರಿಕೆಟ್, ಟೆನಿಸ್ ಮೊದಲಾದ ದಿನ 'ತಿಂಗಳು' ನುಂಗುವ, ಸಮಯ ಹಾಳು ಮಾಡುವ ಆಟಗಳನ್ನು ಬಿಟ್ಟು ಬೇರೆ ಯಾವ ವಿಷಯದಲ್ಲೂ ಗಂಡಸರಿಗೆ ಸಾಮಾನ್ಯ ಜ್ಞಾನವಾಗಲಿ, ವೈಜ್ಞಾನಿಕ ಜ್ಞಾನವಾಗಲಿ ಇರುವುದಿಲ್ಲ ಎಂಬ ಪೂರ್ವಗ್ರಹಿಕೆ ಇಲ್ಲಿ ಅತ್ಯಗತ್ಯ.)

ನೂರಕ್ಕೆ ಇನ್ನೂರರಷ್ಟು ಹೊಂದಾಣಿಕೆ ಮಾಡಿಕೊಳ್ಳಲೇಬೇಕಾದ ವಿಷಯವೆಂದರೆ ಊಟ-ತಿಂಡಿ-ರುಚಿ-ಪಚಿಗಳಿಗೆ ಸಂಬಂಧಿಸಿದ್ದು. ನಾನು ಉಪ್ಪಿಟ್ಟು, ಚಿತ್ರಾನ್ನಗಳಿಗೆ ನಿಂಬೆ ಹುಳಿ ಹಾಕಿದರೆ ಅದು ತಿನ್ನುವ ಆಹಾರಕ್ಕೆ ವಿಷ ಬೆರಸಿದಂಥ ಅಪರಾಧವಾಗುತ್ತಿತ್ತು. ಅವರ ಕೆಕ್ಕರಿಸಿದ ನೋಟ ಅಥವಾ ನಾವು ನಿಂಬೆಹುಳಿ ಹಿಂಡಿದಂತೆಯೇ ಹಿಂಡಿಕೊಳ್ಳುವ ಅವರ ಮುಖಭಾವದಿಂದ ಈ ಸತ್ಯ ಅರಿತೆ (ಅಂದಹಾಗೆ ಹುಳಿಯ

ಬಗ್ಗೆ ಈ ದ್ವೇಷಕ್ಕೆ ಸಿಗರೇಟು, ವಿಸ್ಕಿಗಳಿಂದಾದ ಅಲ್ಲರಿನದೇ ಪ್ರೇರಣೆ.) ನಾನು ಅವರಿಗೆ ಬಡಿಸುವ ಎಲ್ಲ ಊಟ ತಿಂಡಿಗಳಲ್ಲಿಯೂ ಈ ಹುಳಿ ಎಂಬ ವಿಷ ಬೆರತಿದೆಯೇನೋ ಎಂಬ ಗುಮಾನಿಯಿಂದಲೇ ತಿನ್ನುತ್ತಿದ್ದರು. ಈಗ ಈ ವಿಷಯದಲ್ಲಿ ನನ್ನ ಹೊಂದಾಣಿಕೆ ಯಾವ ಮಟ್ಟ ಮುಟ್ಟಿದೆಯೆಂದರೆ ನಿಂಬೆಹಣ್ಣಿನ ಪಾನಕಕ್ಕೆ ಸಹ ನಿಂಬೆ ಹುಳಿ ಹಾಕುವುದಿಲ್ಲ. ಇದೇ ರೀತಿ ವಗ್ಗರಣೆಗೆ ಹಾಕಿದ ಉದ್ದಿನ ಬೇಳೆ ಅಥವಾ ಕಡಲೆ ಬೇಳೆ ಅವರ ಹಲ್ಲಿಗೆ ಸಿಕ್ಕಾಗ ಸೈಜುಗಲ್ಲು ಅಗಿದಂತೆ ಅವರ ಮುಖ ವಿಕಾರವಾಗುತ್ತದೆ, ಕೊತ್ತಂಬರಿ ಕರಿಬೇವುಗಳು ಕಸದಂತೆ ಕಾಣುತ್ತವೆ ಎಂಬ ಸತ್ಯ ತಿಳಿದ ಮೇಲೆ ಇವುಗಳ ಬಳಕೆಯನ್ನೂ ನಿಲ್ಲಿಸಿದ್ದೇನೆ.

ಕೋಸು, ಮೂಲಂಗಿ, ಬದನೇಕಾಯಿ, ಹೀರೇಕಾಯಿ, ಟೊಮ್ಯಾಟೋ, ಕ್ಯಾರೆಟ್, ಬೀಟ್‌ರೂಟ್.... ಇವೇ ಮೊದಲಾದ ಕೆಲವೇ ಕೆಲವು ತರಕಾರಿಗಳು ತಿನ್ನಲು ಅಯೋಗ್ಯ ಎಂಬ ಅವರ ಧೋರಣೆ ಅರ್ಥವಾದ ನಂತರ, ಹೊಟ್ಟೆಯ ಆರೋಗ್ಯಕ್ಕೆ ಹಿತವಾದರೂ ಸಂಸಾರದ ಆರೋಗ್ಯಕ್ಕೆ ಅಹಿತಕರವಾದ ಈ ತರಕಾರಿಗಳನ್ನು ನಮ್ಮ ಆಹಾರದ ಪಟ್ಟಿಯಿಂದ ನಿರ್ದಯವಾಗಿ ತೆಗೆದು ಹಾಕಿದೆ. ಈ ಎಲ್ಲ ಹೊಂದಾಣಿಕೆಗಳ ವಿಶೇಷ ಫಲಗಳು ಹೀಗಿವೆ: ೧) ಕಾಶಿಗೆ ಹೋಗಿ ಪ್ರಿಯವಾದ್ದನ್ನು ಬಿಟ್ಟರೆ ಸಿಗುವ ಪುಣ್ಯ ಮೈಸೂರಿನಲ್ಲೇ ಲಭಿಸುತ್ತಿದೆ. ೨) ಆಹಾರದ ವೈವಿಧ್ಯದ ಬಗ್ಗೆ ತಲೆ ಕೆಡಿಸಿಕೊಳ್ಳಬೇಕಿಲ್ಲ. ೩) ತರಕಾರಿಗಳ ಬೆಲೆ ಗಗನ ಮುಟ್ಟಿದರೂ ಚಿಂತೆ ಇಲ್ಲ. ೪) ಇಬ್ಬರಿಗೂ ೪೦ರ ವಯಸ್ಸು ತಲುಪಿದಾಗ ಡಯಟ್ ಬಗ್ಗೆ ಚಿಂತಿಸಬೇಕಿಲ್ಲ.

ಜಗಳಕ್ಕೆ ಕಾರಣವಾಗುವ ಇನ್ನೂ ಕೆಲವು ಚಿಲ್ಲರೆ ಸಂಗತಿಗಳಿವೆ. ಅಂಥವುಗಳನ್ನು ಮೊದಲೇ ಅರ್ಥಮಾಡಿಕೊಂಡಿದ್ದರೆ ಒಳ್ಳೆಯದು. ಹೆಸರು ಬೇಳೆ, ಉದ್ದಿನ ಬೇಳೆಗಳ ನಡುವಿನ ಸೂಕ್ಷ್ಮ ವ್ಯತ್ಯಾಸ ಅವರಿಗೆ ತಿಳಿದಿಲ್ಲವಾದ್ದರಿಂದ ಅಂಗಡಿಯಿಂದ ಸಾಮಾನುತಂದಾಗ ಹೆಸರುಬೇಳೆಗೆ ಉದ್ದಿನ ಬೇಳೆ, ಉದ್ದಿನ ಬೇಳೆಗೆ ಹೆಸರು ಬೇಳೆ ಬೆರೆಸುವ ಅನರ್ಥ ಆಗುತ್ತಿದ್ದವು. ಈ ಅನಾಹುತಕ್ಕಾಗಿ ನಮ್ಮಿಬ್ಬರ ನಡುವೆ ಮೊದಮೊದಲು ಮಾರಾಮಾರಿ ಆಗುತ್ತಿತ್ತು. ಈಗ ಹಾಗಿಲ್ಲ. ಇವುಗಳ ವ್ಯತ್ಯಾಸವನ್ನು ಅವರಿಗೆ ಮನವರಿಕೆ ಮಾಡಿಕೊಡುವ ವ್ಯರ್ಥ ಸಾಹಸಕ್ಕೆ ಕೈ ಹಾಕದೆ ಅವರು ಉದ್ದಿನ ಬೇಳೆ ಸುರಿಯುವಾಗ ಅದರ ಕೆಳಗೆ ಉದ್ದಿನ ಬೇಳೆಯದೇ ಡಬ್ಬಿ ಇರುವಂತೆ, ಹೆಸರು ಬೇಳೆಯದರ ಕೆಳಗೆ ಅದರದೇ ಡಬ್ಬಿ ಇರುವಂತೆ ಮಾಡುವ ಪಿ.ಸಿ. ಸರ್ಕಾರ್ ಶೈಲಿಯ ಕೈ ಚಳಕ ರೂಢಿಸಿಕೊಂಡಿದ್ದೇನೆ. ಇದೇ ರೀತಿ ಎಳ್ಳು, ಜೀರಿಗೆ, ಗಸಗಸೆ, ಮೊದಲಾದ ಯಃಕಶ್ಚಿತ್ ಪದಾರ್ಥಗಳ ಹೆಸರುಗಳನ್ನು ಅವರು ಧಾರಾಳವಾಗಿ ಅದಲು ಬದಲಾಗಿ ಹೇಳಿದರೆ ಆಯಾ ಸಂದರ್ಭಕ್ಕನುಗುಣವಾಗಿ ಅವರು ಉದ್ದೇಶಿಸಿದ ಪದಾರ್ಥ ಏನಿರಬಹುದು ಎಂಬುದನ್ನು ಅರ್ಥಮಾಡಿಕೊಳ್ಳಲು ಕಲಿತಿದ್ದೇನೆ.

ಸ್ವಲ್ಪ ಕಷ್ಟವಾದರೂ ಯಶಸ್ವಿಯಾಗಿ ಹೊಂದಾಣಿಕೆ ಮಾಡಿಕೊಂಡಿರುವ ಸಂಗತಿ ಅವರ ಬಣ್ಣ ಗುರುಡುತನಕ್ಕೆ ಸಂಬಂಧಿಸಿದ್ದು. 'ಅಲ್ಲೊಂದು ಹಳದಿ ಮಾತ್ರೆ ಇದೆ ನೋಡು: ಅದನ್ನು ಕೊಡು' ಅಂತಾರೆ. ಅವರು ಹೇಳಿದ ಕಡೆ ಹಸಿರು, ಕೆಂಪು ಮಾತ್ರೆ ಬಿಟ್ಟರೆ ಬೇರೆ ಯಾವ ಮಾತ್ರೆಯೂ ಇರುವುದಿಲ್ಲ. ಹಾಗಂತ ಹೇಳಿದಾಗ ಅವರೇ ಸ್ವತಃ ಎದ್ದು ಬಂದು, 'ಇದೇನಿದು ನೋಡು' ಎನ್ನುತ್ತ ಅದೆಷ್ಟು ಆತ್ಮವಿಶ್ವಾಸದಿಂದ ಹಸಿರು ಮಾತ್ರೆಯನ್ನು ನನ್ನ ಮುಖಕ್ಕೆ ಹಿಡೀತಾರೆ ಅಂದ್ರೆ..... ಆಗಿನಿಂದ ಅವರ ಈ ಬಣ್ಣಗುರುಡುತನಕ್ಕೆ ಒಗ್ಗಿಕೊಳ್ಳಲು ನಾನೂ ನನ್ನ ಮಕ್ಕಳೂ ಒಂದು ಸೂತ್ರ ರೂಪಿಸಿಕೊಂಡಿದ್ದೇವೆ. ಅವರು ಹಳದಿ ಅಂದಾಗ ಹಸಿರು, ಹಸಿರು ಅಂದಾಗ ನೀಲಿ, ಕೆಂಪು ಅಂದಾಗ ಗುಲಾಬಿ..... ನಮ್ಮ ಪುಣ್ಯಕ್ಕೆ ಇದರಾಚೆಗಿನ ಬಣ್ಣಗಳ ಪ್ರಶ್ನೆ ಬರುವುದಿಲ್ಲ. ಯಾಕೆಂದರೆ ಇತರ ಬಣ್ಣ ಛಾಯೆಗಳ ಗ್ರಹಿಕೆಯಿಂದ ಅವರು ಹಲವಾರು ಲೈಟ್ ಇಯರ್‌ಗಳಷ್ಟು ದೂರವಿದ್ದಾರೆ.

ನಮ್ಮ ನಡುವಿನ ಭಾಷಾ ಗೊಂದಲ ಇಷ್ಟಕ್ಕೇ ಮುಗಿಯುವುದಿಲ್ಲ. ನಾನೇನೋ ನನ್ನ ಪ್ರಿಯವಾದ ಸೀರಿಯಲ್ ನೋಡುವುದಕ್ಕಾಗಿ ಬಿಡುವು ಮಾಡಿಕೊಂಡು ಟಿ.ವಿ.ಮುಂದೆ ಕೂತಿರ್ತೀನಿ. (ಹೆಂಡತಿಗೆ ಪ್ರಿಯವಾದ್ದು ಗಂಡನಿಗೆ ಅಪ್ರಿಯ ಎಂಬ ಸಾರ್ವತ್ರಿಕ, ಸಾರ್ವಕಾಲಿಕ ಸತ್ಯ ಗೊತ್ತು ತಾನೆ?) ನಾನು

ಸೀರಿಯಲ್‌ನಲ್ಲಿ ಮಗ್ನ ಆಗಿದ್ದಾಗ ಅವರ ತಲೆ ಇನ್ನೇನೊ ಯೋಚಿಸುತ್ತಿರುತ್ತೆ. ಇದ್ದಕ್ಕಿದ್ದ ಹಾಗೆ ಈ ರೀತಿ ಆರಂಭಿಸ್ತಾರೆ.... "ಅವ್ನು.... ಇವ್ನು ಬಂದಿದ್ನಾ.... ಅದೇ ಕಣೆ.... ನಮ್ಮ ಇದ್ರಲ್ಲಿ.... ಆಫೀಸ್ನಲ್ಲಿ.... ಅವ್ನು ಇವ್ನಿಲ್ವಾ.... ಅವತ್ತು ನಮ್ಮ ಮನೆಗೆ ಬಂದು..... ಇದು ಮಾಡಿಕೊಟ್ಟದ್ನಲ್ಲಾ.... ಅವ್ನು...." ಅಥವಾ ಹೀಗೆ: "ಅವು ಇವಿದಾವಲ್ಲಾ.... ಅದ್ಹೆಂಗಾಗಿದಾವೆ ನೋಡು..... ಅವುಗಳ್ನ ಸ್ವಲ್ಪ ಇದು ಮಾಡಿಸಬೇಕಿತ್ತು....." ಈ ಜಾಡಿನಲ್ಲಿ ಸಾಗುವ ಅವರ ಮಾತಿನ ಅರ್ಥ ಹುಡುಕಿಕೊಳ್ಳುವಲ್ಲಿ ನನಗೆ ಅತಳ, ವಿತಳ, ರಸಾತಳ, ಪಾತಾಳ ಲೋಕಗಳಿಗೆಲ್ಲ ಕಾಲ್ನಡಿಗೆಯಲ್ಲಿ ಹೋಗಿ ಬಂದಷ್ಟೇ ಸುಸ್ತಾಗುತ್ತಿತ್ತು. ಮಧ್ಯೆ ಬಾಯಿ ಹಾಕಿದರೆ ಇನ್ನಷ್ಟು 'ಸರ್ವನಾಮ ಭರಿತ' ವಾಕ್ಯಗಳನ್ನು ಕೇಳಬೇಕಾಗುತ್ತೆ ಎಂಬ ಭಯದಿಂದ ಅವರೇ ಹೇಗೋ ಕಷ್ಟಪಟ್ಟು ಒಂದು ನಾಮಪದ ಹುಡಕ್ಕೊಂಡು ಬರೋವರ್ಗೂ ಸುಮ್ನಿರೋದನ್ನ ಕಲಿತೆ.

ಒಂದ್ಸಾರಿ ಇವ್ರು, ಆಫೀಸ್ ಕೆಲಸಕ್ಕೆ ಒಂದು ವಾರ ಟೂರ್ ಹೋಗಬೇಕಾಗಿತ್ತು. ಮೊದಲ ದಿನ ಪೂರ್ತಿ ಪ್ರಯಾಣ. ಆಫೀಸ್ ಕಾರ್ನಲ್ಲಿ ಹೋಗೋದು. ಈ ಪ್ರಯಾಣ ದಿನದಂದು ಎಲ್ಲಿ ತಿಂಡಿ, ಎಲ್ಲಿ ಊಟ ಎಂಬ ವಿಷಯಕ್ಕೆ ಅಂದೆಷ್ಟು ತಲೆಕೆಡಿಸಿಕೊಂಡಿದ್ರೂ, ಆದ್ರೆ ಅದು ನಿರ್ಧಾರ



ವಾಗ್ದೇ ಇದ್ರೆ ಟೂರ್ನೇ ಕ್ಯಾನ್ಸಲ್ ಮಾಡಿಬಿಡ್ತಾರೇನೋ ಎಂದು ಗಾಬರಿಯಾಗಿತ್ತು. 'ಹೆಂಗಿದ್ರೂ ಕಾರ್ನಲ್ಲಿ ಹೋಗ್ತೀದೀರ, ಒಬ್ಬೊಬ್ರ ಮನೆಯಿಂದ ಒಂದ್ಹೊಂದು ಐಟಂ ತಗೊಂಡು ಹೋಗಿದ್ರೆ. ಆಗ್ತ ಇತ್ತು. ದುಡ್ಡೂ ಉಳೀತಿತ್ತು ಅಂತ ಸೂಚಿಸಿದೆ...... "ಹೌದಲ್ವಾ..... ನಂಗೆ ಮೊದ್ಲೇ ಇದು ಹೊಳೀಲೇ ಇಲ್ಲ... ದಾರೀಲಿ ಎಲ್ಲಾದ್ರೂ ಒಂದು ಇದ್ರ ಪಕ್ಕ.... ಅದೇ...... ನೀರು ಹರೀತಾ ಇರುತ್ತಲ್ಲಾ.... ಅದೇ ಮೋರಿ.... ಮೋರಿ ಪಕ್ಕ ಕೂತು ತಿನ್ನಬಹುದಿತ್ತು," ಅಂದ್ರು. ಇವ್ರಿಗೇನು ತಲೆಗಿಲೆ ನೆಟ್ಟಗಿದ್ಯೋ ಇಲ್ವೋ... ಲಕ್ಷಣವಾಗಿ ಯಾವದಾದ್ರೂ ತೋಟ ಅಥವಾ ಹೊಲದಲ್ಲಿ ಪಂಪ್‌ಸೆಟ್ ಬಾವಿ ಹತ್ರ ಕೂರೋದು ಬಿಟ್ಟು.... ಅಂತ ನಾನು ಸಿಡುಕಿದೆ. 'ಯಾಕೆ? ಅಲ್ಲಿ ಅವು ನನ್ನ, ಇವುನನ್ನ ಕೇಳ್ಕೊಂಡು ಹೋಗ್ಬೇಕು.... ಮೋರಿಲ್ಲೇನೂ ನೀರು ಹರಿಯೋಲ್ವಾ? ಅಂದ್ರು. ಈ ಲೋಕಾನೆ ನಶಿಕೆಳಗಾಗಿರುವಂತೆ ನಂಗೆ ಭಯ ಆಯ್ತು. ಅವರು ಮೋರಿ ಪಕ್ಕ ಅಂತ ವಾದಿಸಕ್ಕೂ ನಾನು ಬೇಡ ಅಂತ ಅನ್ನಲಿಕ್ಕೂ..... ಹಿಂಗೇ ನಮ್ಮ ಮಾತು ಎಲ್ಲಿಂದೆಲ್ಲಿಗೋ ಹೋಗಿ ಜಗಳ ಎಂಬ ಸ್ಥಿತಿ ಮುಟ್ಟಿದ ನಂತರ ಕೊನೆಗೊಮ್ಮೆ ಅರ್ಥವಾಯ್ತು- ಇವರು ಆಗಿನಿಂದ ಮೋರಿ ಅಂತಾ ಇದ್ದದ್ದು ನೀರು ಹರಿಯುವ ಕಾಲುವೆಯನ್ನೇ ಹೊರತು ಗಲೀಜು ನೀರು ಹರಿಯುವ ದೊಡ್ಡ ಚರಂಡಿಯನ್ನಲ್ಲ ಅಂತ. ಅವರ ಊರಿನ ಕಡೆ ಕಾಲುವೆಗೇ ಮೋರಿ ಅಂತಾರಂತೆ...... ಹೀಗೂ ಉಂಟೆ?

ಇನ್ನು ಇವರ ಉಡುಗೆ ತೊಡುಗೆಯ ವಿಷಯ ಹೇಳ್ತೀನಿ ಕೇಳು. ಇವರಿಗೆ ತಮ್ಮ ಆಯ್ಕೆ ಅಭಿರುಚಿಗಳ ಬಗ್ಗೆ ಹಿಮಾಲಯದಷ್ಟು ಆತ್ಮವಿಶ್ವಾಸವಿದೆ. ಇವರ ಸ್ನೇಹಿತರೋ.... ಅವರೂ ಸರಿ.... ಜುಜುಬಿ ಒಂದು ಸ್ವೀಟಿಗಾಗಿ ಇವರ ಕೆಟ್ಟ ಆಯ್ಕೆಯನ್ನೇ ಹಾಡಿ ಹೊಗಳಿ ಅಟ್ಟಕ್ಕೇರಿಸಲು ದಂಡು ಕಟ್ಟಿ ಸಜ್ಜಾಗಿರುತ್ತಾರೆ. ಅಲ್ಲ ಕಣೆ, ಈ ವ್ಯವಸ್ಥೆಯಲ್ಲಿ ನಮ್ಮ ಟೇಸ್ಟ್‌ಗೆ ತಕ್ಕ ಗಂಡನ ಆಯ್ಕೆಯಂತೂ ಸಾಧ್ಯವಿಲ್ಲ. ಕೊನೇ ಪಕ್ಷ ಅವರ ಡ್ರೆಸ್ ಆದ್ರೂ ನಮ್ಮ ಅಭಿರುಚಿಗೆ ಅನುಗುಣವಾಗಿರೋದು ಬೇಡವೆ? ಮೊದಮೊದಲು ಈ ವಿಷಯಕ್ಕೂ ಜಟಾಪಟಿಯಾಗಿ ನಾನು ಹತಾಶಳಾಗಿದ್ದೆ. ಈಗ ಒಂದು ಉಪಾಯ ಕಂಡ್ಕೊಂಡಿದ್ದೀನಿ, ನಮ್ಮ ಆ್ಯನಿವರ್ಸರಿ ಅಥವಾ ಅವರ ಬರ್ತ್‌ಡೇಯ ನೆವದಲ್ಲಿ ಕಪ್ಪು ಹಣದಿಂದ (ಗಂಡನಿಗೆ ತಿಳಿಯದಂತೆ ಹೆಂಡತಿ ಕೂಡಿಸಿಟ್ಟ ಹಣ) ಅವರಿಗೆ ಬಟ್ಟೆ ತಂದು ಹೊಲಿಸಿ ಪ್ರೆಸೆಂಟ್ ಮಾಡ್ತೀನಿ, ಹೀಗೆ ಮಾಡುವಾಗ (ಹೆಂಡತಿಯ ಆಯ್ಕೆ ಗಂಡನಿಗೆ ಎಂದೂ ಸರಿ ಬರುವುದಿಲ್ಲ ಎಂಬ ಸಾರ್ವಕಾಲಿಕ ಸತ್ಯವನ್ನು ಮರೆಯದೆ) ಈ ರೀತಿ ಒಂದು ಮಾತು ಸೇರಿಸ್ತೀನಿ..... "ಇದು ನಿಮ್ಮ ಟೇಸ್ಟ್‌ಗೆ ಹೊಂದಲ್ಲ ಅಂತ ನಂಗೆ ಚೆನ್ನಾಗಿ ಗೊತ್ತು. ನಿಮಗೆ ಇಷ್ಟ ಆಗದಿದ್ರೆ ನಿಮ್ಮ ತಮ್ಮನಿಗೋ, ಕಸಿನ್‌ಗೋ ಕೊಟ್ಟು ಬಿಡಿ. ಇಷ್ಟಾದರೆ ನನ್ನ ಉದ್ದೇಶ ಫಲಿಸಿತು ಅಂತ ಲೆಕ್ಕ. ಏನೋ ಅವರು ನನ್ನ ಉಪಕಾರಕ್ಕಾಗಿ ಹಾಕಿಕೊಂಡಂತೆ ಮುಖ ಮಾಡಿದರೂ, ಅವರ ಸ್ನೇಹಿತರ ವಲಯದಲ್ಲಿ ತನ್ನದೇ ಸೆಲೆಕ್ಷನ್ ಅಂತ ಕೊಚ್ಚಿಕೊಂಡರೂ, ಸ್ನೇಹಿತರಿಂದ ಸಿಕ್ಕ ಪ್ರಶಂಸೆಯನ್ನು ನನಗೆ ತಿಳಿಸುವ ಪಾತಕ ಮಾಡದಿದ್ದರೂ ನಾನು ಕೊಡಿಸಿದ ಬಟ್ಟೆಯನ್ನೇ ಪದೇ ಪದೇ ಹಾಕ್ಕೊಳ್ಳೋದಂತೂ ಗ್ಯಾರಂಟಿ.

ಇವರ ಸಿಗರೇಟ್ ಮೋಹ ಬಿಡಿಸಿದ್ದೇ ಇನ್ನೊಂದು ಕಥೆ ಕಣೆ. ಸಿಗರೇಟಿನ ವಾಸನೆಗೂ ನನ್ನ ಹೊಟ್ಟೆ ತೊಳಸುತ್ತೆ ಅಂತ ನಿನಗೆ ಗೊತ್ತಲ್ಲ. 'ನಿನ್ನ ಮುಂದೆ ಇದನ್ನ ಸೇದಲ್ಲ' ಅಂತ ನೂರು ಸಲ ಪ್ರತಿಜ್ಞೆ ಮಾಡಿದ್ದರೂ 'ನಿನ್ನ ಮುಂದೆ' ಎಂಬ ಪದವನ್ನು 'ನಿನ್ನೆದುರಿಗೆ ಮಾತ್ರ' ಎಂಬ ಅರ್ಥ ಬರುವಂತೆ ವ್ಯಾಖ್ಯಾನಿಸಿ ನಾನು ಅಡುಗೆ ಮನೇಲಿದ್ದಾಗ ರೂಮಲ್ಲಿ, ರೂಮಲ್ಲಿದ್ದಾಗ ವರಾಂಡದಲ್ಲಿ, ವರಾಂಡದಲ್ಲಿದ್ದಾಗ ತಾರಸಿಯ ಮೇಲೆ.... ಅಥವಾ ಇಲ್ಲೆಲ್ಲೂ ಸಾಧ್ಯವಿಲ್ಲದಾಗ, 'ಅಂಗಡಿಯಿಂದ ಏನಾದ್ರೂ ತರಬೇಕಾ?' ಅಂತ ಬಾಯಿ ಬಿಟ್ಟು ಕೇಳಿ (ಬೇರೆ ಸಂದರ್ಭದಲ್ಲಿ ಕತ್ತು ಹಿಡಿದು ತಳ್ಳಿದರೂ ಅಂಗಡಿಗೆ ಹೋಗಲು ತಯಾರಿರದ ಮನುಷ್ಯ) ಅಂಗಡಿಗೆ ಹೊರಟು.... ಅಂತೂ ಹೀಗೆ ಸಿಗರೇಟು ಸೇದುತ್ತಲೇ ಸಿಗರೇಟು ಬಿಟ್ಟ ಶಪಥವನ್ನು ಈಡೇರಿಸಿಕೊಂಡ ಜಂಭದಲ್ಲಿ ಮೀಸೆ ತಿರುವುತ್ತಿದ್ದರು. ಇನ್ನೊಂದು ರೀತಿಯ ಶಪಥ ಹೀಗಿತ್ತು: ಇದೇ ಕೊನೇದು ಎಂದು ಹೇಳುತ್ತಾ

ಇಡೀ ಒಂದು ಪ್ಯಾಕನ್ನು ಜೇಬಿನಿಂದ ಹೊರತೆಗೆದು ಒಂದಾದ ನಂತರ ಒಂದರಂತೆ ಸುಟ್ಟು ಮುಗಿಸುವುದರಲ್ಲಿ ಇವರ ಶಪಥವೂ ಹೊಗೆಯಾಗಿ ಹಾರಿಹೋಗುತ್ತಿತ್ತು. ಒಂದೊಂದ್ಸಲ ಸಿಗರೇಟು ಸೇವನೆಗೆ ವಿಶಿಷ್ಟ ರೀತಿಯ ಮಿತಿಯನ್ನು ತಾವೇ ವಿಧಿಸಿಕೊಳ್ಳುತ್ತಿದ್ದರು. ಹೀಗೆ: ಬೆಳಿಗ್ಗೆ ಕಾಫಿ ಆದ್ಮೇಲೆ ಒಂದು, ತಿಂಡಿಯ ನಂತರ ಒಂದು.... ಮಧ್ಯಾಹ್ನ ಊಟದ ನಂತರ ಒಂದು. ಅಕಸ್ಮಾತ್ ಫ್ರೆಂಡ್ಸ್ ಬಂದರೆ ಕಂಪನಿಗಾಗಿ ಅವರ ಜೊತೆ ಒಂದು..... ಹೀಗೆಂದವರು ಬೇಕೆಂತಲೇ ಆಗಾಗ ಟೀ ಮಾಡಿಸಿ ಕುಡಿದು, ಸ್ನೇಹಿತರನ್ನು ಬರಮಾಡಿಕೊಂಡು ಮಿತಿಯನ್ನು ಮೀರುವ ಉಪಾಯ ಕಂಡುಕೊಂಡಿದ್ದರು. ಇವರ ಶಪಥದ ವೈಖರಿಯಿಂದ ನಾನೂ ರೋಸಿ ಹೋಗಿದ್ದೆ. ಒಂದು ದಿವ ಥಟ್ಟನೆ ಒಂದು ಉಪಾಯ ಹೊಳೀತು- ಆ ದಿನ ಕೂಡ ಇವರು ಸಿಗರೇಟು ಬಿಟ್ಟು ಬಿಡ್ತೇನೆ ಎಂಬ ಅರ್ಥದ ಯಾವುದೋ ಒಂದು ಶಪಥ ವಾಕ್ಯ ಹೇಳಿ ಸಿಗರೇಟು ಸೇದುತ್ತಿದ್ದಾಗ ನಾನು ಹೇಳಿದೆ, 'ಅಲ್ಲರೀ ಅದನ್ಯಾಕೆ ಬಿಡ್ತೀರಿ? ನಿಜಕ್ಕೂ ಐ ಎಂಜಾಯ್ ಇಟ್. ಈ ಹೊಗೆ ಒಂಥರಾ ಖುಷಿಕೊಡುತ್ತೆ. ನಮಗೆ ಶ್ರೀಧರ ಅಂತ ಒಬ್ಬ ಜುಆಲಜೀ ಲೆಕ್ಚರರ್ ಇದ್ರು. ತುಂಬಾ ಸ್ಮಾರ್ಟ್, 'ಡೂಯೂ ಮೈಂಡ್ ಲೇಡೀಸ್' ಅಂತ ಹೇಳುತ್ತಲೇ ಸಿಗರೇಟು ಹಚ್ಚಿ ಹಲ್ಲಿನಲ್ಲಿ ಕಚ್ಚಿಕೊಂಡು ಪಾಠಮಾಡ್ತ ಇದ್ದದ್ದೇ ಒಂದು ಸ್ಟೈಲು. ಅವರ್ನೇ ನೋಡ್ತ ಇದ್ದು ಬಿಡೋಣ ಅನ್ನಿಸ್ತಾ ಇತ್ತು. ಅವರ ಹತ್ತಿರ ನಿಂತು ಅವರ ಬಾಯಿಂದ ಬರುವ ಸಿಗರೇಟಿನ ಪರಿಮಳವನ್ನು ಅನುಭವಿಸುವುದಕ್ಕಾಗಿ ಏನಾದರೂ ಒಂದು ಡೌಟ್‌ನ ಕ್ಲಾರಿಫೈ ಮಾಡಿಕೊಳ್ಳೋ ನೆಪದಲ್ಲಿ ಸ್ಟಾಫ್ ರೂಮಿಗೆ ಹೋಗಿ ಅವರ ಹತ್ತಿರ ನಿಲ್ತಾ ಇದ್ವಿ.... ಎಂದು ನನ್ನ ಕಾಲೇಜ್ ದಿನಗಳ ನೆನಪಿನ ಒಂದು ಕಥೆ ಕಟ್ಟಿ ಹೇಳಿದೆ. ಇನ್ನೂ ಇಂಥದ್ದೇ ಒಂದೆರಡು ಕಥೆಗಳನ್ನು ಹೇಳಿದಾಗ ಅವರು ಕಂಗಾಲಾಗಿಬಿಟ್ಟರು. ಆಮೇಲೆ ಅವರಿಗೆ ಸಿಗರೇಟಿನ ವ್ಯಾಮೋಹವೇ ಇಲ್ಲವಾಯಿತು. ವಾಸ್ತವವಾಗಿ ಈ ಕಥೆಗೆ ಆಧಾರ ಯಾವುದು ಗೊತ್ತ? ಅದೇ ಕಣೆ ಲೆಕ್ಚರರ್ ಶ್ರೀಕಂಠಯ್ಯ... ಕ್ಲಾಸಿಗೆ ಬಂದ ತಕ್ಷಣ ಮೈಟಾಸಿಸ್, ಮಿಯಾಸಿಸ್ ಅಂತ ಶೆಲ್‌ಡಿವಿಶನ್ ವಿವರಿಸುವದಕ್ಕಾಗಿ ಬೋರ್ಡಿನ ಕಡೆ ತಿರುಗಿ, ಎಂಟೋ ಹತ್ತೋ ದೊಡ್ಡ ಸೊನ್ನೆ ಬರೆದು, ಅದರೊಳಗಿನ, ಡೀಟೇಲ್ಸ್ ಬರೆಯುವುದಕ್ಕೆ ಬಣ್ಣದ ಚಾಕ್‌ಪೀಸ್‌ಗಾಗಿ ಮಾತ್ರ ಇತ್ತ ತಿರುಗಿ, ಪುನಃ ಬೋರ್ಡಿನ ಕಡೆ ಮುಖಮಾಡಿ, ಅಂತೂ ಹೀಗೆ ಮುಕ್ಕಾಲು ಗಂಟೆ ಆದ್ಮೇಲೆ ಬೋರ್ಡಿಂದ ಈಚೆ ಒಂದು ಪಕ್ಕಕ್ಕೆ ಬಂದು ಅತ್ಯಂತ ಕಟ್ಟದಾಗಿ ಸಿಗರೇಟು ಸೇದುತ್ತ ತಾವು ಬರೆದ ಸೊನ್ನೆಗಳನ್ನು ಅವಲೋಕಿಸುತ್ತ ನಿಲ್ಲುತ್ತಿದ್ದರಲ್ಲಾ... ಆ ಶ್ರೀಕಂಠಯ್ಯ! ಈ ಪ್ರಭೃತಿಯ ವಿಷಯವನ್ನೆ ಶ್ರೀಧರ ಕಥೆಯಾಗಿ ಪರಿವರ್ತಿಸಿದ್ದೆ. ಹೆಂಗಿದೆ ಐಡಿಯಾ? ಈಗ ನನ್ನ ಗಂಡ ಯಾವಾಗ್ಲೋ ಒಮ್ಮೊಮ್ಮೆ ಸಿಗರೇಟು ಸೇದುವುದುಂಟು. ಆಗೆಲ್ಲಾ ನನ್ನ ಸವಿ ನೆನಪನ್ನು ಸುಡುವುದಕ್ಕೇ ಸೇದ್ತಾ ಇದ್ದಾರೆ ಅಂತ ನನ್ನ ಊಹೆ.

ಇಷ್ಟು ವರ್ಷದ ನಮ್ಮ ಸಾಂಸಾರಿಕ ಬದುಕಿನ ಅನುಭವದಿಂದ ನಾನೊಂದು ಸಿದ್ಧಾಂತಕ್ಕೆ ಬಂದಿದ್ದೇನೆ. ಸಾಮಾನ್ಯವಾಗಿ ಗಂಡ ಹೆಂಡಿರ ನಡುವೆ ಅತ್ಯಂತ ಕ್ಷುಲ್ಲಕ ವಿಷಯಗಳಿಗೆ ಭಾರೀ ಜಗಳಗಳೂ ಅತ್ಯಂತ ಮಹತ್ವದ ವಿಷಯಗಳಿಗೆ ತೀರಾ ಸಣ್ಣ ಜಗಳಗಳೂ ನಡೆಯುತ್ತವೆ. ಮದುವೆಯಾದ ಹೊಸದರಲ್ಲಿ ಪರಸ್ಪರರನ್ನು ಮೆಚ್ಚಿಸುವ ತವಕದಲ್ಲಿ ಮರೆಯಾಗಿರುವ ಹುಟ್ಟು ಗುಣಗಳು ಒಂದೆರಡು ವರ್ಷಾನಂತರ ರಾಜಾರೋಷವಾಗಿ ತಲೆ ಹಾಕುತ್ತವೆ.

ಆಗ ಶುರುವಾಗುತ್ತೆ ನೋಡು.... ಸಿಡಿ ಮಿಡಿ, ಕಲಹ, ಕದನ, ಯುದ್ಧ ಮಹಾಯುದ್ಧ..... ಶುರುವಿನಲ್ಲಿ ಈ ರೋಗ ಲಕ್ಷಣಗಳನ್ನು ಗುರುತಿಸಿ ನಿವಾರಿಸಿಕೊಂಡುಬಿಡಬೇಕು. ಅದಾಗುವುದಿಲ್ಲ ಅಂದರೆ ಅವುಗಳಿಗೆ ಒಗ್ಗಿಕೊಳ್ಳುವುದೇ ಒಳ್ಳೆಯ ಉಪಾಯ. ನೀವು ಯಾವಾಗ್ಲೂ ಜಗಳ ಆಡ್ತೀರ್ತೀರಲ್ಲ ಯಾಕೆ ಅಂತ ನೀನು ಕೇಳ್ತಾ ಇದ್ದೆಯಲ್ಲಾ! ಈಗ ನೋಡು, ನಮ್ಮ ಮನೆಗೆ ಬರುವ ಸ್ನೇಹಿತರು ನೀವು ಜಗಳಾನೇ ಆಡೋದಿಲ್ವಲ್ಲ ಅಂತ ಮೂಗಿನ ಮೇಲೆ ಬೆರಳಿಟ್ಟುಕೊಳ್ತಾರೆ. ನಾನು ಏನೂ ವಿವರಿಸಲ್ಲ, ಸುಮ್ಮನೆ ನಿಗೂಢವಾಗಿ ನಗುತ್ತೇನೆ. ●



ಅನುಭವ

# ಮತ್ತೆ ಜೇನು ಕಟ್ಟಲಿಲ್ಲ...

• ಟಿ. ಎಸ್. ಲಲಿತ

"ಅಮ್ಮಾ ಬೇಗ್ಬಾಮ್ಮಾ ಇಲ್ಲಿ" ಮಗಳ ಕೂಗು ಕೇಳುತ್ತಲೇ ಸಾರಿಗೆ ಹಾಕುತ್ತಿದ್ದ ಒಗ್ಗರಣೆಯ ಸೌಟನ್ನು ಒಲೆಯ ಮೇಲಿನ ಕೊಳದಪ್ಪಲೆಯಲ್ಲದ್ದಿ ಹೊರಬಂದೆ.

"ಇಲ್ನೋಡಮ್ಮ ಎಷ್ಟು ದೊಡ್ಡ ಜೇನು ಕಟ್ಟಿದೆ!"

"ಎಲ್ಲೇ?" ಅಂದೆ.

"ಇಲ್ಲೇ ನನ್ನ ಕೈ ನೇರಕ್ಕೆ ನೋಡಮ್ಮ ಆ ತೆಂಗಿನಮರದ ಮೇಲೆ ಕಟ್ಟಿದೆ."

ಕತ್ತೆತ್ತಿ ನೋಡಿದಾಗ ಕಂಡದ್ದು ನೇತುಹಾಕಿದ ಗಾಢ ಕಂದುಕಲ್ಲಿನಂತೆ ಕಾಣುತ್ತಿದ್ದ ಜೇನುಗೂಡು. ಮೇಲ್ನೋಟಕ್ಕೆ ನಿಶ್ಚಲವಾಗಿ ಕಂಡರೂ ಸೂಕ್ಷ್ಮವಾಗಿ ನೋಡಿದಾಗ ಸಾವಿರಾರು ಹುಳುಗಳ ತುಡಿತ ಕಾಣುತ್ತಿದೆ. ಒಂದು ಹುಳ ಹೊರಕ್ಕೆ ಹಾರಿದರೆ, ಹೊರಗಿನಿಂದ ಬಂದ ಮತ್ತೊಂದು ಹುಳ ಆ ಸ್ಥಳವನ್ನಾಕ್ರಮಿಸುತ್ತಿತ್ತು. ಎಷ್ಟು ಸಲ ಇಲ್ಲೇ ಓಡಾಡಿದ್ದರೂ ಹುಟ್ಟನ್ನು ಗಮನಿಸಿಯೇ ಇಲ್ಲವಲ್ಲ ಎಂದು ನನಗೇ ಆಶ್ಚರ್ಯವಾಯ್ತು. ನಮ್ಮ ಮಾತು ಕೇಳಿ ನನ್ನಮ್ಮ ಹೊರಗೆ ಬಂದರು. ಮೊಮ್ಮಗಳು ಕೂಗಿದಳು, "ನೋಡಜ್ಜಿ ನಮ್ಮನೆ ಮರದಲ್ಲಿ ಜೇನು ಗೂಡು ಕಟ್ಟಿದೆ."

"ಹೌದೇನೇ?" ಎನ್ನುತ್ತ ಕಣ್ಣು ಕಿರಿದು ಮಾಡಿ, ಕತ್ತು ಮೇಲೆತ್ತಿತು ಅಜ್ಜಿ.

"ಎಷ್ಟು ದೊಡ್ಡ ಗೂಡು ಕಟ್ಟಿದ್ಯಲ್ಲೇ ಈ ಜೇನು? ಅಂದ್ವಾಗೆ ಜೇನು ಕಟ್ಟಿದ್ರೆ ಮನೇಗೆ ಒಳ್ಳೇದು ಕಣೆ," ಅಂದಿತು ಅಜ್ಜಿ.

ಅಜ್ಜಿಯ ಮಾತು ಕೇಳಿದ ಮೊಮ್ಮಗಳು ಲೀಲ ಜೋರಾಗಿ ನಗತೊಡಗಿದಳು. "ಹೋಗಜ್ಜಿ, ಬರೀ ಅಡಗೂಲಜ್ಜಿ ಪುರಾಣ ಹೇಳ್ಬೇಡ ನೀನು. ಈಗ ಎಲ್ಲಾ ಕಡೆ ಹೂ ಬಿಡೋ ಕಾಲ. ಎಲ್ಲ ತೆಂಗಿನ ಮರದಲ್ಲೂ ಹೂ ಅರಳಿದೆ. ಅದಕ್ಕೇ ಬಂದಿದೆ ಜೇನು. ಒಳ್ಳೇ ನಿಶ್ಶಬ್ದವಾಗಿರೋ ಜಾಗ ಸಿಕ್ತು ಗೂಡು ಕಟ್ತು ಅಷ್ಟೇ. ಅದ್ರಲ್ಲಿ ನಮ್ಮನೇಗೆ ಒಳ್ಳೆಯದಾಗೋದೇನಿದೆ? ಕಡೆಗೆ ಅದ್ರಲ್ಲಿರೋ ಜೇನು ತುಪ್ಪಕ್ಕೂ ಕೈ ಹಾಕೋ ಹಾಗಿಲ್ಲ. ಹಾಕಿದ್ರೆ ಕಚ್ಚಿ ಸಾಯ್ಸತ್ತೆ."

"ನೀವೆಲ್ಲ ಈಗಿನ ಕಾಲ್ದೋರು. ಓದ್ದೋರು. ಇದನ್ನೆಲ್ಲ ನೀವು ನಂಬ್ತೀರಾ? ಏನೋ ಹಿರಿಯರ ಅನುಭವದ ಮಾತು ಹೇಳ್ದೆ ಅಷ್ಟೆ," ಎಂದಿತು ಅಜ್ಜಿ.

"ಅಜ್ಜಿ ಜೊತೆ ವಾದ ಸಾಕು. ತಟ್ಟೆ ಹಾಕ್ಕಡಿ, ಬಡಸ್ತೀನಿ. ಕಾಲೇಜಿಗೆ ಹೊತ್ತಾಯ್ತು," ಎನ್ನುತ್ತ ಅಜ್ಜಿ-ಮೊಮ್ಮಗಳ ವಾಗ್ವಾದಕ್ಕೆ ತಡೆ ಹಾಕಿದೆ ನಾನು. ಹಿಂದುಗಡೆ ಸಾಲಾಗಿ ಹಾಕಿದ್ದ ತೆಂಗಿನಮರಗಳಲ್ಲಿ ಹೊಂಬಾಳೆ ಬಿರಿದು ಎಸಳಿನಲ್ಲಿದ್ದ ದಂತದ ಬಣ್ಣದ ತೆಂಗಿನ ಹೂಗಳು, ಕೆಳಗೆ ಮರವನ್ನು ಸುತ್ತುವರಿದ ಕೆಮ್ಮಣ್ಣಿನ ಮೇಲುದುರಿ ಚಿತ್ತಾರ ಮೂಡಿಸಿತ್ತು. ಮರದಲ್ಲುಳಿದ ಹೂಗಳಿಗೂ ಜೇನು ಗೂಡಿಗೂ ನಡುವೆ ಜೇನುಗಳ ಹಾರಾಟ ಸಾಗಿತ್ತು.

ದಿನಗಳೆದಂತೆ ಈ ವಿಷಯ ಮನದಿಂದ ದೂರಾಗಿತ್ತು. ಅಂದು ಸಂಜೆ ನಮ್ಮವರು ಆಫೀಸಿನಿಂದ ಬಂದು ಕಾಫಿ ಕುಡಿದು, "ಸುಮ, ಸ್ವಲ್ಪ ಕೂತ್ಕೋ. ನಿನ್ಹತ್ರ ಒಂದ್ವಿಷಯ ಮಾತಾಡ್ಬೇಕು," ಅಂದರು. ಬಳಿಯ ಕುರ್ಚಿಯಲ್ಲಿ ಕುಳಿತೆ.

"ಮುಂದಿನ ವರ್ಷದಿಂದ ಮನೆ ಕಟ್ಕೋಕೆ ಸಾಲ ಕೊಡೋದು ನಿಲ್ಸಿಬಿಡ್ತಾರಂತೆ ನಮ್ಮ ಆಫೀಸಿನಿಂದ. ಅದಕ್ಕೆ ನಮ್ಮ ಆಫೀಸ್‌ನವರೆಲ್ಲಾ ಈ



ಮತ್ತೊಂದು ಮುಂದೋಡುತ್ತಿದೆ. ಮಗಳ ಬಿ.ಇ. ಪರೀಕ್ಷೆ ಮುಗಿದಿತ್ತು. ಮಧ್ಯಾಹ್ನ ಅಡಿಗೆ ಮುಗಿಸಿ, ಹಾಗೇ ಅಡ್ಡಾದಾಗ ಕಾಲಿಂಗ್ ಬೆಲ್ ಶಬ್ದ ಕೇಳಿತ್ತು. ಬಾಗಿಲು ತೆಗೆದಾಗ ಎದುರಿಗೆ ಚಿಕ್ಕಪ್ಪನೊಂದಿಗೆ ನಿಂತಿದ್ದ ದಂಪತಿಗಳು. ಸ್ವಾಗತಿಸಿದೆ.

"ನೋಡಮ್ಮ ಇವ್ನು ನನ್ನ ಸ್ನೇಹಿತ ರಾಮಣ್ಣ, ಅವನ ಹೆಂಡತಿ ಜಾನಕಮ್ಮ ನಂಜನಗೂಡಿಗೆ ಹೋಗಿದ್ದೆವು. ಪೂಜೆ ಮುಗ್ಸಿ ವಾಪಸ್ಸು ಹೋಗ್ತಾ, ಹಾಗೇ ನಿನ್ನ ನೋಡ್ಕೊಂಡು ಹೋಗೋಣಾಂತ ಬಂದೆ," ಅಂದರು ಚಿಕ್ಕಪ್ಪ.

ಬಂದವರಿಗೆ ಮೊದಲು ಕಾಫಿ ಕೊಟ್ಟು, ಬೇಗ ಬೇಗ ಸ್ವಲ್ಪ ಕೋಸಂಬರಿ, ಪಲ್ಯ ಮಾಡಿ, ಹಪ್ಪಳ, ಸಂಡಿಗೆ ಕರಿದು ಊಟಕ್ಕೆ ತಟ್ಟೆ ಹಾಕುವಂತೆ



ವರ್ಷಾನೇ ಸಾಲಕ್ಕೆ ಅರ್ಜಿ ಮಾಡ್ತಿದ್ದಾರೆ. ನನಗೂ ಒತ್ತಾಯಿಸ್ತಿದ್ದಾರೆ. ನಾನೂ ಅರ್ಜಿ ಮಾಡೀದ್ರೆ ಹೇಗೆಂತ?" ಚರ್ಚೆ ನಡೆದು, ಕಡೆಗೆ ಈಗಿರುವ ಮನೆಗೆ ಮಹಡಿ ಹಾಕಿಸಬೇಕೆಂದೂ, ಅದಕ್ಕಾಗಿ ಸಾಲಕ್ಕೆ ಅರ್ಜಿ ಹಾಕಬೇಕೆಂದೂ ತೀರ್ಮಾನ ವಾಯ್ತು.

ಮತ್ತೆರಡು ತಿಂಗಳಲ್ಲಿ ಮೇಲಿನ ಮನೆಯ ಕಟ್ಟಡದ ಕೆಲಸ ಪ್ರಾರಂಭವಾಗಿತ್ತು. ಜೊತೆ ಜೊತೆಗೆ ಪಕ್ಕದವರ ಸೈಟಿನಲ್ಲೂ ಮನೆ ಏಳುತ್ತಿತ್ತು. ಈಗ ಸದಾ ಕುಟ್ಟುವ, ಬಡಿಯುವ ಸದ್ದು. ಮುಂದಿನ ಮೂರು ತಿಂಗಳಲ್ಲಿ ಕಟ್ಟಡ ಮುಗಿದು ಗೃಹಪ್ರವೇಶವಾಗಿ ಬಾಡಿಗೆದಾರರೂ ಬಂದಾಯ್ತು. ಎಲ್ಲ ಘಟನೆಗಳೂ ಎಷ್ಟೊಂದು ಅನಿರೀಕ್ಷಿತ. ಕೆಳಗಿನ ಮನೆ ಕಟ್ಟಿ ೧೫ ವರ್ಷಗಳಾಗಿದ್ದರೂ ಮೇಲೆ ಮನೆ ಕಟ್ಟುವ ಯೋಚನೆ ನಾನಾಗ್ಲೇ ಮಾಡೇ ಇರ್ಲಿಲ್ಲ.

ಹಗಲು ರಾತ್ರಿಗಳ ಚಕ್ರ ನಿರಂತರವಾಗಿ ಸುತ್ತು ತ್ತಲೇ ಇದೆ. ವರ್ಷವೊಂದನ್ನು ಹಿಂದೆ ಹಾಕಿ,

ಮಗಳಿಗೆ ಹೇಳಿದೆ. ಊಟ ಮುಗಿಸಿ, ಸ್ವಲ್ಪ ವಿಶ್ರಮಿಸಿ ಬಂದವರು ಹಿಂದಿರುಗಿದರು.

ಮೂರು ದಿನಕ್ಕೆ ಚಿಕ್ಕಪ್ಪನಿಂದ ಕಾಗದ ಬಂದಿತ್ತು.

"ರಾಮಣ್ಣನಿಗೂ ಅವನ ಹೆಂಡತಿಗೂ ನಿನ್ನ ಮಗಳು ಲೀಲ ಇಷ್ಟವಾಗಿದ್ದಾಳೆ. ಎಂ.ಎಸ್. ಮುಗಿಸಿ, ಅಮೇರಿಕಾದಲ್ಲಿರುವ ಅವರ ಮಗ ಊರಿಗೆ ಬಂದಿದ್ದಾನೆ. ಇನ್ನೊಂದು ತಿಂಗಳಲ್ಲಿ, ಅವನ ಮದ್ವೆ ಮಾಡಿ ಕಳಿಸಬೇಕೆಂದು ರಾಮಣ್ಣನ ಇಷ್ಟ. ನಾಳೆ ಹುಡುಗನೊಂದಿಗೆ ನಿಮ್ಮಲ್ಲಿಗೆ ಬರುತ್ತಿದ್ದೇವೆ.

ಕಾಗದ ಓದಿ ಸಂತೋಷವಾದರೂ ವಿಷಯ ಅನಿರೀಕ್ಷಿತವಾಗಿತ್ತು. ಮರುದಿನ ಚಿಕ್ಕಪ್ಪ ಬಂದಾಗ ಹುಡುಗ ಎಲ್ಲರಿಗೂ ಇಷ್ಟವಾಗಿದ್ದ. ಆದರೂ ಮನದ ಅಳುಕನ್ನು ಆಡಲೇಬೇಕಾಯ್ತು, ಚಿಕ್ಕಪ್ಪನೆದುರು, "ಅಲ್ಲ ಚಿಕ್ಕಪ್ಪ, ಈಗಿನ್ನೂ ಮೇಲಿನ ಮನೆ ಕಟ್ಟಿ ಕೈ ಖಾಲಿಯಾಗಿದೆ. ಈಗ್ಲೇ, ಅದೂ ಇನ್ನೊಂದೇ ತಿಂಗಳಲ್ಲಿ, ಮದುವೆ ಅಂದ್ರೆ ಹೇಗೆ ಸಾಧ್ಯ? ದುಡ್ಡು ಕಾಸು ಜೊತೆಯಾಗ್ಬೇಡ್ವೆ? ಅದೂ ಅಲ್ದೆ ನಾವಿನ್ನು ಲೀಲಳ ಮದ್ವೆ ಬಗ್ಗೆ ಯೋಚ್ನೆ ಮಾಡೇ ಇಲ್ಲ."

"ಹಣ ಹೇಗಾದ್ರೂ ಒದಗಿಸಬಹುದಮ್ಮ ಒಳ್ಳೇ ಹುಡುಗ್ರು ಸಿಗ್ಬೇಕಲ್ಲಾ. ಸುಮ್ನೆ ಹ್ಞೂ ಅನ್ನಿ. ಹುಡುಗ ಕೂಡ ಲೀಲನ್ನ ಇಷ್ಟಪಟ್ಟಿದ್ದಾನೆ." ಬಂದವರು ವಾಪಸ್ಸಾದರು. ಮತ್ತೆ ಕಾಗದಪತ್ರಗಳ ವಿನಿಮಯ. ದೂರವಾಣಿ ಕರೆಗಳು, ಸ್ವತಃ ಹೋಗಿ ಬರುವುದು ಎಲ್ಲಾ ನಡೆದು ಇಪ್ಪತ್ತೇ ದಿನಗಳಲ್ಲಿ ಮದುವೆ ಮುಹೂರ್ತ ನಿಶ್ಚಯವಾಯ್ತು. ಮನೆಯ ನೆಂಟರಿಷ್ಟರೆಲ್ಲ ಹುಡುಗ, ಹುಡುಗಿಯನ್ನು ನೋಡುವ ನೆಪವಾಗಿ ಮುಂದಿನ ಎಂಟು ದಿನಕ್ಕೆ ಲಗ್ನಪತ್ರಿಕೆಯ ಶಾಸ್ತ್ರ ಮಾಡುವುದೆಂದು ನಿರ್ಧಾರವಾಯ್ತು.

ಲಗ್ನ ಪತ್ರಿಕೆಯ ದಿನ ಬೆಳಿಗ್ಗೆ ತಲೆಗೆ ಎಣ್ಣೆ ನೀರು ಹಾಕಿಕೊಂಡು, ಅಂಗಳದಲ್ಲಿ ನಿಂತು ತಲೆ ಒಣಗಿಸಿಕೊಳ್ಳುತ್ತಿದ್ದಳು ಲೀಲ. ಕೆಳಗುದುರಿದ್ದ ತೆಂಗಿನ ಹೂ ನೋಡಿದಾಗ ಆಕೆಯ ಕತ್ತು ಸಹಜವಾಗೇ ತೆಂಗಿನಮರದ ಗರಿಯತ್ತ ಹೊರಳಿತ್ತು. "ಅಮ್ಮ ಬಾಮ್ಮ ಇಲ್ಲಿ," ಮಗಳ ಕೂಗೂ ಕೇಳಿತ್ತು. ಸಾಲು ಸಾಲಾಗಿದ್ದ ಕೆಲಸಗಳ ಮಧ್ಯೆ ಸಿಕ್ಕಿದ್ದ ನಾನು ಸಿಡಿಮಿಡಿಗೊಂಡರೂ ಏಕೋ ಏನೋ ಎನ್ನುತ್ತ ಹೊರಗೆ ಬರಲೇಬೇಕಾಯ್ತು. ತೆಂಗಿನ ಮರದ ಗರಿಯತ್ತ ಚಾಚಿದ ಮಗಳ ಕೈಯ್ಯ ನೇರಕ್ಕೆ ದೃಷ್ಟಿ ಹಾಯಿಸಿದಾಗ ಕಣ್ಣಿಗೆ ಕಂಡದ್ದು ಜೇನುಗೂಡು!

ಮತ್ತೆ ಜೇನು ಕಟ್ಟಿದೆ!

ಫಕ್ಕನೆ ಅಮ್ಮನ ಮಾತು ನೆನಪಿಗೆ ಬಂದಿತ್ತು.



"ಎಲ್ಲ ಮೊಮ್ಮಕ್ಕಳ ಮದ್ವೇನೂ ನೋಡಾಯ್ತು. ಸಾಯೋಕ್ಮುಂಚೆ ನಿನ್ನ ಮಗಳೊಬ್ಬಳ ಮದ್ವೆ ನೋಡಿಬಿಟ್ರೆ ಸಾಕು," ಎನ್ನುತ್ತಿದ್ದ ಅಮ್ಮ.... ಮೊಮ್ಮಗ್ಳ ಮದುವೆಯಾಗುವ ಮೊದಲೇ ಇಲ್ಲ ವಾಗಿದ್ದರು. ಗತಿಸಿದ ಅಮ್ಮನನ್ನು ನೆನೆದು ಕಣ್ಣು ತುಂಬಿ ಬಂದಿತ್ತು.

'ಇದೇನು ಕಾಕತಾಳೀಯವೋ ಅಥವಾ ಜೇನು ಕಟ್ಟುವುದು ನಿಜಕ್ಕೂ ಶುಭಸೂಚಕವೋ? ಮಗಳ ಮದುವೆಯ ಮಂಗಳಕಾರ್ಯದ ಮುನ್ಸೂಚನೆ ಯಾಗಿ ಜೇನುಗೂಡು ಕಟ್ಟಿತ್ತೇ? ಹಿಂದೆ ನಾವು ಮೇಲಿನ ಮನೆ ಕಟ್ಟಿದ್ದು ಅಷ್ಟೇ ಅನಿರೀಕ್ಷಿತವಲ್ಲವೆ?'

ಆಗಲೂ ಜೇನುಗೂಡು ಕಟ್ಟಿತ್ತಲ್ಲ? ಒಳಗಿಂದ ಬಂದ ಚಿಕ್ಕಪ್ಪನ ಕರೆ ಯೋಚನೆಗಳ ಕುದುರೆಗೆ ಕಡಿವಾಣ ಹಾಕಿತ್ತು. ನಿಲ್ಲಿಸಿದ್ದ ಕೆಲಸದ ಬಗ್ಗೆ ಯೋಚಿಸುತ್ತ ಬೇಗ ತಯಾರಾಗುವಂತೆ ಮಗಳಿಗೆ ತಿಳಿಸಿ ಒಳನಡೆದೆ.

ಮಗಳ ಮದುವೆಯಾಗಿ ಕಳುಹಿಸಿಕೊಟ್ಟುದೂ ಆಯ್ತು. ನಮ್ಮವರಿಗೆ ಮೈಸೂರಿಂದ ಶಿವಮೊಗ್ಗೆಗೆ ವರ್ಗ. ಮತ್ತೆರಡು ಊರುಗಳ ಸುತ್ತಾಟದ ನಂತರ ಪುನಃ ಮೈಸೂರಿಗೆ ವಾಪಸ್ಸು. ಆ ನಾಲ್ಕಾರು ವರ್ಷಗಳ ಅಂತರದಲ್ಲಿ ಅಕ್ಕ ಪಕ್ಕದ ಖಾಲಿ ಸೈಟುಗಳಲ್ಲೆಲ್ಲ ಮಹಡಿಯ ಮನೆಗಳು ನಿಂತಿದ್ದವು. ಹಾಗಾಗಿ ನಮ್ಮ ಅಂಗಳದ ತೆಂಗಿನ ಮರಗಳ ಸುತ್ತ ಕೋಟೆ ಕಟ್ಟಿದಂತಾಗಿತ್ತು. ಸುತ್ತ ಎದ್ದು ನಿಂತ ಈ ಕಾಂಕ್ರೀಟ್ ಕಟ್ಟಡಗಳು ಜೇನಿನ ದಾರಿಯನ್ನು ಅಡ್ಡಗಟ್ಟಿವೆಯೇ? ನಮ್ಮ ಹಿಂದಿನ ಮನೆಯ ಮಹಡಿ ಎದ್ದಾಗಲೂ ಅವರ ಮನೆಯತ್ತ ಚಾಚಿದ್ದ ನಮ್ಮ ತೆಂಗಿನಮರದ ಗರಿಗಳನ್ನೆಲ್ಲ ನಿರ್ದಯವಾಗಿ ಕತ್ತರಿಸಿ ಹಾಕಿದ್ದರು. ಹಸಿರಿನಿಂದ ನಳನಳಿಸುತ್ತಿದ್ದ ಗರಿಗಳ ಮೇಲೆ ಮಾಡಿದ ಕೊಡಲಿಯ ಪ್ರಹಾರ ಜೇನಿನಲ್ಲಿ ಭಯ ಮೂಡಿಸಿತ್ತೇ? ಸ್ವಚ್ಛಂದವಾದ ಪ್ರಕೃತಿಗೆ ಎಂಥ ಅಪಮಾನ? ಪ್ರಕೃತಿಗೇ ಅಪಮಾ ನವಾದ ಕಡೆ ನನಗಿನ್ನೆಲ್ಲಿ ಸ್ವಾಗತ ಸಿಕ್ಕೀತು ಎಂದು ಕೊಂಡು ಬರಲು ಹಿಂದೇಟು ಹಾಕಿದವೇ ಜೇನು ಗಳು? ಹೇಗೋ ಏನೋ? ಅಂತೂ ಮೂರು ವರ್ಷ ಕಳೆದಿವೆ, ನಾವು ಪುನಃ ಸ್ವಂತ ಮನೆಗೆ ಬಂದು. ಆದರೆ ಅಂದಿನಿಂದ ಇಂದಿನವರೆಗೂ ಜೇನು ಗೂಡು ಕಟ್ಟಿಲ್ಲ. ನಮ್ಮ ಅಥವಾ ನನ್ನ ಜೀವನದಲ್ಲಿ ಘಟಿಸಬೇಕಾದ ಒಳ್ಳೆಯ ಘಟ ನೆಗಳು ಎಲ್ಲವೂ ಘಟಿಸಿವೆ ಎನ್ನುವುದರ ಸೂಚನೆ ಯಾಗಿ ಮತ್ತೆ ಬಾರದಂತೆ ಹಾರಿ ಹೋಗಿವೆಯೇ ಈ ಜೇನುಗಳು?

ಏನನ್ನೋ ಕಳೆದುಕೊಂಡಂತೆ ಅನಿಸುತ್ತಿದೆ ನನಗೆ. ಯಾವುದೋ ತುಂಬಲಾಗದ ನಷ್ಟ ಅನುಭವಿಸುತ್ತಿರುವಂತೆ ಭಾಸವಾಗುತ್ತಿದೆ. ಮತ್ತೊಮ್ಮೆ ಜೇನು ಕಟ್ಟಬಾರದೇ? ●



(೪೦ನೇ ಪುಟದಿಂದ)

ಮಂತ್ರಿಕುಮಾರನಲ್ಲಿಗೆ ಓಡಿದನು.

ಅದೇ ಊಟವನ್ನಾರಂಭಿಸಿದ್ದ ಮಂತ್ರಿಕುಮಾರನಿಗೆ ತನ್ನ ಮಿತ್ರನಿಂದ ಅವಸರದ ಕರೆ ಬಂದುದನ್ನು ಕೇಳಿ ಆಶ್ಚರ್ಯವಾಯಿತು. ಕರೆಯಬಂದವನು ಹೇಳಿದ ಕಾರಣವನ್ನು ಕೇಳಿದಾಗಲಂತೂ ಅವನಿಗೆ ಆಘಾತವೇ ಆಯಿತು. ಆದರೂ ಅವನು ಮನಸ್ಸಿನ ಸ್ತಿಮಿತವನ್ನು ಕಳೆದುಕೊಳ್ಳಲಿಲ್ಲ. "ರಾಜಕುಮಾರನನ್ನು ಹಾಗೆ ಒಬ್ಬನನ್ನೇ ಅಲ್ಲಿ ಬಿಟ್ಟು ಬಂದುದು ನನ್ನದೇ ತಪ್ಪು. ಈಗ ಅವನನ್ನುಳಿಸುವುದು ನನ್ನ ಕರ್ತವ್ಯ," ಎಂದು ನಿರ್ಧರಿಸಿಕೊಂಡು ಅವನು ತನ್ನ ಕುದುರೆಯಲಾಯಕ್ಕೆ ನಡೆದನು. ಅಲ್ಲಿ ತಾನೇ ಪ್ರೀತಿಯಿಂದ ಬೆಳೆಸಿದ ಎರಡು ಶ್ರೇಷ್ಠ ಕುದುರೆಗಳನ್ನಾಯ್ದುಕೊಂಡು ಅವಕ್ಕೆ ಹಾಗೂ ತಾವಿಬ್ಬರಿಗೆ ಸಾಕಾಗುವಷ್ಟು ಆಹಾರವಸ್ತುಗಳನ್ನೂ ಹಣ, ವಸ್ತ್ರಗಳನ್ನೂ ತೆಗೆದುಕೊಂಡು ಒಂದು ಕುದುರೆಯನ್ನೇರಿ, ಮತ್ತೊಂದನ್ನು ಹಿಂಬಾಲಿಸಿಕೊಂಡು ಭರದಿಂದ ತನ್ನ ಮಿತ್ರನಿರುವಲ್ಲಿಗೆ ನಡೆದನು.

ಮುಗುಳ್ನಗೆಯಿಂದ ಚಾತುರ್ಯನನ್ನು ಸ್ವಾಗತಿಸಿ ಮದನಕಾಮ ಅವನನ್ನು ಬರಸೆಳೆದಪ್ಪಿಕೊಂಡನು.

"ನಾನಿಲ್ಲಿಂದ ಹೊರಟು ಹೋದ ಮೇಲೆ ನಡೆದದ್ದೆಲ್ಲವನ್ನೂ ಪೂರ್ಣ ಹೇಳು," ಚಾತುರ್ಯ ಕೇಳಿದ.

ಚಿಕ್ಕ ವಿವರವನ್ನು ಸಹ ಬಿಡದೆಯೇ ರಾಜಕುಮಾರನು ತಾನು ಹಾಗೂ ಗುರುಪುತ್ರಿಯೊಂದಿಗೆ ನಡೆದ ಘಟನೆಯನ್ನು ಇಡಿಯಾಗಿ ಹೇಳಿದನು.

ಇದನ್ನು ಕೇಳಿದ ನಂತರ ಮಂತ್ರಿ ಕುಮಾರನು "ಈಗ ಸತ್ಯವನ್ನು ಹೇಳಿದರೆ ಯಾರೂ ನಂಬುವ ಸ್ಥಿತಿಯಲ್ಲಿಲ್ಲ, ಅಲ್ಲದೆ ನಿನ್ನ ತಂದೆ ಕೂಡ ವಿಚಿತ್ರ ಪರಿಸ್ಥಿತಿಯಲ್ಲಿ ಸಿಲುಕಿಕೊಂಡಿದ್ದಾರೆ. ಅವರು ತಮ್ಮ ಆಜ್ಞೆಯನ್ನು ಹಿಂತೆಗೆದುಕೊಂಡರೆ ಜನರು ಅವರಿಗೆ ಪಕ್ಷಪಾತಿ ಎನ್ನುವರು. ಸರಿಯಾದ ದಾರಿಯೆಂದರೆ ತುಸು ಸಮಯ ಕಾಯ್ದು ತಂದೆ ಮಕ್ಕಳಿಬ್ಬರನ್ನು ಉಳಿಸುವುದು," ಎಂದ.

ಕಟುಕರನ್ನು ಪೇಚಿಗೆ ಸಿಕ್ಕಿಸದೇ, "ಏನಾದರೂ ದಾರಿ ಹುಡುಕುವುದು ಸಾಧ್ಯವೇ?" ಎಂದು ಅವರನ್ನೇ ಕೇಳಿದನು.

ಅರಸನಿಗೆ ಒಬ್ಬನೇ ಒಬ್ಬ ಮಗನೂ ಸಿಂಹಾಸನಕ್ಕೆ ಉತ್ತರಾಧಿಕಾರಿಯೂ ಆದ ಮದನಕಾಮನನ್ನು ಉಳಿಸುವ ವಿಚಾರ ಅವರಿಗೂ ರುಚಿಸಿತು. ಅವರೇ ಒಂದುಪಾಯ ಯೋಚಿಸಿದರು. "ರಾಜಕುಮಾರನನ್ನಂತೂ ಈಗ ವಧಾಸ್ಥಾನಕ್ಕೆ ಒಯ್ಯೋಣ. ಅಲ್ಲಿ ಹಿಂಭಾಗದಲ್ಲಿ ನೀವು ಅವರಿಗಾಗಿ ಕುದುರೆಗಳೊಡನೆ ಸಿದ್ಧವಾಗಿರಿ ಅಲ್ಲಿ ಅವರನ್ನು ನಾವು ಗುಪ್ತವಾಗಿ ಇಳಿಸುತ್ತೇವೆ. ಬೇರಾವುದೋ ಪಕ್ಷಿಯನ್ನೋ ಪ್ರಾಣಿಯನ್ನೋ ಕೊಂದು ರಕ್ತರಂಜಿತವಾದ ನಮ್ಮ ಖಡ್ಗಗಳನ್ನು ಅರಸನಿಗೆ ತೋರಿಸುತ್ತೇವೆ. ಆದರೆ ನೀವು ಮಾತ್ರ ಗೌಪ್ಯವನ್ನು ಕಾಪಾಡಿ ನಮ್ಮನ್ನು ರಕ್ಷಿಸಬೇಕು," ಎಂದವರು ಚಾತುರ್ಯನನ್ನುದ್ದೇಶಿಸಿ ಹೇಳಿದರು.

ಯೋಜಿತ ರೀತಿಯಲ್ಲಿಯೇ ಎಲ್ಲವೂ ಜರುಗಿ ರಾಜಕುಮಾರ ಮದನಕಾಮ ಹಾಗು ಮಂತ್ರಿಕುಮಾರ ಬುದ್ಧಿಚಾತುರ್ಯರು ಅನೇಕ ಹಗಲು ರಾತ್ರಿಗಳನ್ನು ಪ್ರಯಾಣದಲ್ಲಿ ಕಳೆದು ಎಲ್ಲಿಯೂ ನಿಲ್ಲದೆ ಇಂದ್ರಪುರವೆಂಬ ನಗರವನ್ನು ಬಂದು ತಲುಪಿದರು. ●

(ಮುಂದಿನ ಸಂಚಿಕೆ ನೋಡಿ)

ಮೊದಲನೆಯ ದಿನ ಅತಿಥಿ, ಎರಡನೆಯ ದಿನ ಭಾರ, ಮೂರನೆಯ ದಿನ ಉಪದ್ರವ.

—ಅಲ್ಬೇನಿಯದ ಗಾದೆ

ಚಟವೆಂದರೆ ಜೇಡರ ಬಲೆ ಇದ್ದ ಹಾಗೆ. ಆದರೆ ಈ ಜೇಡರ ಬಲೆ ಹಗ್ಗವಾಗಲು ತಡವಾಗುವುದಿಲ್ಲ.

—ಸ್ಪೇನ್ ದೇಶದ ಉಕ್ತಿ

ಪುರಾತತ್ವ ಶಾಸ್ತ್ರಿಯಷ್ಟು ಒಳ್ಳೆ ಗಂಡ ಸಿಗುವುದೇ ಅಪರೂಪ. ಹೆಂಡತಿಗೆ ವಯಸ್ಸಾದಂತೆಲ್ಲ ಹೆಚ್ಚು ಹೆಚ್ಚು ಪ್ರೀತಿ ಅವನಿಗೆ.

—ಅಗಾಥಾ ಕ್ರಿಸ್ತಿ

ದೊಡ್ಡ ಆದರ್ಶಗಳನ್ನಿಟ್ಟುಕೊಂಡಿರುವವರು ಚಿಕ್ಕ ಕಾರ್ಯಗಳನ್ನೂ ಸರಿಯಾಗಿಯೆ ನಿರ್ವಹಿಸುತ್ತಾರೆ.

—ಹ್ಯಾರಿಯೆಟ್ ಮಾರ್ಟಿನ್ಯೂ



ಪುಸ್ತಕ ವಿಭಾಗ

# 'ಯಾತನಾ ಶಿಬಿರ'

ಸಂಗ್ರಹಾನುವಾದ:
ಶ್ರೀಕಾಂತ



**ನಾತ್ಸಿಗಳು ಯಹೂದ್ಯರ ಹತ್ಯೆಯನ್ನು ವ್ಯವಸ್ಥಿತವಾಗಿ ನಡೆಸಲು ನಿಯೋಜಿಸಿದ ಸ್ಥಳಗಳಲ್ಲಿ ಪೋಲಂಡಿನ ಆಷ್‌ವಿತ್ಸ್ ಕೂಡ ಒಂದು. ಅಲ್ಲಿಂದ ಪಾರಾಗಿ ಬಂದವರಲ್ಲಿ ಅನೇಕರನ್ನು ಸಂದರ್ಶಿಸಿ, ಹಿಂದೆಂದೂ ಪ್ರಕಟವಾಗದ ಅನುಭವಗಳನ್ನು ಸಂಗ್ರಹಿಸಿ, ಎರಡನೆಯ ಮಹಾಯುದ್ಧ ಕೊನೆಗೊಂಡು ೫೦ ವರ್ಷಗಳಾದ ಪ್ರಸಕ್ತ ಸಂದರ್ಭದಲ್ಲಿ ಅಮೇರಿಕದ 'ನ್ಯೂಸ್‌ವೀಕ್' ಸುದೀರ್ಘವಾದ ಲೇಖನವನ್ನು ಇತ್ತೀಚೆ ಪ್ರಕಟಿಸಿತು. ಅದರ ಸಾರಸಂಗ್ರಹ ಇಲ್ಲಿದೆ.**

೧೯೪೫ರ ಜನವರಿ ೧೮. ಜರ್ಮನ್ನರು ಸಾಲ್ ಲೀಮಾನನ್ನು ಹಾಲಂಡಿನಿಂದ ಆಷ್‌ವಿತ್ಸ್‌ಗೆ ಬಲವಂತವಾಗಿ ತಂದಿಳಿಸಿ ಐದು ತಿಂಗಳುಗಳೇ ಕಳೆದಿದ್ದವು. ಜರ್ಮನ್ನರ ಅವನತಿಯ ಸುದ್ದಿ ಅದು ಹೇಗೋ ಸಾಲ್ ಲೀಮಾನನ್ನೂ ತಲಪಿತ್ತು. ಆದರೆ ಅದನ್ನು ನಂಬುವಹಾಗೂ ಇರಲಿಲ್ಲ, ನಂಬದೆ ಇರುವಹಾಗೂ ಇರಲಿಲ್ಲ. ಆಗ ಅವನಿಗಿದ್ದುದು ಎರಡೇ ದಾರಿಗಳು: ಒಂದೋ ಜರ್ಮನ್ನರ ಕೈಲಿ ಸಿಕ್ಕಿಹಾಕಿಕೊಂಡು ಮೈಲುಗಟ್ಟಲೆ ನಡೆಯಬೇಕು. ಮುಂದೇನಾಗುತ್ತದೋ ಗೊತ್ತಿಲ್ಲ. ಹಿಂದಿನ ಅನುಭವದಿಂದ ಹೇಳುವುದಾದರೆ ಒಳ್ಳೆಯದಕ್ಕಿಂತ ಕೆಟ್ಟದ್ದಾಗುವ ಸಂಭವವೇ ಜಾಸ್ತಿ. ಅದು ಬೇಡವೆಂದರೆ ಈಗ ಇದ್ದ ಸ್ಥಿತಿಯಲ್ಲೇ ಬಂಕರಿನಲ್ಲಿ ಅಡಗಿಕೊಳ್ಳುವುದು. ಆದರೆ ಹೊಟ್ಟೆಗಿಲ್ಲದೆ ಎಷ್ಟು ದಿನ ತಾನೆ ಹಾಗೆಯೇ ಬಿದ್ದುಕೊಂಡಿರಲಾದೀತು? ಸಾಲ್ ಲೀಮಾ ದೀರ್ಘವಾಗಿ ಯೋಚಿಸಿ ಎರಡನೆಯ ಹಾದಿಯನ್ನೇ ಆರಿಸಿಕೊಂಡ.

ನಾಲ್ಕು ದಿನ ಕಳೆದರೂ ಆತ ಬಂಕರಿನಿಂದ ಜಾಗಬಿಟ್ಟು ಕದಲಲಿಲ್ಲ. ಹೊಟ್ಟೆ ಚುರುಗುಟ್ಟತೊಡಗಿದಾಗ ಇನ್ನೊಬ್ಬ ಬಂದಿಯಿಂದ ಹಿಂದೆ ಕಲ್ಲು-ಸಕ್ಕರೆ ಇಸಿದುಕೊಂಡಿದ್ದು ನೆನಪಿಗೆ ಬಂತು. ಅದನ್ನೇ ಸ್ವಲ್ಪ ಸ್ವಲ್ಪ ಬಾಯಲ್ಲಿರಿಸಿಕೊಂಡು, ಮೆಲ್ಲನೆ ಸವಿದು ಮತ್ತೆ ಐದು ದಿನ ದೂಡಿದ. ಜರ್ಮನ್ನರು ಹೊರಟುಹೋದ ಒಂಬತ್ತನೆಯ ದಿನ ಬಂಕರಿನಿಂದ ಹೊರಬೀಳುವ ಧೈರ್ಯ ಸಾಲ್ ಲೀಮಾಗೆ ಬಂತು. ಹೊರಗೆ ಹಿಮಬೀಳುತ್ತಿತ್ತು. ಎಲ್ಲೆಲ್ಲೂ ಸ್ಮಶಾನ ಮೌನ. ದೂರದ ಮಂಜಿನ ಬೆಟ್ಟದ ಮೇಲೆ ಏನೋ ಚಲಿಸುವ ಅನುಭವ. ಈ ಪೋಲಂಡಿನಲ್ಲಿ ಇಂಥಾ ಮಂಜಿನಲ್ಲೂ ನಾಯಿಗಳು ತಿರುಗುತ್ತವೆಯೆ? ಎನ್ನುತ್ತಾ ಇನ್ನಷ್ಟು ಸೂಕ್ಷ್ಮವಾಗಿ ನೋಡಿದ. ಛದ್ಮವೇಷದಲ್ಲಿ ರಶಿಯನ್ ಸೈನಿಕರು ಸಾಲು ಸಾಲಾಗಿ ಹೊರಟಿದ್ದರು. ವಿಮೋಚಕರನ್ನು ನಾಯಿಗಳನ್ನಾಗಿ ತೋರ್ಪಡಿಸಿದ್ದು ವಿಧಿಯ ವಿಪರ್ಯಾಸ.

ಆಷ್‌ವಿತ್ಸ್‌ಅನ್ನು ಜರ್ಮನ್ನರಿಂದ ವಿಮೋಚನೆಗೊಳಿಸಿದ ಲೆಫ್ಟಿನೆಂಟ್ ಜನರಲ್ ಪೆಟ್ರೆಂಕೋನೂ ಅಲ್ಲಿ ಒಂದು ವಿಚಿತ್ರ ದೃಶ್ಯ ಕಂಡ. ಸ್ಮಶಾನ ಮೌನದಲ್ಲಿ ಆಗಾಗ ಎಲ್ಲಿಂದಲೋ ಒಂದು ಕಡೆಯಿಂದ ಆಕ್ರಂದನ. ಧ್ವನಿ ಬರುತ್ತಿರುವಲ್ಲಿ ಹೋಗಿ ನೋಡಿದಾಗ ಒಂದು ಕಟ್ಟಡದಲ್ಲಿ ಅರೆಜೀವವಾಗಿ ಬಿದ್ದ ಹಸುಳೆಗಳು. ನಡೆಯಲೂ ಶಕ್ತಿ ಸಾಲದ ಬಾಲಕರು. ಜಗತ್ತು ಎಂದರೆ ಏನೆಂಬುದೇ ಗೊತ್ತಿರದ ಬಾಲಕಿಯರು. ಸುತ್ತಲಿನ ಜಾಗವನ್ನು ನೋಡಿದಾಗ ಅದು ಶಿಶುವಿಹಾರವಾಗಿರುವ ಯಾವ ಲಕ್ಷಣವೂ ಕಾಣಲಿಲ್ಲ. ಡಾ. ಜೋಸೆಫ್ ಮೆಂಗೇಲೇ ತನ್ನ ವೈಜ್ಞಾನಿಕ ಪ್ರಯೋಗಗಳಿಗಾಗಿ ಈ ಯಹೂದ್ಯ ಹಸುಳೆಗಳನ್ನು ತಂದಿರಿಸಿಕೊಂಡಿದ್ದನೆನ್ನುವುದು ಆಮೇಲೆ ಗೊತ್ತಾಯಿತು. ವಾಸ್ತವವಾಗಿ ಕೆಂಪು ಸೈನ್ಯ ತನಗರಿವಿಲ್ಲದೆ ಈ ಹಸುಳೆಗಳ ಬೂದಿಯ ಮೇಲೆಯೇ ಯುದ್ಧವಾಡಿ ಜರ್ಮನ್ನರನ್ನು ಓಡಿಸಿತ್ತು.

ರಶಿಯನ್ ಸೈನ್ಯ ವಿಮೋಚನೆಗೊಳಿಸಿದ ಪಟ್ಟಣಗಳ ಪಟ್ಟಿಯನ್ನು 'ನ್ಯೂಯಾರ್ಕ್ ಟೈಮ್ಸ್' ಅಂದೇ ದೊಡ್ಡದಾಗಿ ಪ್ರಕಟಿಸಿತ್ತು. ಆ ಪಟ್ಟಣಗಳ ಪಟ್ಟಿಯಲ್ಲಿ ಆಷ್‌ವಿತ್ಸ್ (ಪೋಲಿಷ್‌ನಲ್ಲಿ ಆಸ್ವಿಸಿಯಂ) ಕೂಡ ಇತ್ತು. ಆದರೆ ಹೊರಗಿನಿಂದ ಅಲ್ಲಿಗೆ ಸಾಗಿಸಲ್ಪಟ್ಟ ೧೫ ಲಕ್ಷ ಯಹೂದ್ಯರು ತಮ್ಮ

ಅವಶೇಷಗಳನ್ನು ಮಾತ್ರ ಬಿಟ್ಟುಹೋಗಿದ್ದಾರೆನ್ನುವುದನ್ನಾಗಲಿ ಇಡೀ ಆಶ್‌ವಿತ್ಸ್ ಸುತ್ತ ಹೆಣದ ವಾಸನೆ ತುಂಬಿಕೊಂಡಿದೆಯೆನ್ನುವುದನ್ನಾಗಲಿ ಅದು ಪ್ರಕಟಿಸಿರಲಿಲ್ಲ. ಅದರ ಕತೆ ಹೊರಬಂದದ್ದು ಸಾವಕಾಶವಾಗಿ, ತುಣುಕು ತುಣುಕಾಗಿ.

ಕೆಂಪುಸೇನೆ ಆಶ್‌ವಿತ್ಸ್ ಮುತ್ತಿದಾಗ ಅಲ್ಲಿ ಉಳಿದವರು ಬರಿ ೭,೦೦೦ ಜನ. ಎಲ್ಲರೂ ಜೀವಚ್ಛವಗಳೇ. ಅಪೋಷಣೆಯಿಂದಾಗಿ ಯಾವಾಗ ಜೀವಹೋಗುತ್ತದೋ ಹೇಳಬರುವಂತಿರಲಿಲ್ಲ. ರಶಿಯನ್ ಸೈನಿಕರಿಂದ ಇವರ ಸ್ಥಿತಿಯನ್ನು ನೋಡಲಾಗಲಿಲ್ಲ. ಎಲ್ಲಿಂದಲೋ ಒಂದು ಹಂದಿಯನ್ನೂ, ಒಂದಿಷ್ಟು ಬಟಾಟೆ, ಕ್ಯಾಬೀಜನ್ನೂ ತಂದು, ಎಲ್ಲವನ್ನೂ ಕತ್ತರಿಸಿ ದೊಡ್ಡದಾದ ಮಡಕೆಯಲ್ಲಿ ಬೇಯಿಸಿ ಅವರಿಗೆ ನೀಡಿದರು. ಶಿಬಿರದಲ್ಲಿದ್ದವರಿಗೆ ಈ ಅಡುಗೆ ಅಮೃತಸಮಾನವಾಗಿತ್ತು. ಆದರೆ ಈ ಅಮೃತವನ್ನು ಅರಗಿಸಿಕೊಳ್ಳಲಿಕ್ಕೆ ಮಾತ್ರ ಅವರಿಗಾಗಲಿಲ್ಲ.

೧೯೪೪ರ ವಸಂತಕಾಲ ಹಂಗೆರಿಯ ಯಹೂದ್ಯರಿಗೆ ಪ್ರಳಯಾಂತಕವೇ ಆಗಿತ್ತು. ಅಲ್ಲಿ ಗೂಡ್ಸ್ ಗಾಡಿಗಳಲ್ಲಿ ಯಹೂದ್ಯರನ್ನು ತುಂಬಿ ಆಶ್‌ವಿತ್ಸ್‌ಗೆ ಕಳಿಸಲಾಗುತ್ತಿತ್ತು. ಇಂತಹ ಗೂಡ್ಸ್ ಗಾಡಿಯಲ್ಲೇ ೧೭ ವರ್ಷದ ರೀಟಾ ಯಾಂಬರ್ಗರ್, ಅವಳ ಅಕ್ಕ ಬರ್ಟಾ ಮಾರ್ಗನ್‌ಸ್ಟರ್ನ್ ಹಾಗೂ ಅವರ ಮಕ್ಕಳು. ಬಾಗಿಲು ಮುಚ್ಚಿದ್ದರಿಂದ ವಿಪರೀತ ಶೆಕೆ. ಕುಡಿಯಲು ಒಂದು ಬಕೆಟ್ಟಿನಷ್ಟು ಮಾತ್ರ ನೀರು. ಆ ನೀರಿನ ಬಕೆಟ್ಟಿನ ಪಕ್ಕದಲ್ಲೆ ಬಹಿರ್ದೆಶೆಗಾಗಿ ಇನ್ನೊಂದು ಬಕೆಟ್ಟು. ಗಂಡಸರು, ಹೆಂಗಸರು ಎಂಬ ಭೇದವಿಲ್ಲ. ಎಲ್ಲರೂ ಅಲ್ಲಿಯೆ ದೇಹಬಾಧೆಯನ್ನು ತೀರಿಸಿಕೊಳ್ಳಬೇಕು.

ಗಾಡಿ ಆಶ್‌ವಿತ್ಸ್ ತಲುಪಿದಾಗ ಬಾಗಿಲನ್ನು ತೆರೆಯಲಾಯಿತು. ಐದು ಐದು ಜನ ಡಾ. ಮೆಂಗೇಲೇನ ಮುಂದೆ ಸಾಗಬೇಕಾಗಿತ್ತು. "ಅಶಕ್ತರು, ರೋಗಿಷ್ಟರು, ಮಕ್ಕಳು ಹಾಗೂ ಅವರ ತಾಯಂದಿರು ಎಡಗಡೆಗೆ ಹೋಗುವಂತೆ ಮೆಂಗೇಲೇ ನಿರ್ದೇಶಿಸಿದರೆ, ದುಡಿಯಲು ಶಕ್ತಿಯುಳ್ಳವರನ್ನು ಬಲಗಡೆ ಹೋಗಲು ನಿರ್ದೇಶಿಸುತ್ತಿದ್ದ. ನನ್ನ ಅಕ್ಕನಿಗೋ ಮಕ್ಕಳುಮರಿಗಳಿವೆ. ಮದುವೆಯೇ ಆಗದ ನನಗೆಲ್ಲಿ ಅವು ಬರಬೇಕು? ಆದರೆ ಇಂಥಾ ಪ್ರಸಂಗದಲ್ಲಿ ಅಕ್ಕನನ್ನು ಬಿಟ್ಟಿರುವುದಾದರೂ ಹೇಗೆ? ನಾನೊಂದು ಉಪಾಯ ಹೂಡಿದೆ. ಅಕ್ಕನ ಮಗಳಿಗೆ ಸ್ಕಾರ್ಫ್ ಕಟ್ಟಿ ಅವಳ ಕೈಹಿಡಿದು ನಾನೇ ಅವಳ ತಾಯಿ ಎಂಬಂತೆ ನಡೆಯತೊಡಗಿದೆ. ನನ್ನ ಸರದಿ ಬಂದಾಗ ಮೆಂಗೇಲೇ 'ಎಡಗಡೆಗೆ' ಎಂದ. ನನ್ನ ಅಕ್ಕನೊಟ್ಟಿಗೇ ಇರಬಹುದಾದ್ದರಿಂದ ನನ್ನ ಆನಂದಕ್ಕೆ ಮಿತಿಯೇ ಇರಲಿಲ್ಲ. ಅಷ್ಟರಲ್ಲಿ ಯಾರೋ ನನ್ನ ಹೆಗಲ ಮೇಲೆ ಕೈಯಿಟ್ಟಂತಾಯಿತು. ತಲೆಯೆತ್ತಿ ನೋಡಿದರೆ ಮೆಂಗೇಲೇ! ಕಾಲಕೆಳಗಿನ ಭೂಮಿಯೇ ಕುಸಿಯುತ್ತಿರುವ ಹಾಗಾಯಿತು. 'ನಿನ್ನ ವಯಸ್ಸೆಷ್ಟು?' ಎಂದಾತ ಗುಡುಗಿದ. ಅಂಥಾ ಹೆದರಿಕೆಯಲ್ಲಿ ಸುಳ್ಳುಹೇಳಲು ನನಗಾಗಲಿಲ್ಲ. ನಿಜವನ್ನೇ ನುಡಿದೆ. 'ಹಾಗಾದರೆ ಬಲಕ್ಕೆ ನಡೆ' ಎಂದ ಡಾ. ಮೆಂಗೇಲೇ. ನಾನು ಗ್ಯಾಸ್ ಚೇಂಬರಿಗೆ ಹೋಗುವುದು ತಪ್ಪಿದ್ದು ಹೀಗೆ," ಎಂದಾಕೆ ನೆನೆಸಿಕೊಳ್ಳುತ್ತಾಳೆ.

ಫ್ರಾನ್ಸ್, ಹಾಲಂಡ್, ಸ್ಲೋವಾಕಿಯಾ, ಗ್ರೀಸ್ ಹೀಗೆ ಎಲ್ಲೆಲ್ಲಿಂದಲೋ ಈ 'ಯಹೂದ್ಯ ಮಾನವ ಸರಕು' ಆಶ್‌ವಿತ್ಸ್ ಸೇರುತ್ತಿತ್ತು. ಅಶಕ್ತರನ್ನು, ಬಾಲಕರನ್ನು, ಹಸುಳೆಗಳನ್ನು- ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಕಠಿಣ ಪರಿಶ್ರಮ ಮಾಡಲು ಸಾಧ್ಯವಾಗದವರನ್ನು-ಗ್ಯಾಸ್ ಚೇಂಬರಿಗೆ ಸಾಗಿಸಲಾಗುತ್ತಿತ್ತು. ಆದರೆ ಅವರನ್ನು ಗ್ಯಾಸ್ ಚೇಂಬರಿಗೆ ಸಾಗಿಸಲಾಗುತ್ತದೆಯೆನ್ನುವುದನ್ನು ಮಾತ್ರ ಮುಂಚಿತವಾಗಿ ಹೇಳಲಾಗುತ್ತಿರಲಿಲ್ಲ. ಗ್ಯಾಸ್ ಚೇಂಬರಿನಲ್ಲಿ ಅವರನ್ನೆಲ್ಲ ಹಾಕಿ ಬಾಗಿಲು ಮುಚ್ಚಿದ ಕೆಲವೇ ಕ್ಷಣಗಳಲ್ಲಿ ಮೇಲಿನ ಚಿಮಣಿಯಿಂದ ದುರ್ನಾತದ ಹೊಗೆ ಬರಲು ಪ್ರಾರಂಭಿಸುತ್ತಿತ್ತು. ಈ ದುರ್ನಾತ ಎಷ್ಟು ಉಗ್ರವಾಗಿರುತ್ತಿತ್ತೆಂದರೆ ಸುತ್ತಮುತ್ತಲಿನ ಪ್ರದೇಶಗಳಲ್ಲಿ ವಾಸಿಸುತ್ತಿದ್ದವರ ಪೈಕಿ ಎಷ್ಟೋ ಜನರಿಗೆ ಮುಂದೆ ೫೦ ವರ್ಷಗಳವರೆಗೆ ವಾಸನೆಯ ಪ್ರಜ್ಞೆಯೇ ಹೊರಟುಹೋಯಿತಂತೆ.

ಗಟ್ಟಿಯಾಗಿದ್ದವರನ್ನು- ಅವರು ಗಂಡಸರೇ ಇರಲಿ, ಹೆಂಗಸರೇ ಇರಲಿ- ಸಂಪೂರ್ಣವಾಗಿ ನಿರ್ವಸ್ತ್ರಗೊಳಿಸಿ ಒಂದೂ ಕೂದಲು ಉಳಿಯದಂತೆ ಮೈಯನ್ನೆಲ್ಲ ಕೆರೆದು ಎಡದೋಳಿನ ಮೇಲೆ ಎದ್ದು

ಕಾಣುವಂತೆ ನಂಬರನ್ನು ಹಚ್ಚೆಯಿಂದ ಚುಚ್ಚಲಾಗುತ್ತಿತ್ತು. ಅನಂತರ ಸಮವಸ್ತ್ರವನ್ನೂ ಊಟಕ್ಕೆ ಒಂದು ಬೌಲ್ ಹಾಗೂ ಒಂದೆರಡು ಚಮಚೆಗಳನ್ನೂ ಕೊಟ್ಟು ಬರಾಕಿಗೆ ಸಾಗಹಾಕಲಾಗುತ್ತಿತ್ತು. ಬರಾಕಿನಲ್ಲಿ ಕಟ್ಟಿಗೆಯ ಗೂಡು. ಒಂದೊಂದು ಗೂಡು ಒಬ್ಬರಿಗೆ. ಎದ್ದುಕೂಡುವಷ್ಟೂ ಅಲ್ಲಿ ಸ್ಥಳವಿಲ್ಲದ್ದರಿಂದ ಕೆಲಸ ಮುಗಿದಾಗ ಮಲಗಿಕೊಂಡೇ ಇರಬೇಕಾಗುತ್ತಿತ್ತು.

ಇಂಥಾ ದುರ್ಭರ ಸ್ಥಿತಿಯಲ್ಲೂ ಅಲ್ಲಿ ಒಬ್ಬರ ಮೇಲೊಬ್ಬರಿಗೆ ಈರ್ಷ್ಯೆ. ಹೊಸದಾಗಿ ಬರಾಕನ್ನು ಸೇರಿದವರ ಮೇಲೆ ಹಳಬರ ಸಿಟ್ಟು. ಅವರು ಬರುತ್ತಲೇ, "ಬಾ, ಬಾ. ಈಗ ನಮ್ಮ ನೆನಪಾಯಿತೇನು? ಈ ದುರ್ಗಂಧದಲ್ಲಿ ನಾವು ಹೊಟ್ಟೆಗಿಲ್ಲದೆ ಬಿದ್ದಿರುವಾಗ ನೀವು ಸಿನೆಮಾ ನೋಡುತ್ತಿದ್ದಿರಿ ಸಿನೇಮಾ," ಎಂದು ಹಂಗಿಸುತ್ತಿದ್ದರು. ಬಹಳ ಜನರಲ್ಲಿ ಸಿನಿಕತನ ಮನೆಮಾಡಿದರೂ ಕೆಲವು

## ತಾಯಿ

ಥೆರೇಸೀನ್‌ಸ್ಟಾಟ್‌ನಿಂದ ಆಷ್‌ವಿಡ್ಸ್‌ಗೆ ಸಾಗಿಸಲ್ಪಟ್ಟ ೫೦೦೦ ಯಹೂದ್ಯರಲ್ಲಿ ರುತ್ ಈಲಿಯಾಸ್‌ಳೂ ಒಬ್ಬಳು. ಇನ್ನು ಆರು ತಿಂಗಳಲ್ಲಿ ಅವರೆಲ್ಲರ ಕಥೆ ಗ್ಯಾಸ್ ಚೇಂಬರಿನಲ್ಲಿ ಕೊನೆಗೊಳ್ಳುವುದರಲ್ಲಿತ್ತು.

ಆದರೆ ಯುದ್ಧದಿಂದಾಗಿ ಕೆಲಸಗಾರರ ಸಂಖ್ಯೆ ಗಣನೀಯವಾಗಿ ಕಡಿಮೆಯಾದಾಗ ಗಟ್ಟಿಮುಟ್ಟಾದ ಯಹೂದ್ಯರನ್ನು ಶ್ರಮಶಿಬಿರಗಳಲ್ಲಿ ದುಡಿಸಿಕೊಳ್ಳುವುದೆಂದೂ ವೃದ್ಧರನ್ನು, ಅಶಕ್ತರನ್ನು ಅಥವಾ ಇನ್ನೂ ವಯಸ್ಸಿಗೆ ಬಾರದವರನ್ನು ಆಷ್‌ವಿಡ್ಸ್‌ನಲ್ಲಿನ ಗ್ಯಾಸ್ ಚೇಂಬರಿಗೆ ಸಾಗಿಸಿ 'ಅಂತಿಮ ಪರಿಹಾರ' ದೊರಕಿಸುವುದೆಂದೂ ನಾತ್ಸೀ ಸರಕಾರ ನಿರ್ಧರಿಸಿತು.

ಈಲಿಯಾಸ್ ಹೇಳುವ ಹಾಗೆ, "ಎಲ್ಲರ ಹಣೆಬರೆಹ ಡಾ. ಮೆಂಗೇಲೇನ ಕೈಲಿತ್ತು. ಯಾರು ಉಳಿಯಬೇಕು, ಯಾರು ಅಳಿಯಬೇಕು ಎನ್ನುವುದನ್ನು ಆತನೇ ನಿರ್ಧರಿಸುತ್ತಿದ್ದ. ನಾನಾಗ ಮೂರು ತಿಂಗಳ ಬಸುರಿ. ಆಕಸ್ಮಾತ್ತಾಗಿ ಆತ ನಾನು ಯುವತಿ ಅಲ್ಲವೆಂದು ನಿರ್ಧರಿಸಿಬಿಟ್ಟರೆ.... ಎಂಬ ವಿಚಾರ ಬಂದಾಗ ಇಡೀ ಮೈಯನ್ನೆಲ್ಲ ಶೀತಲವಾದ ಚೂರಿಯೊಂದು ಸೀಳಿಹೋದಂತಾಯಿತು.

"ನಮ್ಮೆಲ್ಲರ ಸಾಲು ಉದ್ದವಾಗಿತ್ತು. ಒಂದು ಸಲಕ್ಕೆ ಮೂರು ಮೂರು ಜನ-ಅವರು ಗಂಡಸರಿರಲಿ, ಹೆಂಗಸರಿರಲಿ- ನಿರ್ವಸ್ತ್ರರಾಗಿ ಮೆಂಗೇಲೇನ ಎದುರು ನಿಲ್ಲಬೇಕಾಗುತ್ತಿತ್ತು. ಅವರ ಜೀವನ್ಮರಣದ ಪ್ರಶ್ನೆ ಅಲ್ಲಿ ಅರ್ಧ ನಿಮಿಷದಲ್ಲೇ ನಿರ್ಧಾರಿತವಾಗುತ್ತಿತ್ತು.

"ನನ್ನ ಸರದಿ ಬರುತ್ತಲೇ ನನ್ನ ಹಿಂದಿನ ಇಬ್ಬರು ಯುವತಿಯರನ್ನು ಸರಕ್ಕನೆ ಎಳೆದು ನನ್ನೆದುರು ನಿಲ್ಲಿಸಿಕೊಂಡೆ- ಅವರೊಟ್ಟಿಗೆ ಮೆಂಗೇಲೇ ನನ್ನನ್ನೂ ಯುವತಿ ಎಂದು ಭಾವಿಸಲಿ ಎಂಬ ಆಶಯದಿಂದ. ದೇವರು ದೊಡ್ಡವ. ಮೆಂಗೇಲೇ ನಮ್ಮನ್ನು ಒಂದರೆ ಕ್ಷಣ ನೋಡಿ, 'ಬಲಕ್ಕೆ' ಎಂದ.

"ಬದುಕಿದೆಯಾ ಬಡಜೀವವೆ! ಜೀವ ಉಳಿಸಿಕೊಳ್ಳಲು ಎಂಥಾ ಶ್ರಮದ ಕೆಲಸವನ್ನಾದರೂ ಮಾಡಿಯೇನು ಅಂದುಕೊಳ್ಳುತ್ತಾ ಇತರ ಸಂಗಾತಿಗಳೊಡನೆ ಶ್ರಮಶಿಬಿರ ಸೇರಿದೆ. ಆದರೆ ಸಂತೋಷ ಅಲ್ಪಕಾಲದ್ದಾಗಿತ್ತು. ಶಿಬಿರದ ವಾರ್ಡನ್ ನಾನು ಬಸುರಿಯಿದ್ದುದನ್ನು ಮೇಲಿನವರಿಗೆ ತಿಳಿಸಿಬಿಟ್ಟ. ಮತ್ತೆ ನನ್ನನ್ನು ಆಷ್‌ವಿಡ್ಸ್‌ಗೆ ನೂಕಲಾಯಿತು.

"೧೯೪೪ರ ಆಗಸ್ಟಿನಲ್ಲಿ ಮಗುವಿಗೆ ಜನ್ಮವಿತ್ತೆ. ಒಂದು ಮಗು ತಾಯಿಯ ಹಾಲಿಲ್ಲದೆ ಎಷ್ಟು ಕಾಲ ಬದುಕಬಲ್ಲದೆಂಬುದನ್ನು ಮೆಂಗೇಲೇಗೆ ನೋಡಬೇಕಾಗಿದ್ದುದರಿಂದ ಅಂದೇ ಹಾಲು ಹೊರಬಾರದ ಹಾಗೆ ನನ್ನ ಮೊಲೆಗಳಿಗೆ ಬ್ಯಾಂಡೇಜ್ ಹಾಕಲಾಯಿತು.

"ಹಸಿವಿನಿಂದ ಮಗು ಒಂದೇ ಸವನೆ

ಜನರಲ್ಲಿ ಧರ್ಮಪ್ರಜ್ಞೆ ಇನ್ನೂ ಇತ್ತು. ಅವರು ಪ್ರಾರ್ಥನೆಯನ್ನಾರಂಭಿಸುತ್ತಲೇ ಉಳಿದವರು, "ಪ್ರಾರ್ಥನೆ ಮಾಡಿ, ಚೆನ್ನಾಗಿ ಪ್ರಾರ್ಥನೆ ಮಾಡಿ. ನಮಗಾಗಿ ಅಲ್ಲ, ಆ ಚಿಮಣಿಯಿಂದ ಹೊರಬರುವ ಹೊಗೆಗಾಗಿ. ಹೊಗೆಗಾಗಿ ಏಕೆ? ಅನ್ನುತ್ತೀರೇನು? ಆ ಹೊಗೆಯಲ್ಲೇ ನಿಮ್ಮ ಅಪ್ಪ-ಅಮ್ಮ ಎಲ್ಲಾ ಇದ್ದಾರೆ," ಎನ್ನುತ್ತಿದ್ದರು.

ಸರಿಯಾಗಿ ಕೆಲಸ ಮಾಡದವರನ್ನು, ಕೆಲಸದಲ್ಲಿ ಉಪೇಕ್ಷೆ ತೋರಿದವರನ್ನು ಜರ್ಮನ್ ಸೈನಿಕರು ಥಳಿಸುತ್ತಿದ್ದರು. ಕೆಲಸ ಮಾಡಿ ಬಳಲಿದವರನ್ನೆಲ್ಲ ಆಗಾಗ ಒಟ್ಟುಗೂಡಿಸಿ ಗ್ಯಾಸ್ ಚೇಂಬರಿಗೆ ಕಳಿಸಲಾಗುತ್ತಿತ್ತು. ಶಿಬಿರದಲ್ಲಿ ದಿನಕ್ಕೆರಡು ಬಾರಿ ಹಾಜರಿ ತೆಗೆದುಕೊಳ್ಳುವ ಪರಿಪಾಠ. ಆಗ ಒಬ್ಬರೂ ಸ್ಥಳ ಬಿಟ್ಟು ಕದಲುವಂತಿರಲಿ, ಇನ್ನೊಬ್ಬರೊಡನೆ ಮಾತು ಕೂಡ ಆಡುವಂತಿರಲಿಲ್ಲ. ಯಾರಾದರೂ ಸ್ವಲ್ಪ ಕೆಮ್ಮಿದರೂ ಸಾಕು, ಬೆತ್ತದಿಂದ ಥಳಿಸಲಾಗು

ಅಳುತ್ತಿತ್ತು. ಮುಂದೆ ಅದಕ್ಕೆ ಅಳುವಷ್ಟೂ ತ್ರಾಣ ಉಳಿಯಲಿಲ್ಲ. ಅದರ ಕೈಕಾಲುಗಳು ಸಣ್ಣಗಾದವು. ಹೊಟ್ಟೆ ಬಲೂನಿನ ಹಾಗೆ ಉಬ್ಬಿಕೊಂಡಿತು. ಏದುಸಿರುಬಿಡುತ್ತಾ ಆಗೊಮ್ಮೆ ಈಗೊಮ್ಮೆ ಕಣ್ಣುತೆರೆದು ಮುಚ್ಚುತ್ತಿತ್ತು. ಕೊನೆಗೆ ಕಣ್ಣು ತೆರೆಯುವಷ್ಟು ಶಕ್ತಿಯೂ ಅದಕ್ಕುಳಿಯಲಿಲ್ಲ.

"ಮೆಂಗೇಲೇ ಪ್ರತಿದಿನ ಬಂದು ನನ್ನನ್ನೂ ನನ್ನ ಮಗುವನ್ನೂ ನೋಡಿ ನೋಟ್ಸ್ ಬರೆದುಕೊಂಡು ಹೋಗುತ್ತಿದ್ದ. ಒಂದು ದಿನ ಮೆಂಗೇಲೇ, 'ನಾಳೆ ನಿನ್ನನ್ನು ಕರೆದುಕೊಂಡು ಹೋಗುತ್ತೇನೆ,' ಎಂದು ಹೇಳಿದಾಗ ಬವಳಿ ಬಂದು ಬೀಳುವುದೊಂದೇ ಬಾಕಿ.

"ನನ್ನ ನಂತರ ನನ್ನ ಮಗುವಿಗೆ ಏನಾದೀತೋ? ಎಂದು ದಿನವಿಡಿ ಅಳುತ್ತಿದ್ದೆ. ಒಬ್ಬ ಯಹೂದ್ಯ ಲೇಡಿ ಡಾಕ್ಟರ್ ಕೇಳಿದಾಗ ಹಾಗೆಂದು ಹೇಳಿಯೂಬಿಟ್ಟೆ. ಆಕೆ ಮರುಮಾತಾಡದೆ ಒಳಗೆ ಹೋಗಿ ಒಂದು ಇಂಜೆಕ್ಷನ್ ತಂದುಕೊಟ್ಟಳು. 'ಏನು ಇದೆಲ್ಲ? ಏಕೆ ಇದು?' ಎಂದು ನಾನು ಆಕೆಯನ್ನು ಆತಂಕದಿಂದಲೇ ಕೇಳಿದೆ. 'ಮಾರ್ಫೈನ್, ಮಗು ಶಾಂತವಾಗಲು ಒಂದೇ ಕ್ಷಣ ಸಾಕು,' ಆಕೆ ಹೇಳಿದಳು.

"ನಡುಗುವ ಕೈಗಳಿಂದ ಇಂಜೆಕ್ಷನ್‌ಅನ್ನು ಇಸಿದುಕೊಂಡೆ. ಆ ಲೇಡಿ ಡಾಕ್ಟರ್ ಉತ್ಪ್ರೇಕ್ಷೆ ಮಾಡಿ ಹೇಳಿದ್ದಳೇನೋ. ಆ ಪುಟ್ಟ ಜೀವದ



ಹೃದಯ ಪಟಪಟ ಬಡಿದುಕೊಂಡು ನಿಂತು ಹೋಗಲು ಅರ್ಧ ಕ್ಷಣವೂ ತಗಲಲಿಲ್ಲ.

"ರಾತ್ರಿಯ ಸಮಯ ಜರ್ಮನ್ ಕಾರ್ಮಿಕರು ಬಂದು ಕಸಗೂಡಿಸುವ ಹಾಗೆ ಹೆಣಗಳನ್ನು ಗುಡಿಸಿಕೊಂಡುಹೋಗುವುದು ವಾಡಿಕೆ. ಯಥಾಪ್ರಕಾರ ಆ ದಿನವೂ ಜರ್ಮನ್ನರು ಬಂದರು. ನನ್ನ ಪುಟ್ಟ ಕಂದನನ್ನೂ ಗುಡಿಸಿಕೊಂಡು ಹೋದರು. ಮುಂದೆ ನನಗೆ ಜೀವಿಸುವುದರಲ್ಲಿ ಅರ್ಥವೇ ಉಳಿಯಲಿಲ್ಲ."

(೭೨ ವಯಸ್ಸಿನ ರುತ್ ಈಲಿಯಾಸ್ ಈಗ ಇಸ್ರೇಲಿನ ನಿವಾಸಿ. -ಸಂ.)

ತ್ತಿತ್ತು. ಶಿಬಿರದಲ್ಲಿ ಸಾವಿರಾರು ಜನರಿರುತ್ತಿದ್ದುದರಿಂದ ಹಾಜರಿಯ ಕ್ರಮ ಕೊನೆಗೊಳ್ಳಲು ಅನೇಕ ಗಂಟೆಗಳ ಕಾಲ ಬೇಕಾಗುತ್ತಿತ್ತು. ಅಷ್ಟು ಅವಧಿಯವರೆಗೆ ಕೈದಿಗಳೆಲ್ಲ ಉಸಿರು ಬಿಗಿಹಿಡಿದುಕೊಂಡೇ ನಿಂತಿರಬೇಕಾಗುತ್ತಿತ್ತು. ಈ ಶಿಬಿರಗಳಲ್ಲಿ ಜರ್ಮನ್ ಸೈನಿಕರ ಹಾಗೂ ಕೈದಿಗಳ ಮೇಲ್ವಿಚಾರಣೆಗಾಗಿ ಹೊರಗಿನಿಂದ ತಂದ ಗೂಂಡಾಗಳದೇ ದರ್ಬಾರು. ಸಂಗೀತದ ಮೂಲಕ ಕೈದಿಗಳಲ್ಲಿ ಹುರುಪು ತುಂಬುವ ಹುಚ್ಚುವಿಚಾರ ಒಮ್ಮೆ ಈ ಮೇಲ್ವಿಚಾರಕರಿಗೆ ಬಂತು. ಆಗ ಬ್ಯಾಂಡ್ ಬಾರಿಸಬಲ್ಲ ಕೈದಿಗಳನ್ನು ಹುಡುಕಿ ಒಂದು ತಂಡವನ್ನೇ ನಿಯಮಿಸಲಾಯಿತು. ಅಂದಿನಿಂದ ಕೈದಿಗಳು ಕೆಲಸಕ್ಕೆ ಹೋಗುವಾಗಲೂ ಬ್ಯಾಂಡು, ಕೆಲಸದಿಂದ ಬರುವಾಗಲೂ ಬ್ಯಾಂಡು. ಅಷ್ಟೇ ಅಲ್ಲ, ಅವರನ್ನು ಗ್ಯಾಸ್ ಚೇಂಬರಿಗೆ ಕಳಿಸುವಾಗಲೂ ಬ್ಯಾಂಡು!

ಶಿಬಿರದಲ್ಲಿನ ಕೈದಿಗಳಿಗೆ ಮುಂಜಾನೆ ಒಂದಿಷ್ಟು ಕಾಫಿ, ಮಧ್ಯಾಹ್ನದ ಊಟಕ್ಕೆ ಅರ್ಧ ಪೌಂಡ್ ಬ್ರೆಡ್ಡು, ಅದ್ದಿಕೊಂಡು ತಿನ್ನಲು ಸ್ವಲ್ಪ ಮಾಂಸದ ಸಾರು. ಇಷ್ಟು ಆಹಾರದ ಮೇಲೆಯೇ ಜೀವಹಿಡಿದುಕೊಂಡು ಅವರೆಲ್ಲ ಬಹುವಾಗಿ ದುಡಿಯಬೇಕಾಗುತ್ತಿತ್ತು. ಮುದಿ ಹಸುಗಳನ್ನು ವಧಾಲಯಕ್ಕೆ ಕಳಿಸುವಂತೆ ದುಡಿಯಲು ಸಾಧ್ಯವಾದವರನ್ನು ಗ್ಯಾಸ್ ಚೇಂಬರಿಗೆ ಕಳಿಸಲಾಗುತ್ತಿತ್ತು. ಹೆಚ್ಚು ಕಾಲ ಬದುಕಬೇಕೆಂದರೆ ಹೆಚ್ಚು ತಿನ್ನಬೇಕು. ಆದರೆ ಅದು ದೊರೆಯುತ್ತಿರಲಿಲ್ಲವಾದ್ದರಿಂದ ಬ್ರೆಡ್ ಕದಿಯಲು ನಾನಾ ಉಪಾಯಗಳನ್ನು ಶಿಬಿರವಾಸಿಗಳು ಯೋಜಿಸುತ್ತಿದ್ದರು.

ಆದರೆ ಹೊಟ್ಟೆತುಂಬಾ ಸಿಗುವ ಕೆಲಸವೂ ಒಂದಿತ್ತು. ಅದೆಂದರೆ ಸೋಂದರ್‌ಕಮಾಂಡೋ ಕೆಲಸ. ಗ್ಯಾಸ್ ಚೇಂಬರಿಗೆ ಸಾಗಿಸಬೇಕಾದವರನ್ನು ಅಲ್ಲಿಗೆ ಸಾಗಿಸಿ, ಅನಂತರ ಅವರ ಹೆಣಗಳನ್ನೆಲ್ಲ ವಿದ್ಯುತ್ ಚಿತೆಯಲ್ಲಿ ಸುಡುವುದೇ ಅವರ ಕೆಲಸ. ಗ್ಯಾಸ್ ಚೇಂಬರಿಗೆ ಕಳಿಸುತ್ತೇವೆಂದು ಹೇಳಿದರೆ ಅವರು ಗಲಾಟೆ ಮಾಡುತ್ತಾರೆಂದು ಸ್ನಾನಗೃಹಕ್ಕೆ ಕರೆದೊಯ್ಯಲಾಗುತ್ತದೆಂದು ನಂಬಿಸಿ, ನಿರ್ವಸ್ತ್ರರನ್ನಾಗಿ ಮಾಡಿ, ಚೇಂಬರಿನೊಳಗೆ ಕಳಿಸಿ ಬಾಗಿಲು ಮುಚ್ಚಲಾಗುತ್ತಿತ್ತು. ಷಾವರಿನ ಬದಲು ಗ್ಯಾಸ್ ಬರತೊಡಗಿದಾಗಲೆ ಒಳಗಿದ್ದವರಿಗೆ ತಾವೆಲ್ಲಿಗೆ ಬಂದಿದ್ದೇವೆ ಎನ್ನುವುದರ ಅರಿವಾಗುತ್ತಿತ್ತು. ಆದರೆ ಅಂಥಾ ಸ್ಥಿತಿಯಲ್ಲಿ ಏನು ಮಾಡುವಹಾಗೂ ಇರಲಿಲ್ಲ. ಮುಂದೆ ಕೆಲವೇ ಕ್ಷಣಗಳಲ್ಲಿ ಅವರೆಲ್ಲರ ಕಥೆ ಮುಗಿದುಹೋಗುತ್ತಿತ್ತು. ಅವರಿಗೆ ಯಾವಾಗ ತಮ್ಮ ಬಂಧುಬಳಗವನ್ನೇ ಗ್ಯಾಸ್ ಚೇಂಬರಿಗೆ ಕಳಿಸಬೇಕಾದ ಪ್ರಸಂಗ ಬರುತ್ತದೆನ್ನುವುದಾಗಲಿ ತಾವೇ ಯಾವಾಗ ಅದರಲ್ಲಿ ಪ್ರವೇಶಿಸಬೇಕಾಗುವುದೆನ್ನುವುದಾಗಲಿ ಗೊತ್ತಿರುತ್ತಿದ್ದಿಲ್ಲ. ಆದರೂ ಕೇವಲ ಹೊಟ್ಟೆತುಂಬ ಆಹಾರ ಸಿಗುತ್ತದೆಂಬ ಒಂದೇ ಒಂದು ಕಾರಣದಿಂದ ಆ ಕೆಲಸವನ್ನು ಮಾಡಲು ನಾ ಮುಂದು ತಾ ಮುಂದು ಎಂದು ಮುಗಿಬೀಳುತ್ತಿದ್ದರು. ಒಬ್ಬ ಸೋಂದರ್‌ಕಮಾಂಡೋಗೆ ತನ್ನ ತಾಯಿಯನ್ನೇ ಗ್ಯಾಸ್ ಚೇಂಬರಿಗೆ ಕಳಿಸುವ ಪ್ರಸಂಗ ಬಂತು. ಆಗ ಆತ ತುಂತುರು ಸ್ನಾನ ಮಾಡಿಸುವುದಾಗಿ ನಂಬಿಸಿ ಆಕೆಯನ್ನು ಒಳಗೆ ಕಳಿಸಿದ. ಇದನ್ನು ಸಹಿಸಲಾಗದ ಉಳಿದ ಸೋಂದರ್‌ಕಮಾಂಡೋಗಳೆಲ್ಲ ಒಟ್ಟಿಗೆ ಸೇರಿ ಈ ಮಾತೃದ್ರೋಹಿಯನ್ನು ಕೊಂದುಹಾಕಿದರು. ಹೊಟ್ಟೆತುಂಬಾ ಸಿಗುತ್ತಿದ್ದರೂ ಪಾಪಪ್ರಜ್ಞೆ ಅವರನ್ನು ಸದಾ ಕಾಡುತ್ತಿತ್ತು. ತಾನು ಮಾಡುತ್ತಿದ್ದ ಅಕೃತ್ಯಗಳನ್ನು ಸಹಿಸಲಾಗದ ಸೋಂದರ್‌ಕಮಾಂಡೋ ಒಬ್ಬ ತನ್ನ ಸಂಸಾರದ ಸಮೇತವಾಗಿ ಗ್ಯಾಸ್ ಚೇಂಬರ್ ಪ್ರವೇಶಿಸಿ ಬಾಗಿಲು ಬಂಧಿಸಿಕೊಂಡ.

ಚೇಂಬರಿನೊಳಗಡೆ ವಿಷಾನಿಲ ಹರಡುತ್ತಿದ್ದಾಗ ಒಳಗಿದ್ದವರು ಭಯದಿಂದ ಎದೆಎದೆ ಬಡಿದುಕೊಂಡು ಅಳುತ್ತಿದ್ದರು. ಕರುಳು ಕಿತ್ತಿಬರುವಹಾಗೆ ಚೀರುತ್ತಿದ್ದರು. ಆದರೆ ಮರಣಕ್ಕೆ ಹೆದರದ, ಮರಣವನ್ನೇ ಮಹಾನವಮಿಯೆಂದು ಅದನ್ನು ಸ್ವಾಗತಿಸುವ ಧೈರ್ಯಶಾಲಿಗಳೂ ಅಪರೂಪಕ್ಕೊಮ್ಮೊಮ್ಮೆ ಗ್ಯಾಸ್ ಚೇಂಬರಿನ ಅತಿಥಿಯಾಗಿರುತ್ತಿದ್ದರು. ಉಸಿರುಗಟ್ಟುವವರೆಗೂ ರಾಷ್ಟ್ರಗೀತೆ ಹಾಡುವುದನ್ನವರು ನಿಲ್ಲಿಸುತ್ತಿರಲಿಲ್ಲ.

ಈ ಹತ್ಯಾಕಾಂಡದಿಂದ ಸಿನಿಮೀಯ ರೀತಿಯಲ್ಲಿ ಪಾರಾದ ರೋಜೆನ್‌ಬ್ಲಾಮ್ ಎಂಬ ಸೋಂದರ್‌ಕಮಾಂಡೋ ಒಂದು ಅನುಪಮ ಅನುಭವವನ್ನು ವಿವರಿಸಿದ್ದಾನೆ:

ಕ್ರಿಶ್ಚಿಯನ್ನರಲ್ಲಿ ಪಾದ್ರಿಗಳು ಹೇಗೋ ಹಾಗೆ ಯಹೂದ್ಯರಲ್ಲಿ ರಾಬಿಗಳು. ಒಮ್ಮೆ ಆತ ರಾಬಿಯೊಬ್ಬನನ್ನು ಗ್ಯಾಸ್ ಚೇಂಬರಿಗೆ ಕರೆದುಕೊಂಡು ಹೊರಟಿದ್ದ. ಹೆಚ್ಚುಕಡಿಮೆ ನಿರ್ವಸ್ತ್ರನಾಗಿಯೇ ಇದ್ದ ಆತನಿಗೆ ತಲೆಯಮೇಲೆ ಏನಾದರೂ ಇಟ್ಟುಕೊಳ್ಳುವಂತೆ ರೋಜೆನ್‌ಬ್ಲಾಮ್ ಸೂಚಿಸಿದ. "ಏಕೆ ಮಗು?" ರಾಬಿ ಕೇಳಿದ. "ನೀನೀಗ ಗ್ಯಾಸ್ ಚೇಂಬರಿಗೆ ಹೊರಟಿದ್ದೀ. ಅಲ್ಲಿ ಕೊನೆಯ ಪ್ರಾರ್ಥನೆ ಸಲ್ಲಿಸುವಾಗ ತಲೆಯ ಮೇಲೆ ಏನಾದರೂ ಇರುವುದು ಬೇಡವೆ?" ಆಗಲೂ ರಾಬಿ ಅವಿಚಲಿತನಾಗಿಯೆ ಇದ್ದ. "ನಾನು ಈವರೆಗೆ ಯಾರಿಗೂ ಏನೂ ಮಾಡಿಲ್ಲ, ಮನಸ್ಸಿನಲ್ಲಿಯೂ ನಾನು ಯಾರಿಗೂ ಕೆಡಕು ಬಯಸಿಲ್ಲ. ಅಂತಹುದರಲ್ಲಿ ಅವರು ನನ್ನನ್ನೇಕೆ ಕೊಲ್ಲುತ್ತಾರೆ ಮಗು?" ಎಂದು ಕೇಳಿದ ರಾಬಿ. "ವಾದವಿವಾದ ಮಾಡುವುದಕ್ಕೆ ಕಾಲ ಇದಲ್ಲ. ನಿನಗೆ ಇಷ್ಟಬಂದ ಹಾಗೆ ಮಾಡು," ಉತ್ತರಿಸಿದ ರೋಜೆನ್‌ಬ್ಲಾಮ್. "ಆಗಲಿ. ಆದರೆ ಈ ಜನ ಯಹೂದ್ಯರನ್ನು ಹೇಗೆ ನಡೆಸಿಕೊಳ್ಳುತ್ತಾರೆ ಎನ್ನುವುದನ್ನು ನೀನು ಜಗತ್ತಿಗೆ ತಿಳಿಯಪಡಿಸಬೇಕು ನೋಡು," ಅಂದ ರಾಬಿ ಆಗ್ರಹದ ದನಿಯಲ್ಲಿ. "ಜಗತ್ತಿಗೆ ತಿಳಿಯಪಡಿಸುವುದೆ? ಇಂದು ನಿನ್ನ ಸರದಿ; ನಾಳೆ ನನ್ನದು," ಎಂದ ರೋಜೆನ್‌ಬ್ಲಾಮ್. ಆತ ಹೇಳಿದ್ದರಲ್ಲಿ ಉತ್ಪ್ರೇಕ್ಷೆಯೇನೂ ಇರಲಿಲ್ಲ. ಈ ಮಾರಣಹೋಮಕ್ಕೆ ಸಾಕ್ಷಿಯಾದ ಯಾರನ್ನಾದರೂ ಜರ್ಮನ್ನರು ಜೀವಂತ ಬಿಡುತ್ತಿರಲಿಲ್ಲ. ಸೋಂದರ್‌ಕಮಾಂಡೋಗಳ ಒಂದು ಬ್ಯಾಚು ಗ್ಯಾಸ್ ಚೇಂಬರಿನೊಳಗೆ ಹೋದರೆ ಅದನ್ನು ತುಂಬಲು ಹೊಸದಾಗಿ



ಮತ್ತೊಂದು ಪಡೆಯನ್ನು ತರಲಾಗುತ್ತಿತ್ತು. ಅದರ ಅವಧಿ ಕೂಡ ಕೆಲ ಕಾಲಮಾತ್ರ. ನಂತರ ಮತ್ತೊಂದು ಪಡೆಯ ಸರದಿ. ಈ ಕ್ರಮ ಅವಿಚ್ಛಿನ್ನವಾಗಿ ಹೀಗೆಯೆ ಸಾಗಿರುತ್ತಿತ್ತು.

ಇಂಥಾ ಭೀಭತ್ಸ ವಾತಾವರಣದಲ್ಲಿಯೂ ಪ್ರತ್ಯುತ್ಪನ್ನಮತಿಯನ್ನು ಕಳೆದುಕೊಳ್ಳದಿರುವವರು ಇದ್ದರು ಎನ್ನುವುದಕ್ಕೆ ರೋಮನ್ ಫ್ರೀಸ್ಟರನೇ ಸಾಕ್ಷಿ. ಹದಿನೈದರ ಈ ಎಳೆಯ ತೀರಾ ಅಶಕ್ತ, ಶ್ರಮಶಿಬಿರಗಳಲ್ಲಿರಲು ಅಯೋಗ್ಯ ಎಂದು ನಿರ್ಧರಿಸಿದ ಜರ್ಮನ್ ಅಧಿಕಾರಿಗಳು ಅವನನ್ನು ಗುಂಪಿನಿಂದ ಪ್ರತ್ಯೇಕಿಸಿದರು. ಇನ್ನು ತನ್ನನ್ನು ಗ್ಯಾಸ್ ಚೇಂಬರಿಗೆ ಕಳಿಸಲಾಗುತ್ತದೆ ಎಂಬುದನ್ನು ಅದು ಹೇಗೋ ಗ್ರಹಿಸಿದ ಫ್ರೀಸ್ಟರ್, ಜರ್ಮನ್ ಸೈನಿಕರೊಡನೆ ಸಖ್ಯಬೆಳೆಸಿ, ತಾನು ಜೀವನದಲ್ಲೆ ಲೇತ್‌ಮಶಿನನ್ನು ಕಂಡಿರದಿದ್ದರೂ ಅದನ್ನು ನಡೆಸುವಲ್ಲಿ ಪ್ರವೀಣನೆಂಬುದನ್ನು ಅವರ ತಲೆಯಲ್ಲಿ ತುಂಬಿದ. ಯುದ್ಧದ ಸಮಯ. ಮೊದಲೆ ಕುಶಲ ಕೆಲಸಗಾರರ ಕೊರತೆ. ಈ ಸುಸಂಧಿಯನ್ನು ಅವರು ಹಾಗೆಯೆ ಬಿಟ್ಟಾರೆಯೆ? ಮತ್ತೆ ಅವನನ್ನು ಶ್ರಮಶಿಬಿರಕ್ಕೆ ಸಾಗಿಸಿದರು.

ಆತ ಅಲ್ಲಿನ ಅನುಭವವನ್ನು ಹೇಳುತ್ತಾನೆ ಕೇಳಿ: "ಮೃತ್ಯುಮುಖದಲ್ಲೂ ಹೇಸಿಗೆಯನ್ನು ಹುಟ್ಟಿಸುವಂಥದ್ದಾಗಿತ್ತು. ಎಷ್ಟೋ ದಿನಗಳಿಂದ ನಾನು ಹೊಟ್ಟೆಗೆ ಏನೂ ತಿಂದಿರಲಿಲ್ಲ. ಅಂಥದರಲ್ಲಿ ರಾತ್ರಿ ನಾನು ಮಲಗಿದಾಗ ಒಬ್ಬಾತ ತೆವಳುತ್ತಾ ನನ್ನ ಬಳಿ ಬಂದು ಒಂದು ತುಣುಕು ಬ್ರೆಡ್ಡನ್ನು ನನ್ನ ಬಾಯಲ್ಲಿಟ್ಟ. ಇಂಥಾ ರಾತ್ರಿಯಲ್ಲಿ ಈ ಅಮೃತದ ತುಣುಕನ್ನು ಇಟ್ಟವರಾರಪ್ಪಾ ಅಂದುಕೊಳ್ಳುತ್ತಾ ಅವನತ್ತ ಮುಖ ತಿರುಗಿಸುವಷ್ಟರಲ್ಲೆ ಸಂಭೋಗ ಕ್ರಿಯೆಯನ್ನು ಪ್ರಾರಂಭಿಸಿಯೇ ಬಿಟ್ಟ. ಬಾಯಿ ತೆರೆದೆ.

## ಅವಳಿಗಳು

"ಎಲ್ಲೆಲ್ಲೂ ದುರ್ವಾಸನೆ. ಜತೆಗೆ ಕೊಳೆತ ಕಟ್ಟಿಗೆಯ ವಾಸನೆಯೂ ತೂರಿಕೊಂಡು ಬರುತ್ತಿತ್ತು. ನಸುಗತ್ತಲು. ನೀರವ ವಾತಾವರಣ. ನಮ್ಮ ಮೇಲೆ ಪ್ರಯೋಗಗಳು ನಡೆಯುತ್ತಿದ್ದಾಗ ಕಿಮಕ್ಕೆನ್ನದೆ ತಾಳಿಕೊಳ್ಳಬೇಕಾಗಿತ್ತು. ಇಷ್ಟಕ್ಕೂ ಅಳುವಷ್ಟು ಧೈರ್ಯವೂ ನಮಗಿರಲಿಲ್ಲ," ಎನ್ನುವುದನ್ನು ಬಿಟ್ಟರೆ ಅವಳಿಗಳಾದ ರೇನೇ ಸ್ಲೋಟ್‌ಕಿನ್ನನಿಗಾಗಲಿ ಇರಿನೇ ಹಿಜ್ಮೆಗಾಗಲಿ ಯಾತನಾ ಶಿಬಿರದ ಬಗೆಗೆ ಹೆಚ್ಚು ನೆನಪಾಗುವುದಿಲ್ಲ. ಸ್ವಾಭಾವಿಕವೆ. ಅವರಿಗಾಗ ಬರಿ ಆರರಷ್ಟೆ ವಯಸ್ಸು.

ಪ್ರಚಾರದ ಉದ್ದೇಶದಿಂದ ಜರ್ಮನ್ನರು ಮೊದಮೊದಲು ಅವಳಿಗಳ ಕುಟುಂಬಗಳಿಗಾಗಿ ವಿಶೇಷ ಶಿಬಿರಗಳನ್ನು ನಿರ್ಮಿಸಿದರು. ಬಹಳ ಚೆನ್ನಾಗಿಯೂ ನೋಡಿಕೊಂಡರು. ಆದರೆ ೧೯೪೪ರಲ್ಲಿ ಈ ಶಿಬಿರಗಳ ಅಗತ್ಯ ಜರ್ಮನ್ನರಿಗೆ ಕಾಣಲಿಲ್ಲ.

"ಶಿಬಿರವನ್ನು ಕೊನೆಗೊಳಿಸುವ ದಿನ ಬಂತು. ಜರ್ಮನ್ನರು ತಾಯಿಯನ್ನು ಬಲವಂತದಿಂದ ಕರೆದೊಯ್ಯುವಾಗ ಆಕೆ ಎದೆಎದೆ ಬಡಿದುಕೊಂಡು ಅಳುತ್ತಿದ್ದಳು. ಅವಳು ಅಳುವುದನ್ನು ನೋಡಿ ನಾವೂ ಅಳುತ್ತಿದ್ದೆವು. ಅವಳು ಅಳುತ್ತಿದ್ದುದನ್ನು ನೋಡಿ ನಾವು ಅಳುತ್ತಿದ್ದೆವೇ ಹೊರತು ಆಕೆ ಏಕೆ ಅಳುತ್ತಿದ್ದಾಳೆ ಎನ್ನುವುದು ನಮಗೆ ಅರ್ಥವಾಗುತ್ತಿರಲಿಲ್ಲ," ಎಂದು ಇರಿನೇ ನೆನೆಸಿಕೊಳ್ಳುತ್ತಾಳೆ. ಅವಳಿಗೀಗ ೫೭ರಷ್ಟು ವಯಸ್ಸು.

ಡಾ. ಜೋಸೆಫ್ ಮೆಂಗೇಲೇ ಅವಳಿಗಳ ಮೇಲೆ ಪ್ರಯೋಗ ನಡೆಸುವವನಿದ್ದುದರಿಂದ ಶಿಬಿರದ ಎಲ್ಲ ಅವಳಿಗಳನ್ನು ತಂದೆ-ತಾಯಿಗಳಿಂದ ಬೇರ್ಪಡಿಸಿ ಡಾ. ಮೆಂಗೇಲೇನ ಪ್ರಯೋಗಾಲಯಗಳಿಗೆ ಸಾಗಿಸಲಾಯಿತು. "ಈ ಡಾಕ್ಟರರನ್ನು ನಮ್ಮ ಡಾಕ್ಟರರು ಅನ್ನಬೇಕು" ಎನ್ನುವುದು ಜರ್ಮನ್ನರ ಪಾಠ. ಪಾಪ ಆ ಮಕ್ಕಳಿಗೇನು ಗೊತ್ತು? ಮಂಗೇಲೇನನ್ನು 'ನಮ್ಮ ಡಾಕ್ಟರು' ಎಂದೇ ಕರೆಯುತ್ತಿದ್ದವು. ಈ 'ನಮ್ಮ ಡಾಕ್ಟರು' ಪ್ರಯೋಗಕ್ಕಾಗಿ

ನಾನು ಕೂಗಬಹುದೆಂಬ ಆತಂಕದಿಂದ ಮತ್ತೊಂದು ತುಣಕನ್ನು ಬಾಯಲ್ಲಿಟ್ಟ. ಗಬಗಬ ಅದನ್ನು ತಿಂದೆ. ಅದಾದ ನಂತರ ಮತ್ತೊಂದು ತುಂಡು. ಅವನು 'ಕೆಲಸ' ಮುಗಿಸುವಷ್ಟರಲ್ಲಿ ನನ್ನ ಹೊಟ್ಟೆ ತುಂಬಿತ್ತು. ಇದೆಲ್ಲ ಅನೀತಿ ನಿಜ, ಹೊಟ್ಟೆ ಹಸಿದಿದ್ದಾಗ ಅದನ್ನೆಲ್ಲ ಯಾರು ಗಮನಿಸುತ್ತಾರೆ ಹೇಳಿ?

"ಅನಂತರ ಬದಿಯಲ್ಲಿ ಕೈಯಾಡಿಸಿದರೆ ನನ್ನ ಟೊಪ್ಪಿಗೆಯೇ ಮಾಯ! ಹಾಗಾದರೆ ಆತ ಬರಿ ತೀಟೆಯನ್ನು ತೀರಿಸಿಕೊಳ್ಳಲಿಕ್ಕಷ್ಟೇ ಅಲ್ಲ, ಟೊಪ್ಪಿಗೆಯನ್ನು ಕದಿಯಲಿಕ್ಕೂ ಬಂದಿದ್ದ. ಹಾಗಾದರೆ ನನ್ನ ಗತಿ? ಹಾಜರಿ ತೆಗೆದುಕೊಳ್ಳುತ್ತಿದ್ದಾಗ ಯಾರಾದರೂ ಟೊಪ್ಪಿಗೆಯಿಲ್ಲದವರು ಕಂಡುಬಂದರೆ ಅಂಥವರನ್ನು ಆಗಿಂದಾಗ್ಗೆ ಗುಂಡಿಟ್ಟು ಕೊಲ್ಲಲಾಗುತ್ತಿತ್ತು. ಆತನೇನೋ ಜೀವ ಉಳಿಸಿಕೊಂಡ. ಆದರೆ ನನ್ನ ಗತಿ? ತೀರಾ ರಾತ್ರಿಯಾಗಿತ್ತು. ಮೆಲ್ಲನೆ ತೆವಳಿಕೊಂಡು ಹೋಗಿ ಗಾಢ ನಿದ್ರೆಯಲ್ಲಿದ್ದ ಇನ್ನೊಬ್ಬನ ಟೊಪ್ಪಿಗೆಯನ್ನು ಕದ್ದೆ. ನನಗಾಗಿ ಪ್ರಾಣತೆತ್ತ ಆ ದುರ್ದೈವಿ ಯಾರೆಂಬುದು ನನಗೆ ಗೊತ್ತಾಗಲಿಲ್ಲ. ಇಷ್ಟಕ್ಕೂ ಅದನ್ನು ತಿಳಿದುಕೊಳ್ಳುವ ಆಸಕ್ತಿಯೂ ನನ್ನಲ್ಲಿರಲಿಲ್ಲ. ಒಂದು ಜೀವವನ್ನು ಕೊಂದೇ ಇನ್ನೊಂದು ಜೀವ ಬದುಕುತ್ತದೆನ್ನುವುದಕ್ಕೆ ನಮ್ಮ ಶಿಬಿರವೇ ಆಗ ಒಂದು ಜ್ವಲಂತ ಉದಾಹರಣೆಯಾಗಿತ್ತು."

ಒಮ್ಮೊಮ್ಮೆ ವಿಚಿತ್ರ ಸನ್ನಿವೇಶದಲ್ಲಿ ಜೀವ ಉಳಿದದ್ದೂ ಉಂಟು. ಮ್ಯಾಕ್ಸ್ ಗಾರ್ಸಿಯಾ ಎಂಬಾತ ಹಾಲಂಡಿನ ಯಹೂದ್ಯ. ಒಂದು ರಾತ್ರಿ ಅವನಿಗೆ ವಿಪರೀತವಾದ ಹೊಟ್ಟೆನೋವು ಬಂತು. ನೋವು ತಾಳಲಾರದೆ ಆತ ಗೋಳಿಡತೊಡಗಿದಾಗ ಶಿಬಿರವನ್ನು ನೋಡಿಕೊಳ್ಳುತ್ತಿದ್ದ ಜರ್ಮನ್ ಸೈನಿ

ಅನೇಸ್ತೇಶಿಯಾ ಕೊಡದೆ ಮಕ್ಕಳನ್ನು ಕೊಯ್ಯುತ್ತಿದ್ದಾಗ ಅವು ಕಿಮಕ್ಕೆನ್ನದೆ ಅದನ್ನು ಸಹಿಸಿಕೊಂಡಿರಬೇಕಾಗಿತ್ತು. ಒಂದು ಸಲ ಮೆಂಗೇಲೇ ಹೀಗೆ ಹೊಟ್ಟೆಯನ್ನು ಕೊಯ್ವಾಗ ಕರುಣೆಯಿಂದ ಇರಿನೇಗೆ ಒಂದು ತುಂಡು ಕಲ್ಲುಸಕ್ಕರೆಯನ್ನು ಕೊಟ್ಟನಂತೆ.

ರಶಿಯನ್ ಸೈನ್ಯ ಈ ಅವಳಿ ಮಕ್ಕಳ ಶಿಬಿರವನ್ನು ಸಮೀಪಿಸುತ್ತಿದ್ದಾಗ ಸುದ್ದಿ ತಿಳಿದ ಜರ್ಮನ್ನರು ಮಕ್ಕಳನ್ನೆಲ್ಲ ಒಂದು ಲಾರಿಯಲ್ಲಿ ತುಂಬಿದರು. "ಈ ಜರ್ಮನ್ನರು ನಮ್ಮನ್ನೆಲ್ಲ ಕೊಲ್ಲಲೆಂದೇ ಕರೆದೊಯ್ಯುತ್ತಿದ್ದಾರೆ ಎನ್ನುವುದು ನಮಗೆಲ್ಲ ಗೊತ್ತಿತ್ತು. ಆದರೆ ಏನೂ ಮಾಡುವಂತಿರಲಿಲ್ಲ. ಅಷ್ಟರಲ್ಲಿ ಡಾ. ಮೆಂಗೇಲೇ ಬಂದು, ಗದರಿಸಿ ಆ ಜರ್ಮನ್ನರನ್ನೆಲ್ಲ ಸಾಗಹಾಕಿದ. ಅವಳಿಗಳನ್ನು 'ಇಷ್ಟು ಮುತುವರ್ಜಿಯಿಂದ' ನೋಡಿಕೊಂಡಿದ್ದರಿಂದ ಅವರನ್ನು ಕೊಲ್ಲುವ ಅಧಿಕಾರ ತನಗೆ ಮಾತ್ರ ಇದೆಯೆಂದು ಮೆಂಗೇಲೇನ ವಾದ".

ಮುಂದೆ ಒಂದೆರಡೇ ದಿನಗಳಲ್ಲಿ ಆಷ್‌ವಿತ್ಸ್‌ನ ಇತರ ಬಂದಿಗಳೊಡನೆ ನಡೆಯಲು ಅವಳಿಗಳಿಗೆ ಆರ್ಡರು. ಆಜ್ಞೆಯನ್ನು ಧಿಕ್ಕರಿಸುವಂತಿರಲಿಲ್ಲ. ನಡೆಯಲು ಆಗುತ್ತಿರಲೂ ಇಲ್ಲ. ಅಂತಹ ಸ್ಥಿತಿಯಲ್ಲೇ ಮಕ್ಕಳು ಹೇಗುಹೇಗೋ ನಡೆಯತೊಡಗಿದವು.

ಈ ಮರಣದ ಸಾಲೋಟದಲ್ಲಿ ಹಿಂದೆ ಬಿದ್ದವರನ್ನು ಗುಂಡಿಟ್ಟುಕೊಲ್ಲಲಾಗುತ್ತಿತ್ತು. ಆದರೆ ಇರಿನೇ ಅಶಕ್ತಿಯಿಂದ ಹೆಣಗಳ ಮಧ್ಯದಲ್ಲಿ ಬಿದ್ದದ್ದು ಜರ್ಮನ್ನರಿಗೆ ಗೊತ್ತಾಗಲಿಲ್ಲ. ದೈವ ಅವಳನ್ನು ಉಳಿಸಿತ್ತು. ಒಬ್ಬ ಪೋಲಿಷ್ ಹೆಂಗಸು ಅವಳನ್ನೆತ್ತಿಕೊಂಡು ಕರೆದೊಯ್ದಳು.

ಮುಂದಿನದೆಲ್ಲ ಒಳ್ಳೆಯ ಕಥೆ. ಮಕ್ಕಳಿಲ್ಲದ ಅಮೆರಿಕನ್ ದಂಪತಿಗಳು ಅವಳನ್ನು ದತ್ತು ಪಡೆದು ಮಗಳಂತೆಯೇ ಸಾಕಿದರು. ರೇನೇನ ನೆನಪು ಅವಳನ್ನು ಕೊರೆಯುತ್ತಲೇ ಇತ್ತು. ನಿಜವಾದ ಮಗಳೆಂದೇ ಭಾವಿಸಿದ ಆ ದತ್ತು ತಂದೆತಾಯಿಗಳು ರೇನೇ ಸ್ಲೋಟ್‌ಕಿನ್ನನಿಗಾಗಿ ಎರಡು ವರ್ಷಗಳವರೆಗೆ ಹುಡುಕಿ, ಆತ ಪ್ರಾಗ್‌ನಲ್ಲಿರುವುದನ್ನು ಪತ್ತೆಹಚ್ಚಿ ಕೊನೆಗೂ ಅವರನ್ನು ಒಂದುಗೂಡಿಸಿದರು.

ಕರು ಅಲ್ಲಿಗೆ ಬಂದು ಅವನನ್ನು ಶಿಬಿರದ ಆಸ್ಪತ್ರೆಗೆ ಸಾಗಿಸಿದರು. ಶಿಬಿರದ ಆಸ್ಪತ್ರೆಗೆ ಯಾರಾದರೂ ಹೋದರೆಂದರೆ ಅವರ ಕತೆ ಮುಗಿಯಿತೆಂದೇ ಅರ್ಥ. ಆದರೆ ಮ್ಯಾಕ್ಸ್ ಗಾರ್ಸಿಯಾನ ದೈವ ಗಟ್ಟಿಯಾಗಿತ್ತು. ಶಿಬಿರದ ಡಾಕ್ಟರ್ ಅವನನ್ನು ಪರೀಕ್ಷಿಸಿ, ಗಾರ್ಸಿಯಾನಿಗೆ ಆದದ್ದು ಅಪೆಂಡಿಸೈಟಿಸ್ ಎಂದು ನಿರ್ಧರಿಸಿದ. ಯಕೃತ್ತಿನ ಊತವಿದ್ದವರನ್ನು ಅದುವರೆಗೆ ಉಪಚರಿಸಿರಲಿಲ್ಲವಾದ್ದರಿಂದ 'ಅನುಭವ ಪಡೆಯಲು' ಶಿಬಿರದ ಡಾಕ್ಟರ್ ಗಾರ್ಸಿಯಾನನ್ನು ತನ್ನ ಬಳಿಯೇ ಇರಿಸಿಕೊಂಡ.

ಸಾಲ್ ಡಿ. ಲೀಮಾನ ಕಥೆ ಇದಕ್ಕಿಂತ ವಿಚಿತ್ರ. ಆತ ಸದಾ ಚಾಳೀಸುಧಾರಿ. ಅದಿಲ್ಲದೆ ವ್ಯವಹಾರ ನಡೆಯುವಂತೆಯೇ ಇರಲಿಲ್ಲ. ಹೀಗಿರಲು ಒಂದು ದಿನ ಅವನಿಗೂ ಶಿಬಿರದಲ್ಲಿದ್ದ ಇನ್ನೊಬ್ಬನಿಗೂ ಜಗಳ ಬಂದು ಆ ಮನುಷ್ಯ ಸಾಲ್ ಲೀಮಾನ ಕನ್ನಡಕವನ್ನು ಮುರಿದುಬಿಟ್ಟ. ಇದಾದ ಒಂದೆರಡು ದಿನಗಳಲ್ಲೆ ಜರ್ಮನ್ನರು ಬಂದು ಕೆಲವರನ್ನು ಆಯ್ದು, ಗ್ಯಾಸ್ ಚೇಂಬರಿಗೆ ಕಳಿಸಿದರು. ಅವರೆಲ್ಲ ಹೊರಟುಹೋದ ಮೇಲೆ, "ಅವರೆಲ್ಲ ದಷ್ಟಪುಷ್ಟವಾಗಿಯೇ ಇದ್ದರಲ್ಲಾ; ಹೀಗಿದ್ದರೂ ಅವರನ್ನೇಕೆ ಗ್ಯಾಸ್ ಚೇಂಬರಿಗೆ ಸಾಗಿಸಿದರು?" ಎಂದ ಸಾಲ್ ಲೀಮಾ ಕುತೂಹಲದಿಂದ. "ಹೌದು. ದಷ್ಟಪುಷ್ಟರಾಗಿದ್ದರೇನೋ ಸರಿ. ಆದರೆ ಅವರ ದೃಷ್ಟಿಯೇ ಸರಿಯಾಗಿರಲಿಲ್ಲ. ಅಂಥವರನ್ನು ಇಟ್ಟುಕೊಂಡು ಏನು ಮಾಡುವುದು? ಎಂದು ಜರ್ಮನ್ನರು ಕನ್ನಡಕ ಧರಿಸುವ ಎಲ್ಲರನ್ನೂ ಶಿಬಿರದಿಂದ ಗ್ಯಾಸ್ ಚೇಂಬರಿಗೆ ಸಾಗಿಸಿದರು," ಇನ್ನೊಬ್ಬ ಮಿತ್ರ ವಿವರಣೆ ನೀಡಿದ.

ಮಾಲಾ ಶ್ವಿಬೆಟ್‌ಬಾಮಳ ಕಥೆಯೇ ಬೇರೆ. ಆಷ್‌ವಿತ್ಸ್‌ಗೆ ತಂದಾಗ ಅವಳಿಗೆ ಬರಿ ಇಪ್ಪತ್ತರಷ್ಟು ವಯಸ್ಸು. ಪ್ರಚಂಡ ಕುಶಾಗ್ರಮತಿ. ಬಹುಭಾಷಾ ವಿಶಾರದೆ. ಯುರೋಪಿನ ಬೇರೆ ಬೇರೆ ಕಡೆಗಳಿಂದ ತರಲ್ಪಟ್ಟ ಯಹೂದ್ಯರೊಡನೆ ಸಂಪರ್ಕ ಸಾಧಿಸಬಲ್ಲ ವ್ಯಕ್ತಿಯನ್ನು ಹುಡುಕುತ್ತಿದ್ದ ಜರ್ಮನ್ನರಿಗೆ ಈಕೆ ಕಣ್ಣಿಗೆ ಬಿದ್ದಾಗ ತಮ್ಮ ಆಜ್ಞೆಗಳನ್ನು ಶಿಬಿರದಲ್ಲಿದ್ದವರಿಗೆ ಅವರವರ ಭಾಷೆಯಲ್ಲಿ ತಿಳಿಸಲು ಇವಳೇ ಸರಿ ಎಂದವರು ನಿರ್ಧರಿಸಿದರು.

ಆ ಶಿಬಿರದಲ್ಲಿಯೇ ಎಡ್ವರ್ಡ್ ಗಾಲಿನ್‌ಸ್ಕಿ ಎಂಬ ಪೋಲಿಷ್ ಮೂಲದ ರಾಜಕೀಯ ಕೈದಿಯೂ ಇದ್ದ. ಇವರಿಬ್ಬರೂ ಪ್ರೇಮದಲ್ಲಿ ಬಿದ್ದು ಅಲ್ಲಿಂದ ಪಾರಾಗಲು ನಿರ್ಧರಿಸಿದರು. ನಿರ್ಧಾರವೇನೋ ಸರಿ, ಆದರೆ ಪಾರಾಗುವುದು ಹೇಗೆ? ಅವರಿಬ್ಬರೂ ಜರ್ಮನ್ ಸೈನಿಕನೊಬ್ಬನೊಡನೆ ಸಖ್ಯ ಬೆಳೆಸಿ, ರುಷುವತ್ತು ನೀಡಿ, ಸೈನಿಕನ ಸಮವಸ್ತ್ರವನ್ನು ದೊರಕಿಸಿದರು. ಶ್ವಿಬೆಟ್‌ಬಾಮ್ ರಕ್ಷಕರ ಕೋಣೆಯಿಂದ ಒಂದು ಪಾಸ್ ದೊರಕಿಸಿದಳು. ೧೯೪೪ರ ಜೂನ್ ೨೪ರಂದು ಗಾಲಿನ್‌ಸ್ಕಿ ಜರ್ಮನ್ ಸೈನಿಕನ ವೇಷದಲ್ಲೂ ಶ್ವಿಬೆಟ್‌ಬಾಮ್ ಕೈದಿಯ ವೇಷದಲ್ಲೂ ಹೊರಬಿದ್ದು, ದ್ವಾರವನ್ನು ಕಾಯುತ್ತಿದ್ದ ಸೈನಿಕನಿಗೆ ಪಾಸ್ ತೋರಿಸಿ ಪಾರಾದರು. ಸ್ವಲ್ಪ ಸಮಯದಲ್ಲೆ ಈ ಸುದ್ದಿ ಶಿಬಿರದ ತುಂಬಾ ಹಬ್ಬಿತು. ಜರ್ಮನ್ ಸರಕಾರ ಇದನ್ನು ಎಲ್ಲೆಡೆಯೂ ಪ್ರಚುರಪಡಿಸಿ, ಕಂಡವರು ಅವರನ್ನು ಹಿಡಿದು ಒಪ್ಪಿಸಬೇಕೆಂಬ ಫರ್ಮಾನು ಹೊರಡಿಸಿತು. ಜರ್ಮನ್ ಸೈನಿಕರೂ ಪೊಲೀಸರೂ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಹುಡುಕಲಾರಂಭಿಸಿದರು. ಹದಿನೈದು ದಿನಗಳ ನಂತರ ಪೋಲೆಂಡಿನ ದಕ್ಷಿಣ ತುದಿಯಲ್ಲಿ ಅವರಿಬ್ಬರೂ ಸಿಕ್ಕಾಗ ಅವರನ್ನು ಮರಳಿ ಶಿಬಿರಕ್ಕೆ ತರಲಾಯಿತು.

ಸಪ್ಟಂಬರ್ ೧೫ ಅವರನ್ನು ಗಲ್ಲಿಗೇರಿಸುವ ದಿನ. ಶಿಬಿರದಲ್ಲಿರುವ ಎಲ್ಲರಿಗೂ ಪಾಠ ಕಲಿಸಬೇಕೆಂದು ಜರ್ಮನ್ನರು ಅವರನ್ನು ಎಲ್ಲರ ಎದುರಿನಲ್ಲೆ ನೇಣೆಗೇರಿಸಲು ನಿರ್ಧರಿಸಿದ್ದರು. ಮೊದಲು ಗಾಲಿನ್‌ಸ್ಕಿಯ ಸರದಿ. ಕುಣಿಯನ್ನು ಕತ್ತಿಗೆ ಸೇರಿಸಿಕೊಂಡವನೇ ಪೋಲಂಡಿನ ಜಯಘೋಷ ಮಾಡುತ್ತಾ ಕಾಲಕೆಳಗಿನ ಕುರ್ಚಿಯನ್ನೊದ್ದು ಪ್ರಾಣಬಿಟ್ಟ. ಅನಂತರ ಶ್ವಿಬೆಟ್‌ಮನ್. ಅವಳು ನೇಣುಗಂಬವನ್ನೇರುವುದನ್ನು ತೋರಿಸಲು ಶಿಬಿರದ ಹೆಂಗಸರನ್ನೆಲ್ಲ ಅಲ್ಲಿಗೆ ಕರೆತರಲಾಗಿತ್ತು. ಶ್ವಿಬೆಟ್‌ಮನ್ ಗಾಲಿನ್‌ಸ್ಕಿಯ ಹಾಗೆ ಕುಣಿಯನ್ನೂ ಸೇರಿಸಿಕೊಳ್ಳಲಿಲ್ಲ; ಜಯಘೋಷವನ್ನೂ ಮಾಡಲಿಲ್ಲ, ಬಚ್ಚಿಟ್ಟುಕೊಂಡಿದ್ದ ಬ್ಲೇಡನ್ನು ಸರ್ರನೆ ಹೊರದೆಗೆದು, ಮುಂಗೈ ನರಗಳನ್ನು ಸೀಳಿ ರಕ್ತವನ್ನು ಜರ್ಮನ್ನರಿಗೆ ಎರಚಿದಳು. ಆಕೆ ಗಾಲಿನ್‌ಸ್ಕಿಯನ್ನು

ಹಿಂಬಾಲಿಸಲು ತಡವಾಗಲಿಲ್ಲ. ಆಷ್‌ವಿತ್ಸ್‌ನ ಕರಾಳ ಅಧ್ಯಾಯವೊಂದು ಇತಿಹಾಸದಲ್ಲಿ ಸೇರಿ ಹೋಯಿತು.

ಶಿಬಿರವಾಸಿಗಳ ಭವಿಷ್ಯ ಕಗ್ಗತ್ತಲೆಯಲ್ಲಿ ಮುಳುಗಿತ್ತು. ಬೆಳಕು ಕಾಣುವ ಯಾವ ಲಕ್ಷಣಗಳೂ ಇರಲಿಲ್ಲ. ಇಂತಹುದರಲ್ಲಿ ಆಗಸ್ಟ್ ಇಪ್ಪತ್ತರಂದು ಇಟಲಿಯ ಫಾಗಿಯಾ ವೈಮಾನಿಕ ನೆಲೆಯಿಂದ ಏಕಾಏಕಿಯಾಗಿ ಒಂದಲ್ಲ, ಎರಡಲ್ಲ, ನೂರಾ-ಇಪ್ಪತ್ತು ಅಮೆರಿಕದ ಬಾಂಬರ್ ವಿಮಾನಗಳು ಆಷ್‌ವಿತ್ಸ್ ಮೇಲೆ ಹಾರಿಹೋದವು. ಕೂಡಲೆ ಸೈರನ್ ಒದರಿಸಲಾಯಿತು. ಆದರೆ ಶಿಬಿರವಾಸಿಗಳು ಅಡಗಿಕೊಳ್ಳುವುದಾದರೂ ಎಲ್ಲಿ? ತಮ್ಮ ಬಂಕರಿನಲ್ಲಿಯೆ ಅವರು ಆಶ್ರಯಪಡೆದರು. ಅಪ್ಪರ್ ಸೈಲೇಶಿಯಾದಲ್ಲಿನ ಫ್ಯಾಕ್ಟರಿಗಳ ಮೇಲೆ ಬಾಂಬ್ ಹಾಕಲು ಆ ವಿಮಾನಗಳು ಹೊರಟಿದ್ದವೆನ್ನುವುದು ಅನಂತರ ಗೊತ್ತಾಯಿತು. ಮತ್ತೊಮ್ಮೆ ಇದೇ ಘಟನೆಯ ಪುನರಾವರ್ತನೆ. ಆಷ್‌ವಿತ್ಸ್ ಹತ್ತಿರವೇ ಐ.ಜಿ. ಫಾರ್ಬೆನ್ ಕಂಪನಿಯ ಒಂದು ಫ್ಯಾಕ್ಟರಿ. ಕಲ್ಲಿದ್ದಲನ್ನು ಕೃತಕ ಇಂಧನವಾಗಿ ಪರಿವರ್ತಿಸುವುದೇ ಆ ಫ್ಯಾಕ್ಟರಿಯ ಕೆಲಸ. ಅದರಿಂದಲೆ ಜರ್ಮನ್ ವಿಮಾನಗಳಿಗೆ ಇಂಧನದ ಪೂರೈಕೆ. ಈ ಸಲದ ವಿಮಾನ ದಾಳಿಯ ಗುರಿ ಈ ಫ್ಯಾಕ್ಟರಿಯನ್ನು ನಾಶಪಡಿಸುವುದಾಗಿತ್ತು. ವಿಮಾನಗಳು ಫಾಗಿಯಾದಿಂದ ತೂರಿಬಂದಾಗ ಆಷ್‌ವಿತ್ಸ್ ಮೇಲಿನ ಆಕಾಶ ಮಿಡತೆಗಳಿಂದ ಕವಿದುಹೋದ ಹಾಗೆ ಕಾಣುತ್ತಿತ್ತು. ಆದರೂ ಒಂದಾದರೂ ಬಾಂಬ್ ಆಷ್‌ವಿತ್ಸ್ ಮೇಲೆ ಬೀಳಲಿಲ್ಲ.

ಆ ವೇಳೆಗಾಗಲೇ ಆಷ್‌ವಿತ್ಸ್‌ನಲ್ಲಿ ನಡೆಯುತ್ತಿದ್ದ ಕ್ರೌರ್ಯದ ಕತೆಗಳು ಅಲೆಅಲೆಯಾಗಿ ಜಗತ್ತಿನ ತುಂಬಾ ಹಬ್ಬಿದ್ದವು. ಅಮೆರಿಕದ ವಿಮಾನಗಳು ಅಪ್ಪರ್ ಸೈಲೇಶಿಯಾದ ಮೇಲೆ ದಾಳಿ ಪ್ರಾರಂಭಿಸಿದ ಸುದ್ದಿ ತಿಳಿದ ಕೂಡಲೆ ಅಮೆರಿಕದ ಯಹೂದ್ಯ ಧುರೀಣರು ರಾಷ್ಟ್ರಾಧ್ಯಕ್ಷ ರೂಜ್‌ವೆಲ್ಟ್‌ರನ್ನು ಭೇಟಿಯಾಗಿ, ಮರಣಾಸನ್ನರಾಗಿರುವ ಯಹೂದ್ಯರಿಗೆ ಹಾನಿಯಾದರೂ ಚಿಂತೆಯಿಲ್ಲ, ಅಲ್ಲಿನ ಚಿತಾಗೃಹದ ಸಮೇತವಾಗಿ ಇಡಿ ಆಷ್‌ವಿತ್ಸ್ ಪಟ್ಟಣವನ್ನೇ ಧ್ವಸ್ತಗೊಳಿಸಬೇಕು. ಅಂದರೆ ಈ ರೀತಿಯಿಂದಲಾದರೂ ಯಹೂದ್ಯರಿಗೆ ಮುಂದೊದಗಬಹುದಾದ ಆಪತ್ತನ್ನು ತಪ್ಪಿಸಬಹುದು ಎಂದು ಸೂಚಿಸಿದರು. ವಾಸ್ತವವಾಗಿ ಆಷವಿತ್ಸ್‌ನ ಯಹೂದ್ಯರಿಗೂ ಅದೇ ಬೇಕಾಗಿತ್ತು. ಅಲ್ಲಿಂದ ಬದುಕುಳಿದ ಸಲಿಯಾ ರೋಜೆನ್‌ಬರ್ಗ್ ಹೇಳುವಂತೆ, ಅವರೆಲ್ಲ ಸಾವನ್ನು ಸ್ವಾಗತಿಸಲು ಸಿದ್ಧರಾಗಿಯೇ ನಿಂತಿದ್ದರು. "ಆದರೆ ದುರ್ದೈವದಿಂದ ಸಾವು ಬರಲೇ ಇಲ್ಲ." ಥಿಯೋಡೋರ್ ರೂಜ್‌ವೆಲ್ಟ್‌ರಿಗೂ ಯಹೂದ್ಯ ಧುರೀಣರ ಮಾತು ಸರಿಯೆನ್ನಿಸಿತು. ಆದರೆ 'ಮಾನವೀಯ ಕಾರಣ'ಗಳಿಂದಾಗಿ ಬಾಂಬ್ ಹಾಕುವ



ಬದಲು ಯುದ್ಧವನ್ನು ಜಯಿಸುವತ್ತ ಹೆಚ್ಚು ಲಕ್ಷ್ಯವಹಿಸಿದರೆ ಯಹೂದ್ಯರಿಗೆ ಒಳಿತಾಗಬಹುದೆಂದು ಭಾವಿಸಿದ ಅಮೆರಿಕದ ಯುದ್ಧ ಇಲಾಖೆ ರೂಜ್‌ವೆಲ್ಟ್‌ರ ಮನೋಗತವನ್ನು ಪೂರೈಸಲೇ ಇಲ್ಲ. ಹೀಗಾಗಿ ಬಾಂಬ್ ಹಾಕಿಸಿಕೊಂಡು ಯಾತನೆಗಳಿಗೆ ವಿದಾಯ ಹೇಳಬೇಕೆಂಬ ಆಷ್‌ವಿತ್ಸ್ ಶಿಬಿರವಾಸಿಗಳ ಇಚ್ಛೆ ಫಲಿಸಲೇ ಇಲ್ಲ.

ಮಿತ್ರರಾಷ್ಟ್ರಗಳ ಕೈ ಮೇಲಾಗುತ್ತಿರುವ ಸುದ್ದಿ

ಅದು ಹೇಗೋ ಆಷ್‌ವಿತ್ಸ್‌ನ್ನು ತಲುಪಿತ್ತು. ಇದೇ ಸಮಯದಲ್ಲಿ ಗೊಂದಲಹಾಕಿ, ಬಂಡೆದ್ದು ಶಿಬಿರವನ್ನು ಪೂರಾ ಉಧ್ವಸ್ತಗೊಳಿಸಿ ಅಲ್ಲಿಂದ ಎಲ್ಲರೂ ಪಾರಾಗುವುದಾಗಿ ಸೋಂದರ್‌ಕಮಾಂಡೋಗಳು ನಿರ್ಧರಿಸಿದರು. ಶಿಬಿರದ ಗಟ್ಟಿಯಾದ ಜನ-ಅದರಲ್ಲೂ ಮುಖ್ಯವಾಗಿ ಹೆಂಗಸರು- ಆಷ್‌ವಿತ್ಸ್‌ಗೆ ಸನಿಹದಲ್ಲಿದ್ದ ಜರ್ಮನ್ನರ ಶಸ್ತ್ರಾಸ್ತ್ರ ಕಾರಖಾನೆಗಳಲ್ಲಿ ಕಡ್ಡಾಯದ ಕೂಲಿಯಾಳುಗಳಾಗಿ ಕೆಲಸ ಮಾಡುತ್ತಿದ್ದರು. ಸೋಂದರ್‌ಕಮಾಂಡೋಗಳು, ಕಾರಖಾನೆಯಿಂದ ಬರುವಾಗ ದಿನಾಲು ಒಂದೆರಡು ಗ್ರಾಮುಗಳಷ್ಟಾದರೂ ಮದ್ದನ್ನು ಕದ್ದು ತರಬೇಕೆಂದೂ ಅದರಿಂದ ಗ್ರೆನೇಡುಗಳನ್ನು ತಯಾರಿಸಿ, ಚಿತಾಗಾರ ಹಾಗೂ ಗ್ಯಾಸ್ ಚೇಂಬರುಗಳ ಮೇಲೆ ಒಗೆದು, ಶಿಬಿರವನ್ನು ಉಧ್ವಸ್ತಗೊಳಿಸಿ, ಸದಾ ವಿದ್ಯುತ್ತು ಹರಿಯುವ ಶಿಬಿರದ ಬೇಲಿಯನ್ನು ಕತ್ತರಿಸಿ ಎಲ್ಲರನ್ನು ಪಾರು ಮಾಡುವುದಾಗಿ ಹೇಳಿದರು. ಶಸ್ತ್ರಾಸ್ತ್ರ ಕಾರಖಾನೆಗಳಲ್ಲಿ ಕೆಲಸ ಮಾಡುವವರು ಸಾವಿರಾರು ಜನ. ಕೆಲವೇ ದಿನಗಳಲ್ಲಿ ಹಲವಾರು ಗ್ರೆನೇಡುಗಳಿಗೆ ಸಾಕಾಗುವಷ್ಟು ಸ್ಫೋಟಕ ಸಂಗ್ರಹವಾಯಿತು. ಗ್ರೆನೇಡುಗಳೂ ತಯಾರಾದವು. ಬಂಡೇಳುವ ದಿನವನ್ನೂ ನಿರ್ಧರಿಸಲಾಯಿತು.

ಈ ಸುದ್ದಿ ಅದು ಹೇಗೋ ಜರ್ಮನ್ನರಿಗೆ ಗೊತ್ತಾಗಿಯೇಬಿಟ್ಟಿತು. ೧೯೪೪ರ ಅಕ್ಟೋಬರ್ ಏಳರಂದು ಜರ್ಮನ್ ಸೈನಿಕರು ಆಷ್‌ವಿತ್ಸ್‌ಗೆ ಬಂದು ಮುನ್ನೂರು ಸೋಂದರ್‌ಕಮಾಂಡೋಗ

## ಪ್ರೇಮಿಗಳು

ಬೀಲೇಕಿಯಾ ಪೋಲಂಡಿನವ, ಸಿಬುಲ್‌ಸ್ಕಾಳೂ ಪೋಲಂಡಿನವಳೆ. ಆದರೆ ಒಬ್ಬಾತ ಕ್ಯಾಥೋಲಿಕ್, ಇನ್ನೊಬ್ಬಾಕೆ ಯಹೂದ್ಯಳು. ಜಾತಿ ಅವರಿಬ್ಬರ ಪ್ರೇಮಕ್ಕೆ ಅಡ್ಡವಾಗಿರಲಿಲ್ಲ, ಇಬ್ಬರೂ ವಿವಾಹವಾಗಲು ನಿಶ್ಚಯಿಸಿದರು.

ಆದರೆ ಅವರಿಬ್ಬರೂ ಜರ್ಮನ್ನರಿಂದ ಬಂಧಿಸಲ್ಪಟ್ಟು ಶ್ರಮಶಿಬಿರಕ್ಕೆ ಸಾಗಿಸಲ್ಪಟ್ಟರು. ಶಿಬಿರ ಒಂದೇ ಆದರೂ ಇಬ್ಬರೂ ಕೆಲಸ ಮಾಡುತ್ತಿದ್ದುದು ಬೇರೆ ಬೇರೆ ವಿಭಾಗಗಳಲ್ಲಿ. ಹೀಗಾಗಿ ಒಬ್ಬರನ್ನೊಬ್ಬರು ಭೇಟಿಯಾಗುವಂತಿರಲಿಲ್ಲ. ಆದರೂ ಅದು ಹೇಗೋ ಸಮಯ ಸಾಧಿಸಿ ಒಂದು ದಿನ ಬೀಲೇಕಿಯಾ ಲಾಂಡ್ರಿಯಲ್ಲಿ ಕೆಲಸಮಾಡುತ್ತಿದ್ದ ಸಿಬುಲ್‌ಸ್ಕಾಳನ್ನು ಭೇಟಿಯಾಗಿ, "ಏನೇನೂ ಚಿಂತಿಸಬೇಡ; ನಾನು ಕೆಲವೇ ದಿನಗಳಲ್ಲಿ ನಿನ್ನನ್ನು ಪಾರು ಮಾಡುತ್ತೇನೆ," ಎಂದು ಹೇಳಿದಾಗ ಸ್ವಾಭಾವಿಕವಾಗಿಯೇ ಸಿಬುಲ್‌ಸ್ಕಾಳಿಗೆ ನಂಬಿಕೆಯಾಗಲಿಲ್ಲ.

೧೯೪೪ರ ಜುಲೈ ೨೧ರಂದು ಬೀಲೇಕಿಯಾ ಜರ್ಮನ್ ಸೈನಿಕನ ವೇಷದಲ್ಲಿ ಲಾಂಡ್ರಿ ವಿಭಾಗಕ್ಕೆ ಹೋಗಿ, ""ಸಿಬುಲ್‌ಸ್ಕಾ ಎಲ್ಲಿ? ಬೇಗ ಕಳಿಸಿ. ಇಂಟರಾಗೇಷನ್‌ಗೆ ಕರೆದೊಯ್ಯಬೇಕಾಗಿದೆ," ಅಂದ ಕೈಲಿದ್ದ ಖೋಟಾ ವಾರಂಟನ್ನು ಝಳಪಿಸುತ್ತಾ. ಇಂಟರಾಗೇಷನ್ನಿಗೆ ಕರೆದೊಯ್ಯಲಾಗುತ್ತದೆಯೆಂದರೇನೇ ಶಿಬಿರದಲ್ಲೆಲ್ಲಾ ನಡುಕದ ಅನುಭವ. ಇನ್ನು ತಾವೆಂದೂ ಸಿಬುಲ್‌ಸ್ಕಾಳನ್ನು ಜೀವಂತವಾಗಿ ಕಾಣಲಾರವೆಂದೇ ಶಿಬಿರವಾಸಿಗಳ ವಿಶ್ವಾಸ. ಸಿಬುಲ್‌ಸ್ಕಾಳಿಗಂತೂ ಬವಳಿಬರುವುದೊಂದೇ ಬಾಕಿ. "ನಡೆ, ಎಷ್ಟೊಂದು ತಡಮಾಡುವುದು?" ಎಂದು ಗದರಿಸಿ, ಲಾಂಡ್ರಿ ಮುಖ್ಯಸ್ಥಳತ್ತ ತಿರುಗಿ, "ಆಯಿತು, ನಾನಿನ್ನು ಹೊರಡುತ್ತೇನೆ, ಹೈಲ್ ಹಿಟ್ಲರ್," ಎಂದ ಬೀಲೇಕಿಯಾ.

ಸ್ವಲ್ಪ ದೂರದಲ್ಲೇ ಚೆಕ್‌ಪೋಸ್ಟ್. ಅಲ್ಲೊಬ್ಬ ಜರ್ಮನ್ ಕಾವಲುಗಾರ. ಯಾರಾದರೂ ಹೊರಗೆ ಹೋಗುವುದಿದ್ದರೆ ಪಾಸ್ ತೋರಿಸಿಯೇ ಹೋಗಬೇಕು. ಬೀಲೇಕಿಯಾ ಪ್ಯಾಂಟಿನಿಂದ ಪಾಸ್ ಹೊರದೆಗೆದು, "ಒಬ್ಬ ಗಾರ್ಡ್, ಒಬ್ಬ ಮಹಿಳಾ ಕೈದಿ- ಬೂಡಿ

ಳನ್ನು ವರ್ಗಾಯಿಸಿರುವುದಾಗಿ ಹೇಳಿದರು. ಸಾಕ್ಷಿಗಳ ಪರಿಭಾಷೆಯಲ್ಲಿ ಸೋಂದರ್‌ಕಮಾಂಡೋಗಳನ್ನು ವರ್ಗಾಯಿಸುವುದೆಂದರೆ ಅವರನ್ನು ಗ್ಯಾಸ್ ಚೇಂಬರಿಗೆ ಕಳಿಸುವುದೆಂದೇ ಅರ್ಥ.

ಸುದ್ದಿ ತಿಳಿಯುತ್ತಲೇ ಶಿಬಿರದಲ್ಲೆಲ್ಲ ತುಮುಲ ಎದ್ದಿತು. ಕಲ್ಲು, ಕಬ್ಬಿಣದ ಸಲಳು, ಸರಪಳಿ, ಚಾಕು ಹೀಗೆ ಕೈಗೆ ಸಿಕ್ಕದ್ದನ್ನೆಲ್ಲ ಹಿಡಿದು ಶಿಬಿರವಾಸಿಗಳು ಬಂಡೆದ್ದರು. ನಾಲ್ಕನೆ ನಂಬರಿನ ಚಿತಾಗೃಹದ ಅಟ್ಟದ ಮೇಲೆ ಬೇಲುಗಟ್ಟಲೆ ಯಹೂದ್ಯರ ಕೂದಲನ್ನು ಜರ್ಮನಿಯ ಜಮಖಾನೆ ಕಾರಖಾನೆಗಳಿಗೆ ಕಳಿಸಲು ಪೇರಿಸಿಡಲಾಗಿತ್ತು. ಶಿಬಿರವಾಸಿಗಳು ಅವುಗಳನ್ನೆಲ್ಲ ಚಿತಾಗೃಹಗಳಲ್ಲಿ ಹರಡಿ ಪೆಟ್ರೋಲ್ ಸುರಿದು ಬೆಂಕಿಯಿಟ್ಟರು. ಕೈಲಿ ಏನೂ ಇಲ್ಲದವರು ಮುಷ್ಟಿ ಯುದ್ಧಕ್ಕೆ ಇಳಿದರು. ಆದರೆ ಶಸ್ತ್ರಾಸ್ತ್ರಸಜ್ಜಿತರಾದ ಜರ್ಮನ್ನರ ಮುಂದೆ ಶಿಬಿರವಾಸಿಗಳ ಆಟ ನಡೆಯಲಿಲ್ಲ. ಆ ದಿನ ಸೂರ್ಯ ಮುಳುಗುವ ಹೊತ್ತಿಗೆ ಜರ್ಮನ್ ಸೈನಿಕರು ೬೬೩ ಸೋಂದರ್ ಕಮಾಂಡೋಗಳ ಪೈಕಿ ೪೫೧ ಜನರನ್ನು ಕೊಂದು ಶಿಬಿರದ ಒಲೆಗಳಿಗೆ ಎಸೆದಿದ್ದರು. ಪ್ರಾಣತೆತ್ತವರ ಪೈಕಿ ಉಳಿದವರ ಸಂಖ್ಯೆ ಇದಕ್ಕಿಂತ ಹೆಚ್ಚಾಗಿತ್ತು.

ಶಿಬಿರವಾಸಿಗಳ ಪರವಾಗಿ ಎದ್ದು ಕಾಣುವ ಹಾಗೆ ಕೆಲಸ ಮಾಡಿದ ಎಸ್ಟರ್ ವಾಜ್ಬ್ಲಮ್, ಆಲಾ ಗೆರ್‌ಟ್ನರ್, ರೆಜಿನಾ ಸಾಫಿರ್‌ತ್ಸ್ಟೇನ್ ಹಾಗೂ ರೋಜಾ ರೋಬೋಲಾ ಎಂಬ ನಾಲ್ವರು ಮಹಿಳೆಯರನ್ನು ಬಂಧಿಸಿ ಸತತ ಎರಡು ವಾರಗಳವರೆಗೆ ಚಿತ್ರಹಿಂಸೆ ನೀಡಲಾಯಿತು. ಆದರೂ ಜನ ಬಂಡೇ

ಶಿಬಿರಕ್ಕೆ" ಎಂದ. ಕಾವಲುಗಾರ ಪಾಸ್ ಇಸಿದುಕೊಂಡು, ಒಮ್ಮೆ ಬೀಲೇಕಿಯಾನನ್ನೂ ಮತ್ತೊಮ್ಮೆ ಸಿಬುಲ್‌ಸ್ಕಾಳನ್ನೂ ನೋಡಿ ಹೊರಗೆ ಹೋಗಲು ಅನುಮತಿ ನೀಡಿದ. ಪ್ರತಿಯಾಗಿ ಬೀಲೇಕಿಯಾ 'ದಾಂಕೆ' (ಧನ್ಯವಾದ) ಹೇಳಿದ.

ಅಲ್ಲಿಂದ ಪಾರಾದ ಅವರಿಬ್ಬರೂ ಹತ್ತು ದಿನಗಳ ಕಾಲ ಹೊಲದಲ್ಲಿಯೆ ಅಡಗಿಕೊಂಡಿದ್ದರು. ಅನಂತರ ಯಾರೂ ಇಲ್ಲದ ಸಮಯ ಸಾಧಿಸಿ ಅಲ್ಲಿಂದ ಹೊರಬಿದ್ದು ಬೀಲೇಕಿಯಾ ಸಿಬುಲ್‌ಸ್ಕಾಳನ್ನು ಸ್ನೇಹಿತರಲ್ಲಿ ಇಳಿಸಿ, ಯುದ್ಧ ಮುಗಿಯುವವರೆಗೂ ಅವಳನ್ನು ಸರಿಯಾಗಿ ನೋಡಿಕೊಳ್ಳುವಂತೆ ತಿಳಿಸಿ, ಜರ್ಮನ್ನರ ವಿರುದ್ಧ ಭೂಗತವಾಗಿದ್ದುಕೊಂಡು ಹೋರಾಡುತ್ತಿದ್ದ ಪ್ರತಿರೋಧ ಪಡೆಯನ್ನು ಸೇರಿಕೊಂಡ.

ಅನಂತರ ಅವರಿಬ್ಬರಿಗೂ ಸಂಪರ್ಕ ತಪ್ಪಿಹೋಯಿತು. ಯಾರಾದರೂ ಜೀವಂತವಾಗಿರುವುರೋ ಎನ್ನುವುದು ಕೂಡ ತಿಳಿಯಲಿಲ್ಲ. ಯುದ್ಧ ಮುಗಿಯಿತು. ಸಿಬುಲ್‌ಸ್ಕಾ ಅಮೆರಿಕದಲ್ಲಿ ಆಶ್ರಯಪಡೆದಳು. ದಶಕಗಳ ಕಾಲ ಬೀಲೇಕಿಯಾನ ಸುದ್ದಿಯೇನೂ ಇಲ್ಲದ್ದರಿಂದ ಅವನು ತೀರಿಕೊಂಡಿದ್ದಾನೆಂದೇ ಭಾವಿಸಿ ಇನ್ನೊಬ್ಬನನ್ನು ಮದುವೆಯಾಗಿ ಅಮೆರಿಕದ ಬ್ರೂಕ್‌ಲಿನ್ನಿನಲ್ಲಿ ತುಂಬು ಸಂಸಾರ ನಡೆಸಿದಳು. ಬೀಲೇಕಿಯಾ ಇನ್ನೂ ಸತ್ತಿಲ್ಲ, ಜೀವಂತವಾಗಿದ್ದಾನೆ ಎನ್ನುವುದು ಆಕೆಗೆ ೧೯೮೩ರಲ್ಲಿ ತಿಳಿದಾಗ ಹಿಡಿಸಲಾರದಷ್ಟು ಸಂತೋಷ. ಆ ವೇಳೆಗಾಗಲೇ ಸಿಬುಲ್‌ಸ್ಕಾಳ ಗಂಡ ತೀರಿಹೋಗಿದ್ದ. ಹೆಚ್ಚು ಮನೆತನದ ಭಾರವೂ ಇರಲಿಲ್ಲ. ಹೀಗಾಗಿ ಆಕೆ ಬೀಲೇಕಿಯಾನ್ನು ಕಾಣಲು ಕ್ರಾಕೋವ್‌ಗೆ ಹೊರಟುಹೋದಳು.

ಸಿಬುಲ್‌ಸ್ಕಾಳ ಬಗೆಗೆ ಏನೇನೋ ಸುದ್ದಿಯಿಲ್ಲದ್ದರಿಂದ ಬೀಲೇಕಿಯಾ ಆಕೆ ಸತ್ತಿದ್ದಾಳೆಂದೇ ಭಾವಿಸಿ ಮದುವೆಯಾಗಿದ್ದ. ಆಕೆ ಇನ್ನೂ ಜೀವಂತವಾಗಿದ್ದದ್ದು ಅವನಿಗೂ ಸಂತೋಷವನ್ನೇ ತಂದಿತ್ತು.

ಅಂತೂ ದಶಕಗಳ ನಂತರ ಪ್ರೇಮಿಗಳಿಬ್ಬರೂ ಒಬ್ಬರನ್ನೊಬ್ಬರು ಸಂಧಿಸಿದರು. ಈ ವಿಶೇಷ ಸಂದರ್ಭಕ್ಕಾಗಿ ಸಿಬುಲ್‌ಸ್ಕಾ ೩೯ ಗುಲಾಬಿಗಳ ಗುಚ್ಛವೊಂದನ್ನು ಅಮೆರಿಕದಿಂದ ತಂದಿದ್ದಳು. ಹೌದು, ಅವರು ಶ್ರಮಶಿಬಿರದಿಂದ ಪಾರಾಗಿ ಅಂದಿಗೆ ೩೯ ವರ್ಷಗಳೇ ಸಂದಿದ್ದವು.

ಳಲು ಕಾರಣರಾರು? ಎಂಬುದನ್ನು ಆ ಮಹಿಳೆಯರು ಹೇಳದಾಗ ೧೯೪೫ರ ಜನವರಿ ೬ರಂದು ಉಳಿದ ಶಿಬಿರವಾಸಿಗಳ ಸಮ್ಮುಖದಲ್ಲೆ ಅವರನ್ನು ಗಲ್ಲಿಗೇರಿಸಲಾಯಿತು.

ಮಳೆಗಾಲ ಮುಗಿದು ಚಳಿಗಾಲ ಪ್ರಾರಂಭವಾಗಿತ್ತು. ಮೊದಲಿನಹಾಗೆ 'ಮಾನವ ಸರಕು' ಬರುತ್ತಿರಲಿಲ್ಲ. ಎಂದೂ ಆರದ ಆಷ್‌ವಿಟ್ಸ್ ಚಿತಾಗಾರಗಳು ತಣ್ಣಗಾಗತೊಡಗಿದ್ದವು. ಬರ್ಲಿನ್ನಿನಿಂದ ಆಜ್ಞೆಗಳು ಬರುವುದೂ ಕಡಿಮೆಯಾಗಿತ್ತು.

ಒಮ್ಮಿಂದೊಮ್ಮೆಲೆ ಪರಿಸ್ಥಿತಿ ಬದಲಾಯಿತು. ಗ್ಯಾಸ್ ಚೇಂಬರಿಗೆ ಕಳಿಸಲ್ಪಡುತ್ತಿರುವವರ ಸಂಖ್ಯೆ ಕ್ರಮೇಣ ಕಡಿಮೆಯಾಗುತ್ತ ನಿಂತೇಹೋಯಿತು. ಈಗ ಗಾಡಿ ರಿವರ್ಸ್ ಗೇರಿನಲ್ಲಿ ನಡೆಯುತ್ತಿರುವ ಅನುಭವ. ಎಲ್ಲೆಡೆಯೂ ಶುದ್ಧೀಕರಣದ ಕೆಲಸ. ಶಿಬಿರವಾಸಿಗಳು ಹಿಂದೆ ಇಲ್ಲಿ ಏನೂ ನಡೆದೇ ಇಲ್ಲ ಅನ್ನಿಸುವ ಹಾಗೆ ಎಲ್ಲವನ್ನೂ ಸ್ವಚ್ಛಗೊಳಿಸಬೇಕಾಗಿತ್ತು. ಚಿತಾಗಾರದ ಚಿಮಣಿಗಳ ಒಳಗೆ ಒಂದೂವರೆ ಅಡಿಯಷ್ಟು ದಪ್ಪವಾಗಿ ಮೆತ್ತಿಕೊಂಡ ಮಾನವ ನೆಣವನ್ನು ಅತಿ ಶೀಘ್ರವಾಗಿ ಶಿಬಿರವಾಸಿಗಳು ತೆಗೆದುಹಾಕಬೇಕಾಗಿತ್ತು. ಇದೆಲ್ಲ ಜರ್ಮನ್ ಸೈನ್ಯ ಸೋಲುತ್ತಿರುವ ಲಕ್ಷಣವೆನ್ನುವುದರಿಂದಾಗಿ ಶಿಬಿರವಾಸಿಗಳಿಗೆ ಸಂತೋಷವಾದರೂ ಜರ್ಮನ್ನರು ಅಲ್ಲಿಂದ ಕಾಲುಕಿತ್ತುವ ಮೊದಲು ಈ ದುರಂತಕ್ಕೆ ಸಾಕ್ಷಿಗಳಾದ ತಮ್ಮನ್ನು ಎಲ್ಲಿ ಮುಗಿಸಿಬಿಡುತ್ತಾರೋ ಎಂಬ ಆತಂಕ ಸದಾ ಕಾಡುತ್ತಿತ್ತು.

ಇತ್ತ ಸೋವಿಯತ್ ಸೈನ್ಯ ಮುನ್ನುಗ್ಗುತ್ತಿತ್ತು. ೧೯೪೫ರ ಜನವರಿ ಹನ್ನೆರಡರಂದು ಅಪ್ಪರ್ ಸೈಲೇಶಿಯಾ ರಶಿಯದ ಕೈವಶವಾಯಿತು. ಇನ್ನು ಆಷ್‌ವಿಟ್ಸ್‌ನ ಸರದಿ. ಜರ್ಮನ್ನರಿಗೂ ತಾವು ಅಲ್ಲಿಂದ ಕಾಲ್ದೆಗೆಯುವುದು ಒಳ್ಳೆಯದೆನಿಸಿರಬೇಕು. ಆದರೆ ಇಂಥಾ ಅಮೂಲ್ಯವಾದ 'ಮಾನವ ಸರಕ'ನ್ನು ಹಾಗೆಯೆ ಕಳೆದುಕೊಳ್ಳುವುದು ಹೇಗೆ? ಬದಲು ಜರ್ಮನಿಯಲ್ಲಿ ಅವರನ್ನು ದುಡಿಸಿಕೊಳ್ಳುವುದು ಒಳ್ಳೆಯದಲ್ಲವೆ? ಎಂಬ ವಿಚಾರ ನಾಝೀ ಸರಕಾರಕ್ಕೆ ಬಂದಿರಬೇಕು. ಜನವರಿ ೧೭ರಂದು ಆಷ್‌ವಿಟ್ಸ್‌ನ ಶಿಬಿರವಾಸಿಗಳನ್ನೆಲ್ಲ ಜರ್ಮನಿಗೆ ಸಾಗಿಸಲು ನಿರ್ಧರಿಸಿದರು.

ಜನವರಿ ಹದಿನೆಂಟರಂದು ಶಿಬಿರವಾಸಿಗಳನ್ನೆಲ್ಲ ಸಾವಿರ ಜನರ ಗುಂಪುಗಳಾಗಿ ವಿಂಗಡಿಸಿ ಸಾಲಾಗಿ ನಿಲ್ಲಿಸಲಾಯಿತು. ಅನಂತರ ಯಾತ್ರೆಯ ಪ್ರಾರಂಭ. ಅನೇಕ ಜನ ಎಷ್ಟೋ ದಿನಗಳಿಂದ ಹೊಟ್ಟೆಗೆ ಏನೂ ತಿಂದಿರಲಿಲ್ಲ. ಕೆಲವರಿಗೆ ಕಟ್ಟಿಗೆಯ ಪಾದರಕ್ಷೆಗಳಿದ್ದರೆ ಅನೇಕರಿಗೆ ಅದೂ ಇರಲಿಲ್ಲ. ಕೆಳಗೆ ರಕ್ತವನ್ನು ಮಂಜುಗಟ್ಟಿಸುವಷ್ಟು ಚಳಿ. ಕೆಲವರು ತಮ್ಮ ಬಟ್ಟೆಯನ್ನೇ ಹರಿದು ಕಾಲಿಗೆ ಕಟ್ಟಿ ಪಾದರಕ್ಷೆಯನ್ನಾಗಿ ಮಾಡಿಕೊಂಡರು. ಯಾತ್ರೆ ಪ್ರಾರಂಭವಾಯಿತು. ಒಂದು ಕಾಲಕ್ಕೆ ಅದು ತೀರಾ ಸುಳ್ಳು ಎಂದು ಗೊತ್ತಿದ್ದರೂ ನೀರಿನಲ್ಲಿ ಮುಳುಗುವವನಿಗೆ ಕಡ್ಡಿಯೇ ಆಸರೆಯಾದಂತೆ ಆಧಾರವಾಗಿದ್ದ 'ಆರ್‌ಬೈತ್ ಮಾಕ್ತ್ ಫ್ರೈ' (ಕೆಲಸದಿಂದಲೇ ಮುಕ್ತಿ ಸಾಧ್ಯ) ಎಂಬ ಬರಹವನ್ನು ನೋಡುತ್ತಲೇ ಅವರು ಸಾಗಬೇಕಾಗಿತ್ತು.

ಎಷ್ಟೋ ಜನರಿಗೆ ಸರಿಯಾಗಿ ನಡೆಯುವಷ್ಟು ತ್ರಾಣವೂ ಇರಲಿಲ್ಲ. ಆದರೆ ಎಲ್ಲರೊಂದಿಗೆ ನಡೆಯದೆ ನಿರ್ವಾಹವೇ ಇರಲಿಲ್ಲ. ಹಿಂದೆ ಉಳಿದವರನ್ನು ಗುಂಡಿಟ್ಟು ಕೊಲ್ಲಲಾಗುತ್ತಿತ್ತು. 'ಅನಾಥೋ ದೇವ ರಕ್ಷಿತಃ' ಎಂಬ ಮಾತು ಸುಳ್ಳಲ್ಲ. ದಾರಿಯಲ್ಲಿ ವಿಲ್‌ಶ್ಲಿಗ್ ಎಂಬಾತನ ಶೂಲೇಸ್ ಕಿತ್ತುಹೋಯಿತು. ಅದಿಲ್ಲದೆ ವೇಗವಾಗಿ ನಡೆಯಲು ಸಾಧ್ಯವಿರಲಿಲ್ಲ. ಹಿಂದೆಬಿದ್ದರೆ ಗುಂಡೇಟು ಖಂಡಿತ. ಇಂಥಾ ವೇಳೆಯಲ್ಲಿ ಮಂಜಿನಲ್ಲೆ ಒಂದು ಬಳ್ಳಿ ಅವನ ಕಣ್ಣಿಗೆ ಬಿತ್ತು. ಕೂಡಲೆ ಆತ ಬಳ್ಳಿಯನ್ನು ಕಿತ್ತು ಶೂಲೇಸ್ ಆಗಿ ಮಾಡಿಕೊಂಡ.

ಇಂಥಾ ವಿಕಟ ಸನ್ನಿವೇಶದಲ್ಲೂ ಲೂಯಿ ಝುಕ್ಸ್‌ನಂತಹ ಧೈರ್ಯಶಾಲಿಗಳೂ ಇದ್ದರೆನ್ನುವುದು ಸೋಜಿಗದ ವಿಷಯ. ೧೯೪೧ರಿಂದಲೇ ಆತ ಶಿಬಿರದಲ್ಲಿದ್ದು ಕಲ್ಲಿದ್ದಲು ಗಣಿಯಲ್ಲಿ ದುಡಿಯುತ್ತಿದ್ದ. ರಶಿಯನ್ ಸೈನ್ಯ ಹತ್ತಿರವಾಗುತ್ತಿದ್ದುದು ಅವನಿಗೂ ಗೊತ್ತಿತ್ತೆಂದು ಕಾಣುತ್ತದೆ. ಒಂದು ದಿನ ಇನ್ನು ಮೇಲೆ ತಾನು ಕೆಲಸ ಮಾಡುವುದೇ ಇಲ್ಲವೆಂದು ಪಟ್ಟುಹಿಡಿದ. ಸಾಮಾನ್ಯ ಪರಿಸ್ಥಿತಿಯಲ್ಲಾಗಿದ್ದರೆ ಆತ ಹೀಗೆ ಅಂದಿದ್ದೇ ತಡ, ತಲೆಗೆ ಗುಂಡೇಟು ಬೀಳುತ್ತಿತ್ತು. ಆದರೆ ಆ ಸ್ಥೈರ್ಯ ಅವನ ಮೇಲಧಿಕಾರಿಗಳಿಗೆ ಈಗ ಉಳಿಧಿರಲಿಲ್ಲ. ಬುದಿ

ಕಲಿಸಲು ಅವನನ್ನು ಬೇರೆ ಗಣಿಗೆ ಸಾಗಿಸಿದರು. ಅಲ್ಲಿ ಆತ ಒಂದಿಬ್ಬರು ಸ್ನೇಹಿತರನ್ನು ದೊರಕಿಸಿಕೊಂಡು, ಕಲ್ಲಿದ್ದಲಿಯ ರಾಶಿಯ ಅಡಿಯಲ್ಲಿ ಅವಿತು, ಸಮಯ ಸಾಧಿಸಿ ಅವರೊಡನೆ ಪಾರಾಗಿ ಲೋಡ್ಸ್ ಪಟ್ಟಣದತ್ತ ನಡೆಯತೊಡಗಿದ.

ಸ್ವಲ್ಪ ದೂರ ನಡೆಯುವಷ್ಟರಲ್ಲೆ ಎದುರಿಗೆ ರಶಿಯನ್ ಸೈನಿಕರು ಬರುತ್ತಿರುವುದು ಕಾಣಿಸಿತು. ಹೇಗೂ ಇವರು ಜರ್ಮನ್ನರಲ್ಲ ತಾನೆ? ತಮ್ಮಷ್ಟಕ್ಕೆ ತಾವು ಹೋಗುತ್ತಾರೆ ಅಂದುಕೊಂಡ. ಆದರೆ ಹಾಗೆ ಅಂದುಕೊಂಡದ್ದೇ ತಪ್ಪಾಗಿತ್ತು. ಅವರು ಈ ದಾರಿ ಹೋಕರನ್ನು ನಿಲ್ಲಿಸಿ, "ಯಾರು ನೀವು? ಎಲ್ಲಿಗೆ ಹೊರಟಿದ್ದೀರಿ? ಒಳ್ಳೆಯ ಮಾತಿನಿಂದ ಹೇಳುತ್ತೇವೆ, ನಿಮ್ಮ ವಾಚ್ ಕೊಡಿ. ಇಲ್ಲವಾದರೆ ಪರಿಸ್ಥಿತಿ ನೆಟ್ಟಗಾಗಲಿಕ್ಕಿಲ್ಲ" ಎಂದು ಗದರಿಸಿದರು. "ನಮ್ಮಲ್ಲಿ ಎಲ್ಲಿಂದ ವಾಚ್ ಬಂದೀತು? ನಾವು ಈಗತಾನೆ ಆಷ್‌ವಿಟ್ಸ್‌ನಿಂದ ಬರುತ್ತಿದ್ದೇವೆ," ಅಂದ ಅವರಲ್ಲೊಬ್ಬ. "ಹೀಗೋ? ಹಾಗಾದರೆ ನೀವೆಲ್ಲ ಯಹೂದ್ಯರೆಂದಾಯಿತು. ಇಷ್ಟಕ್ಕೂ ಯಹೂದ್ಯರನ್ನು ಯಾರು ಇಷ್ಟಪಡುತ್ತಾರೆ? ರಶಿಯನ್ನರೂ ಇಷ್ಟಪಡುವುದಿಲ್ಲ, ಜರ್ಮನ್ನರೂ ಇಷ್ಟಪಡುವು



# ಗುಂಡೇಟಾಗಿ

ಬೆನ್ನಟ್ಟಿದ ದುರ್ದೈವ ಕೆಲವರನ್ನು ಬಿಡುವುದೇ ಇಲ್ಲವೆನ್ನುವುದಕ್ಕೆ ನಿಕೊಲಾಯ್ ಪೆಸರೇವ್ ಒಳ್ಳೇ ಉದಾಹರಣೆ. ೧೯೪೧ರಲ್ಲಿ ಜರ್ಮನ್ನರು ೬೦೦ ಸೋವಿಯತ್ ಸೈನಿಕರನ್ನೂ ೨೫೦ ಪೋಲಿಷ್ ಸೈನಿಕರನ್ನೂ ಆಷ್‌ವಿತ್ಸ್‌ನ ಗ್ಯಾಸ್ ಚೇಂಬರಿಗೆ ಸಾಗಿಸಿದ ನಂತರ ಉಳಿದ ಸೈನಿಕರನ್ನು ರೈಲ್ವೆಗಳಲ್ಲಿ ಕೆಲಸ ಮಾಡಲು ಕಳಿಸಿದರು. ಅಂಥವರಲ್ಲಿ ಪೆಸರೇವ್‌ಗೂ ಒಬ್ಬ.

ಟ್ರೈನುಗಳಲ್ಲಿ ತುಂಬಿ ಬರುತ್ತಿದ್ದ ಉಸುಕನ್ನು ಇಳಿಸಿಕೊಳ್ಳುವುದೇ ಆತನ ಕೆಲಸ. ಕೆಲಸ ತುಂಬಾ ಶ್ರಮದಾಯಕವಾಗಿತ್ತು. ದುಡಿತಕ್ಕೆ ತಕ್ಕಂತೆ ತಿನ್ನಲು ಸಿಗುತ್ತಿರಲಿಲ್ಲ. ಒಂದು ದಿನ ಹೀಗೆಯೇ ಉಸುಕನ್ನು ಇಳಿಸಿಕೊಳ್ಳುತ್ತಿದ್ದಾಗ ಒಂದಿಷ್ಟು ಬ್ರೆಡ್ಡನ್ನೂ ಬೇಯಿಸಿದ ಬಟಾಟೆಯನ್ನೂ ನಿಕೋಲಾಯ್ ಕಂಡ. ಇವನ ಸ್ಥಿತಿಯನ್ನು ನೋಡಲಾಗದೆ ಕ್ವಿಕ್ಲಿಕ್ಕಿ ಎಂಬ ಪೋಲಿಷ್ ಸಹಕಾರ್ಮಿಕ ಆಹಾರವನ್ನು ಅಲ್ಲಿರಿಸಿದ್ದನೆನ್ನುವುದು ನಂತರ ತಿಳಿದುಬಂತು.

ನಿಕೋಲಾಯ್‌ಗೂ ಕ್ವಿಕ್ಲಿಕ್ಕಿಗೂ ಸ್ನೇಹ ಶುರುವಾದದ್ದು ಹೀಗೆ. "ನೀವು ರಶಿಯನ್ನರು ಆದಷ್ಟು ಬೇಗ ಇಲ್ಲಿಂದ ಪಾರಾಗುವುದು ಒಳ್ಳೆಯದು. ಇಲ್ಲವಾದರೆ ಸಾವು ಎನ್ನುವುದು ಕಟ್ಟಿಟ್ಟದ್ದು" ಎಂದ ಆತ ಒಂದು ದಿನ.

ಅಲ್ಲಿನ ಸ್ಥಿತಿಯನ್ನು ನೋಡಿದ ಈತನಿಗೂ ಕ್ವಿಕ್ಲಿಕ್ಕಿ ಹೇಳಿದ್ದರಲ್ಲಿ ಸತ್ಯಾಂಶ ಇದೆ ಅನ್ನಿಸದಿರಲಿಲ್ಲ. ಪೆಸರೇವ್ ಉಳಿದ ರಶಿಯನ್ ಸೈನಿಕರೊಡನೆ ಗುಟ್ಟಾಗಿ ಸಭೆ ಸೇರಿ ನಿಶ್ಚಿತ ದಿನದಂದು ಒಮ್ಮೆಲೆ ಬಂಡೆದ್ದು ಅಲ್ಲಿಂದ ಪಾರಾಗುವುದೆಂದು ನಿಶ್ಚಯಿಸಿದ.

ಆ ದಿನ ಬಂದೇಬಿಟ್ಟಿತು. ಎಲ್ಲೆಲ್ಲೂ ಒಮ್ಮೆಲೆ ತುಮುಲ. ಕೆಲವರು ಮಾತೃಭೂಮಿಯ ಬಗೆಗಿನ ಘೋಷಣೆಗಳನ್ನು ಕೂಗುತ್ತಾ ಓಡಿಹೋದರೆ ಹೆಚ್ಚು ಧೈರ್ಯಶಾಲಿಗಳಾದವರು ಈ ಯುದ್ಧ ಬಂದಿಗಳ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ಜರ್ಮನ್ ಸೈನಿಕರ ಮೇಲೆ ಎರಿಹೋದರು. ಪೆಸರೇವ್ ಜೀವದ ಹಂಗುತೊರೆದು ಸನಿಹದಲ್ಲೇ ಇದ್ದ ಬಟಾಟೆಯ ಹೊಲದಲ್ಲಿ ಓಡತೊಡಗಿದ. ಹಿಂದಿನಿಂದ ಜರ್ಮನ್ ಸೈನಿಕರು ಬೆನ್ನುಹತ್ತಿದ್ದರು. ಅವರು ಹಾರಿಸಿದ ಗುಂಡುಗಳು ಅಕ್ಕಪಕ್ಕದಲ್ಲಿ ಬಂದು ಬೀಳುತ್ತಿದ್ದವು. ಅಷ್ಟರಲ್ಲಿ ಪೆಸರೇವನ ಪಕ್ಕದಲ್ಲೇ ಓಡುತ್ತಿದ್ದ ಇನ್ನೊಬ್ಬ ರಶಿಯನ್ ಸೈನಿಕ ಜರ್ಮನ್ನರ ಗುಂಡಿಗೆ ಬಲಿಯಾದ.

ಅವನನ್ನು ರಕ್ಷಿಸಲು ಯತ್ನಿಸುವುದಿರಲಿ, ನೋಡುವಷ್ಟೂ ವ್ಯವಧಾನ ಪೆಸರೇವನಿಗಿರಲಿಲ್ಲ. ಆತ ಓಡಿಯೇ ಓಡಿದ. ಪೊದೆಗಳಿಗೆ ಬಟ್ಟೆ ಸಿಕ್ಕು ಹರಿದು ಚಿಂದಿಯಾದರೂ ಓಡಿದ. ಮುಳ್ಳುಗಳು ತರಚಿ ಮೈಯಿಂದ ರಕ್ತಸುರಿಯತೊಡಗಿತು. ರಕ್ತವನ್ನು ಒರೆಸಿಕೊಳ್ಳುವಷ್ಟು ಸಮಯವೂ ಇಲ್ಲದ್ದರಿಂದ ಅದೇ ಸ್ಥಿತಿಯಲ್ಲಿ ಓಡಿದ. ಜರ್ಮನ್ನರ ಗುಂಡುಗಳಿಂದ ಪಾರಾಗುವುದರ ಹೊರತು ಬೇರೆ ಯಾವ ವಿಚಾರವೂ ಅವನ ತಲೆಯಲ್ಲಿ ಬರಲಿಲ್ಲ.

ಎದುರಿಗೆ ಒಂದು ರೈಲು ಮಾರ್ಗ. ಅದನ್ನು ದಾಟಿ ಪಾರಾಗಬೇಕೆನ್ನುವಷ್ಟರಲ್ಲಿ ಹಿಂದೆ ಇನ್ನೂ ಯಾರಾದರೂ ಇದ್ದಾರೆಯೆ? ಎಂದು ನೋಡಬೇಕೆನಿಸಿತು. ಯಾವ ಜರ್ಮನ್ ಸೈನಿಕನೂ ಕಂಡುಬರಲಿಲ್ಲ. ಅಷ್ಟರಲ್ಲೆ ಟ್ರೈನು ಬರುತ್ತಿರುವ ಸದ್ದು. ಟ್ರೈನು ದಾಟುವವರೆಗಾದರೂ ಒಂದಿಷ್ಟು ದಣಿವಾರಿಸಿಕೊಳ್ಳುವಾ ಎಂದು ಯೋಚಿಸಿದ.

# ಬೆನ್ನಟ್ಟಿದ ದುರ್ದೈವ

ಗೂಡ್ಸ್ ಟ್ರೈನು ಬಂತು. ಸಾವಕಾಶವಾಗಿ ಸಾಗುತ್ತಿದ್ದುದರಿಂದ ಪೆಸರೇವ್ ಒಂದು ತೆರೆದ ಡಬ್ಬಿಗೆ ಹಾರಿದ. ಅನಂತರ ದೂರದ ಸ್ಟೇಶನ್ನಿನಲ್ಲಿ ಇಳಿದು ಶಾಲೆಗೆ ಹೋಗುತ್ತಿದ್ದ ಪೋಲಂಡಿನ ಮಕ್ಕಳಿಂದ ತಿಂಡಿಯನ್ನು ಪಡೆದ. ಇವನ ಸ್ಥಿತಿಯನ್ನು ನೋಡಲಾರದೆ ಕೆಲವರು ಬಟ್ಟೆಗಳನ್ನು ಕೊಟ್ಟರು. ಅವನ್ನು ಹಾಕಿಕೊಂಡು ಕ್ರಾಕೋವ್‌ನತ್ತ ಹೊರಟ ಗಾಡಿಯನ್ನೇರಿದ.

ಯುದ್ಧದ ಬಂದಿಗಳಿಗೆಲ್ಲ ನಂಬರು ಕೊಟ್ಟು ಅದು ಎದ್ದು ಕಾಣುವ ಹಾಗೆ ಹಚ್ಚೆ ಚುಚ್ಚುವುದು ನಾತ್ಸಿಗಳ ನಿಯಮ. ಹಿಂದಿನ ಸಲ ಪಾರಾಗಿ ಹೋಗುವುದಕ್ಕಿಂತ ಮೊದಲು ಇವನ ಹಾಗೆಯೆ ಬಂಧಿತನಾದ ಪೋಲಿಷ್ ಸೈನಿಕನೊಬ್ಬ ಈ ಅಂಕಿಗಳನ್ನು ಒಂದಕ್ಕೊಂದು ಜೋಡಿಸಿ ಅದಕ್ಕೊಂದು ಗರುಡದ ರೂಪ ಕೊಟ್ಟಿದ್ದ. ಗರುಡ ಹೇಗೂ ನಾತ್ಸೀ ಸರಕಾರದ ಲಾಂಛನ ತಾನೆ? ಒಂದು ರಾತ್ರಿ ಚಳಿ ವಿಪರೀತವಾದಾಗ ಪೆಸರೇವ್ ಮಾರ್ಗಮಧ್ಯದಲ್ಲಿ ಒಂದೆಡೆ ಇಳಿದು ಪ್ರಯಾಣಿಕರ ಕೋಣೆಯಲ್ಲಿ ರಕ್ಷಣೆ ಪಡೆದ.

ಜರ್ಮನ್ನರ ಕರಾಳ ಹಸ್ತ ಎಲ್ಲೆಡೆಗೂ ಚಾಚಿತ್ತು. ಇಂಥಾ ಚಿಕ್ಕ ಸ್ಟೇಶನ್ನಿನಲ್ಲಿ ಜರ್ಮನ್ನರು ಬರುವುದಿಲ್ಲವೆಂದು ಪೆಸರೇವ್ ಭಾವಿಸಿದ್ದು ತಪ್ಪಾಗಿತ್ತು. ನಿಶ್ಶಬ್ದ ರಾತ್ರಿಯಲ್ಲಿ ಈತ ಮೈಮುದುಡಿಕೊಂಡು ನಿದ್ರಿಸುತ್ತಿದ್ದಾಗ ಅಲ್ಲಿಯೆ ಗಸ್ತು ತಿರುಗುತ್ತಿದ್ದ ಜರ್ಮನ್ ಸೈನಿಕ ಅವನನ್ನು ಎಬ್ಬಿಸಿ, "ಏ ಯಾರೋ ನೀನು? ಇಲ್ಲೇನು ಕೆಲಸ?" ಎಂದು ಕೇಳಿದ.

ಒಂದರಕ್ಷಣ ಪೆಸರೇವನಿಗೆ ಜೀವವೇ ಹೋದಂತಾಯಿತು. ಆದರೂ ಸಾವರಿಸಿಕೊಂಡು, "ನಾನು ಪೋಲಿಷ್ ಸೈನಿಕರನ್ನು ಶ್ರಮಶಿಬಿರಕ್ಕೆ ಸಾಗಿಸುತ್ತಿದ್ದಾಗ ಅವರು ಬಂಡೆದ್ದು ತನ್ನನ್ನು ರೈಲಿನಿಂದ ನೂಕಿದ್ದಾಗಿಯೂ ಕೆಳಗೆ ಬಿದ್ದು ಪೆಟ್ಟಾದರೂ ಹೇಗು ಹೇಗೋ ಸ್ಟೇಶನ್ನಿಗೆ ಬಂದು ಇನ್ನೊಂದು ಗಾಡಿಯನ್ನೇರಲು ಹೊರಟಿರುವುದಾಗಿಯೂ ತಿಳಿಸಿ, ತಾನು ನಾತ್ಸಿಗಳ ಅಭಿಮಾನಿಯೆನ್ನುವುದಕ್ಕೆ ಕುರುಹಾಗಿ ಗರುಡದ ಲಾಂಛನವನ್ನು ತೋರಿಸಿದ. ಪೆಸರೇವನನ್ನು ಶ್ರಮಶಿಬಿರಕ್ಕೆ ಕಳಿಸಿ ಕೈದಿಗಳ ಉಸ್ತುವಾರಿ ನೋಡಿಕೊಳ್ಳಲು ನಿಯಮಿಸಲಾಯಿತು.

ಯುದ್ಧ ಮುಗಿಯಿತು. ಯುದ್ಧದಲ್ಲಿ ಬಂದಿಗಳಾಗಿದ್ದವರನ್ನು ಸ್ಟಾಲಿನ್ ಸಂಶಯದ ದೃಷ್ಟಿಯಿಂದಲೇ ನೋಡುತ್ತಿದ್ದ. ಅಂಥದರಲ್ಲಿ ಯುದ್ಧಬಂದಿಗಳ ಮೇಲೆ ಉಸ್ತುವಾರಿ ನಡೆಸುತ್ತಿದ್ದವರನ್ನು ಹಾಗೆಯೆ ಬಿಡಲಾದೀತೆ? ಈತ ರಶಿಯನ್ನನಾಗಿ, ಜರ್ಮನ್ನರ ಮೇಲೆ ಯುದ್ಧಕ್ಕೆ ಹೋದರೂ ಕೈದಿಗಳ ಶಿಬಿರದಲ್ಲಿ ಜರ್ಮನ್ನರು ಇವನನ್ನು ತಮ್ಮತ್ತ ತಿರುಗಿಸಿಕೊಂಡಿದ್ದರು; ಆದ್ದರಿಂದಲೇ ಅವನಿಗೆ ಶ್ರಮ ಶಿಬಿರದಲ್ಲಿ ಇತರ ಕೈದಿಗಳ ಮೇಲೆ ಉಸ್ತುವಾರಿ ನಡೆಸುವ ಅಧಿಕಾರವನ್ನು ಅವರು ಕೊಟ್ಟಿದ್ದರು ಎಂದು ರಶಿಯನ್ ಸೈನ್ಯಾಧಿಕಾರಿಗಳು ಭಾವಿಸಿದರು. ಅವರ ಭಾವನೆಯನ್ನು ಪುಷ್ಟೀಕರಿಸಲು ಹೇಗೂ ಪೆಸರೇವನ ಮೈಮೇಲೆ ನಾತ್ಸೀ ಸರಕಾರದ ಲಾಂಛನ ಇದ್ದೇಇತ್ತಲ್ಲ!

ಹೀಗಾಗಿ ಸೈನಿಕನಾಗಿ ದೊರೆಯಬೇಕಾಗಿದ್ದ ಪೆನ್‌ಶನ್ ಆಗಲಿ ಯುದ್ಧದಲ್ಲಿ ಭಾಗವಹಿಸಿದ್ದರಿಂದ ದೊರೆಯಬೇಕಾದ ಇತರ ಸವಲತ್ತುಗಳಾಗಲಿ ಪೆಸರೇವನಿಗೆ ದೊರೆಯಲೇ ಇಲ್ಲ. ಈಗವನಿಗೆ ೭೬ರಷ್ಟು ವಯಸ್ಸು. ಬಡತನದಲ್ಲೆ ಜೀವಿಸುತ್ತಿದ್ದಾನೆ. ಯಾರಾದರೂ ಹಿಂದಿನದನ್ನು ಕೆದಕಿದರೆ, "ನನಗೆ ಬಂದಂಥ ಸ್ಥಿತಿ ಯಾರಿಗೂ ಬರಬಾರದು," ಎಂದು ನಿಟ್ಟುಸಿರುಬಿಡುತ್ತಾನೆ.

ದಿಲ್ಲ. ಪೋಲೆಂಡಿನವರೂ ಇಷ್ಟಪಡುವುದಿಲ್ಲ. ಹೋಗಲಿ, ಹಂಗೆರಿಯವರಾದರೂ ಇಷ್ಟಪಡುತ್ತಾರೇನು? ಅವರೂ "ಇಲ್ಲ" ಎನ್ನುತ್ತಾ ರೈಫಲ್ಲೆತ್ತಿದ. ಅಷ್ಟರಲ್ಲಿ ಸ್ವತಃ ಯಹೂದ್ಯನೇ ಆದ ರಶಿಯನ್ ಆಫೀಸರನೊಬ್ಬ ಇವರ ನೆರವಿಗೆ ಬಂದಿದ್ದರಿಂದ ಜೀವವುಳಿಯಿತು.

ಇತ್ತ ಆಷ್‌ವಿತ್ಸ್ ಶಿಬಿರವಾಸಿಗಳ ಯಾತ್ರೆ ಸಾವಕಾಶವಾಗಿ ಸಾಗುತ್ತಿತ್ತು. ಗಟ್ಟಿಯಾಗಿದ್ದವರು, ಅಷ್ಟಿಷ್ಟು ಧೈರ್ಯವಿದ್ದವರು ಜರ್ಮನ್ನರ ಕಣ್ಣುತಪ್ಪಿಸಿ ಪಾರಾಗುತ್ತಿದ್ದರು ಅಥವಾ ಪಾರಾಗುವ ಯತ್ನದಲ್ಲಿದ್ದಾಗ ಅವರ ಕಣ್ಣಿಗೆ ಬಿದ್ದು ಪ್ರಾಣ ಕಳೆದುಕೊಳ್ಳುತ್ತಿದ್ದರು. ನಡೆಯಲು ತ್ರಾಣವಿಲ್ಲದ ಕೆಲವರು ಅಲ್ಲಿಯೇ ಕುಸಿದುಬಿದ್ದು ಪ್ರಾಣಬಿಡುತ್ತಿದ್ದರು. ಇದಾವುದನ್ನೂ ಲಕ್ಷಿಸದೆ ಯಾತ್ರೆ ಹಾಗೆಯೇ ಸಾಗುತ್ತಿತ್ತು. ಅನೇಕರ ಪಾಲಿಗೆ ಅದು ಚರಮಯಾತ್ರೆಯೇ ಆಗಿತ್ತು.

ರಾತ್ರಿ ಮಾರ್ಗಮಧ್ಯದಲ್ಲೇ ವಿಶ್ರಾಂತಿ. ಅಲ್ಲಿಯೆ ಊಟ. ಆ ಊಟವಾದರೂ ಎಂಥದು? ಒಂದಿಷ್ಟು ನೀರಾದ ಸಾರು, ಒಂದೆರಡು ಬ್ರೆಡ್ಡಿನ ತುಣುಕು ಅಷ್ಟೆ. ಅದನ್ನು ಪಡೆಯಲು, ಸಾಧ್ಯವಾದರೆ ಒಂದೆರಡು ಹೆಚ್ಚು ತುಣುಕುಗಳನ್ನು ಪಡೆಯಲು ಅವರವರಲ್ಲ ಪೈಪೋಟಿ. ಹೀಗ ಹೆಚ್ಚು ಆಹಾರ ಪಡೆಯುವ ತರಾತುರಿಯಲ್ಲಿದ್ದಾಗ ಒಮ್ಮೆ ಸಾರಿನ ಪಾತ್ರೆ ಉರುಳಿಹೋಯಿತು. ಮೊದಲೆ



ಆಹಾರದ ಅಭಾವ. ಯಾತ್ರೆಯಲ್ಲಿದ್ದವರು ಹಿಮಗಟ್ಟಿದ ನೆಲದ ಮೇಲೆ ಬಿದ್ದ ಸಾರನ್ನೇ ನೆಕ್ಕಿ ಹಸಿವೆಯನ್ನು ನೀಗಿಸಿಕೊಳ್ಳಬೇಕಾಯಿತು.

ಅಂತೂ ಯಾತ್ರೆ ಒಂದು ಹಂತಕ್ಕೆ ಬಂತು. ಅಲ್ಲಿಂದ ಗೂಡ್ಸ್ ಟ್ರೈನುಗಳ ಮೂಲಕ ಜರ್ಮನಿಯತ್ತ ಪ್ರಯಾಣ. ಆಷ್‌ವಿತ್ಸ್‌ಗೆ ಬರುವಾಗ ಬೇಸಿಗೆಯ ಸಮಯ. ಮುಚ್ಚಿದ ಡಬ್ಬಿಗಳಲ್ಲಿ ಪಯಣಿಸಬೇಕಿತ್ತು. ಈಗ ಚಳಿಗಾಲ. ಹೊರಗೆ ಹಿಮ ಬೀಳುತ್ತಿತ್ತು. ಆದರೂ ತೆರೆದ ಡಬ್ಬಿಗಳಲ್ಲಿಯೇ ಪಯಣಿಸಬೇಕು. ವಿಧಿಯ ವೈಚಿತ್ರ್ಯವೆನ್ನುವುದು ಇದಕ್ಕೇ. ಟ್ರೈನುಗಳಲ್ಲಿ ಹಸುಗಳನ್ನು ತುಂಬುವಹಾಗೆ ಯಹೂದ್ಯರನ್ನು ತುಂಬಲಾಗಿತ್ತು. ಅವರು ಗಂಡಸರೇ ಇರಲಿ, ಹೆಂಗಸರೇ ಇರಲಿ, ಯಾರ ಮೇಲೂ ಮೈಮುಚ್ಚಿಕೊಳ್ಳುವಷ್ಟು ಬಟ್ಟೆಯಿರಲಿಲ್ಲ. ಎದ್ದುನಿಲ್ಲುವಷ್ಟು ಶಕ್ತಿಯೂ ಇರಲಿಲ್ಲ. ಸ್ಟೇಶನ್ ಬಂದಾಗ ಇವರ ದಯನೀಯ ಸ್ಥಿತಿಯನ್ನು ನೋಡಲಾಗದೆ ಎಷ್ಟೋ ಜನ ಹಳೆ ಬಟ್ಟೆಗಳನ್ನೋ ಬ್ರೆಡ್ಡಿನ ತುಂಡುಗಳನ್ನೋ ಎಸೆಯುತ್ತಿದ್ದರು. ಅವರು ಆತುರಾತುರವಾಗಿ ದೊಡ್ಡ ನಿಧಿಯೇ ಸಿಕ್ಕಂತೆ ಅವನ್ನೆತ್ತಿಕೊಳ್ಳುತ್ತಿದ್ದರು.

ಈ ವೇಳೆಗಾಗಲೆ ಸೋವಿಯತ್ ಸೇನೆ ಆಷ್‌ವಿತ್ಸ್‌ನಲ್ಲಿ ಬಂದಿಳಿದಿತ್ತು. ಎಲ್ಲ ಕಡೆ ನೀರವ ವಾತಾವರಣ. ಎಲ್ಲ ಕಡೆ ಹಾಳು ಸುರಿಯುತ್ತಿತ್ತು. ಯಹೂದ್ಯರಿಂದ ಕಿತ್ತುಕೊಂಡ ವಸ್ತುಗಳನ್ನೆಲ್ಲ



# ಆ ಐವತ್ತೆಂಟು ತಿಂಗಳುಗಳು

ಪ್ರಾರಂಭದಿಂದಲೂ ಅದೊಂದು ಮಾರಣಹೋಮವೆ. ಹಿಂಸೆಯೆ ಅಲ್ಲಿಯ ಮಂತ್ರ. ೧೯೪೪ ರ ಮಧ್ಯದ ಹೊತ್ತಿಗೆ ನರಮಾಂಸವನ್ನು ಸುಟ್ಟು ಆಕಾಶಕ್ಕೇರಿದ ಹೊಗೆ ಅಲ್ಲೆಲ್ಲ ದಟ್ಟೈಸಿತ್ತು. ಮೂಗು ತೆರೆದರೆ ಕೆಟ್ಟ ವಾಸನೆ. ಆಷ್‌ವಿತ್ಸ್‌ನಲ್ಲಿ ಕೊಲೆಗೆ ಹೊಸ ಹೊಸ ತಂತ್ರಗಳು ದಿನವೂ ಶೋಧಿಸಲ್ಪಡುತ್ತಿದ್ದವು.

## ಎಪ್ರಿಲ್ ೧೯೪೦

ಹೈನ್ರಿಕ್ ಹಿಮ್ಲರ್ 'ಆಷ್‌ವಿತ್ಸ್'ಅನ್ನು ಸ್ಥಾಪಿಸಲು ಆಜ್ಞೆ ವಿಧಿಸಿದ. ಎರಡು ತಿಂಗಳುಗಳ ನಂತರ ಮೊದಲ ಸಲ ೭೨೮ ಪೋಲಿಷ್ ರಾಜಕೀಯ ಕೈದಿಗಳನ್ನಿಲ್ಲಿ ರುಡಾಲ್ಫ್ ಹಾಸ್‌ನ ಸುಪರ್ದಿಗೆ ಒಪ್ಪಿಸಲಾಯಿತು. 'ಆಷ್‌ವಿತ್ಸ್' ಮೆಲ್ಲನೆ ಚಿಗುರಿ ಮರವಾಗಿ ಬೆಳೆಯತೊಡಗಿತು.

## ಅಕ್ಟೋಬರ್ ೧೯೪೧

ಯಹೂದ್ಯರನ್ನು ನಿರ್ಮೂಲಗೊಳಿಸಬೇಕೆಂಬ ಆದೇಶವನ್ನು ಪಾಲಿಸಲು ಸಿದ್ಧವಾಯಿತು. ಆಷ್‌ವಿತ್ಸ್. ಬರ್ಕ್‌ನಾ ಎಂಬಲ್ಲಿ ಹೊಸ ಚಿತಾಗಾರಗಳು, ನಿರೀಕ್ಷಣಾ ಗೋಪುರಗಳು ಮತ್ತು ವಿದ್ಯುತ್ ಪ್ರವಹಿತ ಮುಳ್ಳುತಂತಿಗಳು ತಲೆಯೆತ್ತಿ ನಿಂತವು. ಪಾರಾಗಬಯಸಿದ ಕೆಲವರು ಪಾರಾಗಲಾರದೆ ಈ ವಿದ್ಯುತ್ ಪ್ರವಹಿತ ತಂತಿಯನ್ನೇರಿ ಆತ್ಮಹತ್ಯೆ ಮಾಡಿಕೊಂಡರು.

## ಜುಲೈ ೧೯೪೨

ಹಾಲಂಡಿನ ಯಹೂದ್ಯರನ್ನೂ, ಯುರೋಪಿನ ಇನ್ನಿತರೆಡೆಗಳಿಂದ ತಂದವರನ್ನೂ ಸಾವಿರ ಸಾವಿರ ಸಂಖ್ಯೆಯಲ್ಲಿ ಆಷ್‌ವಿತ್ಸ್‌ನಲ್ಲಿ ತಂದೊಟ್ಟಲಾಯಿತು. ಮರಣವನ್ನೇ ನಿರೀಕ್ಷಿಸುತ್ತಿದ್ದ ಅನೇಕರಿಗೆ ಸಶ್ರಮ ದುಡಿಮೆ, ಅರೆಹೊಟ್ಟೆಯೂಟ ಹಾಗೂ ಹೊಡೆತ-ಬಡೆತಗಳೇ ನಿತ್ಯಸಿಕ್ಕುತ್ತಿದ್ದ ಪ್ರತಿಫಲ.

## ಮೇ ೧೯೪೩

ಜೋಸೆಫ್ ಮೆಂಗೇಲೇ ಈ ಶಿಬಿರದ ವೈದ್ಯನಾಗಿ ನಿಯುಕ್ತನಾದ. ಜಿಪ್ಸಿ ಕ್ಯಾಂಪ್‌ನಲ್ಲಿ ಆತ ತನ್ನ 'ಪ್ರಯೋಗ'ಗಳಿಗಾಗಿ ಮಕ್ಕಳು, ಕುಳ್ಳರು, ಅವಳಿಗಳನ್ನು ಪ್ರತ್ಯೇಕವಾಗಿರಿಸತೊಡಗಿದ. ಕೆಲವೆ ದಿನಗಳಲ್ಲಿ ಈತ 'ಮರಣ ದೇವತೆ' ಯಮನಂತೆ ಅಟ್ಟಹಾಸಗೈಯತೊಡಗಿದ. ಆತ ಯಾರೆಡೆ ಬೆರಳು ತೋರಿಸುತ್ತಾನೋ ಅವರ ಕಥೆ ಮುಗಿಯಿತೆಂದೇ ಅರ್ಥ.

## ಅಗಸ್ಟ್ ೧೯೪೪

ಮಿತ್ರ ರಾಷ್ಟ್ರಗಳು ಬಾಂಬ್‌ದಾಳಿ ಆರಂಭಿಸಿದವು. ಐ.ಜಿ. ಫಾರ್ಬೆನ್ ಕೈಗಾರಿಕಾ ಸಂಕಿರಣ ಬಾಂಬಿಗೆ ಆಹುತಿಯಾಯಿತು. ಆದರೆ ಆಷ್‌ವಿತ್ಸ್ ಶಿಬಿರ ಮಿತ್ರರಾಷ್ಟ್ರಗಳ ಲಕ್ಷ್ಯವಾಗಿರಲಿಲ್ಲ. ಎರಡು ತಿಂಗಳುಗಳ ನಂತರ ಒಬ್ಬ ಕೈದಿ ಬಂಡೆದ್ದು ಚಿತಾಗಾರವೊಂದನ್ನು ಧ್ವಂಸಗೊಳಿಸಿದ. ಇದರಿಂದ ಸತ್ತವರ ಸಂಖ್ಯೆ ಎಣಿಕೆಗೆ ಬಾರದಷ್ಟು.

## ಜನವರಿ ೧೯೪೫

ಸುಮಾರು ೫೮,೦೦೦ ಕೈದಿಗಳು ಮರಣೋನ್ಮುಖರಾಗಿ ಪಥಸಂಚಲನ ನಡೆಸತೊಡಗಿದರು.

ಅಲ್ಲಿನ ೩೫ ಉಗ್ರಾಣಗಳಲ್ಲಿ ಕೂಡಿಸಿಡಲಾಗಿದೆ ಯೆಂಬ ಗುಪ್ತಚಾರ ವರದಿ ರಶಿಯನ್ನರಿಗೆ ಬಂದಿತ್ತು. ಆದರೆ ೨೯ ಉಗ್ರಾಣಗಳಲ್ಲಿ ಏನೂ ಇರಲಿಲ್ಲ, ಜರ್ಮನ್ನರು ಅವುಗಳಲ್ಲಿದ್ದುದನ್ನೆಲ್ಲ ನಾಶ ಗೊಳಿಸಿಯೇ ಹಿಂದಿರುಗಿದ್ದರು. ಇನ್ನು ಆರು ಉಗ್ರಾಣಗಳಲ್ಲಿ ಯಹೂದ್ಯರಿಂದ ಕಿತ್ತುಕೊಂಡ ಸಾವಿರಾರು ಕನ್ನಡಕಗಳು, ಪಾತ್ರೆಪಗಡೆಗಳು, ಪಾದರಕ್ಷೆಗಳು. ಏಳು ಟನ್ನುಗಳಷ್ಟು ಕೂದಲು, ಹತ್ತು ಲಕ್ಷಕ್ಕೂ ಹೆಚ್ಚು ಸೂಟುಗಳು ಇನ್ನೂ ಏನೇನೋ. ಹತ್ತು ಲಕ್ಷಕ್ಕೂ ಹೆಚ್ಚು ಸೂಟುಗಳು! ಹೌದು. ಅವುಗಳನ್ನು ಧರಿಸಬೇಕಾದವರು, ಅದಕ್ಕಾಗಿ ತಾವು ದುಡಿದ ಹಣ ತೆತ್ತವರು, ಇತ್ತ ಮೇಲಿನಿಂದ ಬೀಳುವ ಹಿಮವನ್ನು ಅದು ಹೇಗೋ ಸಹಿಸಿಕೊಳ್ಳುತ್ತಾ ಬರಿಮೈಯಲ್ಲೆ ಟ್ರೇನಿನಲ್ಲಿ ಸಾಗುತ್ತಿದ್ದರು.

ಅಂತೂ ಯುದ್ಧ ಕೊನೆಗೊಂಡಿತು. ಯಹೂದ್ಯರ ಅಪರಿಮಿತ ಕಷ್ಟಗಳ ಪರಂಪರೆಗೂ ತೆರೆಬಿತ್ತು. ಜೀವಚ್ಛವಾದವರಲ್ಲಿ ಹೊಸ ಚೈತನ್ಯ ಮೂಡಿತು. ಮೊದಲಿನ ಹಾಗೆ ಅವರೆಲ್ಲ ಟೇಲರರೋ ಇಂಜಿನಿಯರರೋ ಡಾಕ್ಟರರೋ ಕಾರ್ಮಿಕರೋ ಆಗಲು ತಮ್ಮತಮ್ಮ ಸ್ಥಳಗಳಿಗೆ ಹೊರಟುಹೋದರು. ಅವರೀಗ ಹೊಸ ಜೀವನ ಪ್ರಾರಂಭಿಸಬೇಕಿತ್ತು. ಕೈ ಬರಿದಾಗಿತ್ತು. ಮನಸ್ಸು ಮಾತ್ರ ನಾರಕೀಯ ಅನು





ಭವಗಳಿಂದ ತುಂಬಿತ್ತು. ಅವರು ಆಷ್‌ವಿತ್ಸ್‌ನಿಂದ ಅಥವಾ ಅಂತಹ ಇನ್ನೂ ಅನೇಕ ಯಾತನಾಶಿಬಿರಗಳಿಂದ ಪಾರಾಗಿದ್ದರು ನಿಜ. ಆದರೆ ಅವರ ಮನಸ್ಸಿನ ಯಾತನೆ ಎಂದಾದರೂ ಕೊನೆಗೊಂಡೀತೆಂದು ಹೇಳುವಂತಿರಲಿಲ್ಲ. ಮಕ್ಕಳು ತಂದೆತಾಯಿಗಳನ್ನು ಅಗಲಿದ್ದವು. ಗಂಡಹೆಂಡತಿಯರು ಬೇರ್ಪಡಿಸಲ್ಪಟ್ಟಿದ್ದರು. ಒಂದೇ ತಾಯಿಯ ಹೊಟ್ಟೆಯಿಂದ ಹುಟ್ಟಿದ ಅಕ್ಕರೆಯ ಕಂದಮ್ಮಗಳೂ ಒಬ್ಬರಿಂದ ಒಬ್ಬರು ಅಗಲಿಸಲ್ಪಟ್ಟಿದ್ದರು. ಯಾರಾದರೂ ತಮ್ಮ ಜೀವಿತಾವಧಿಯಲ್ಲಿ ಒಬ್ಬರನ್ನೊಬ್ಬರು ಕಾಣುವೆವೆಂಬ ಭರವಸೆಯೂ ಇರಲಿಲ್ಲ. ಇಂತಹ ಪರಿಸ್ಥಿತಿಯಲ್ಲೆ ಅವರೆಲ್ಲ ಹೊಸ ಜೀವನವನ್ನು ಪ್ರಾರಂಭಿಸಬೇಕಿತ್ತು.

ಯಹೂದ್ಯರೆಲ್ಲ ಬೇರೆ ಬೇರೆ ದಿಕ್ಕುಗಳಿಗೆ ಚೆದುರಿಹೋದರು ನಿಜ. ಆದರೆ ಒಬ್ಬರಾದರೂ ಸಿಹಿ ಅನುಭವವನ್ನು ಒಯ್ಯಲಿಲ್ಲ. ಅವರಲ್ಲಿದ್ದುದು ಅನೂಹ್ಯವಾದ ಕಟು ಅನುಭವಗಳ ಸರಣಿ ಮಾತ್ರ. ಆಷ್‌ವಿತ್ಸ್‌ನಿಂದ ಪಾರಾಗಿ ಬದ ರೀಟಾ ಯಾಂಬರ್ಗರ್ ಹೇಳುವಂತೆ, “ಆ ಸುದೂರ ಅತೀತದ ನೆನಪು ಮನಸ್ಸಿನಿಂದ ಮಾಸಿಲ್ಲ; ಮಾಸುವುದೂ ಇಲ್ಲ. ಜರ್ಮನ್ನರು ತಾಯಿಯ ಕಂಕುಳದಿಂದ ಮಗುವನ್ನು ಕಿತ್ತುಕೊಂಡ ಆ ದಿನ ಇನ್ನೂ ನೆನಪಿನಲ್ಲಿದೆ. ಮಗು ತಾಯಿಗಾಗಿ ಅಳುತ್ತಿತ್ತು. ತಾಯಿಯೂ ಮಗುವಿಗಾಗಿ ಅಳುತ್ತಿದ್ದಳು. ಮುಂದೆ ಆ ಮಗುವಿಗೆ ಏನಾಯಿತೆನ್ನುವುದಾಗಲಿ ಆ ತಾಯಿ ಎಲ್ಲಿಗೆ ಹೊರಟುಹೋದಳೆನ್ನುವುದನ್ನಾಗಲಿ ನಾನರಿಯೆ. ಅವರಿಬ್ಬರೂ ಇನ್ನೂ ಜೀವಂತವಾಗಿದ್ದರೆ ಒಬ್ಬರನ್ನೊಬ್ಬರು ಹುಡುಕುತ್ತಿರಬಹುದು. ಅಕಸ್ಮಾತ್ತಾಗಿ ಅವರಿಬ್ಬರೂ ಒಂದುಗೂಡಿದರೆ, ಹಾಗೆ ಒಂದುಗೂಡಿದ್ದು ನನಗೆ ತಿಳಿದರೆ ನನ್ನಂತಹ ಸುಖಿ ಇಡೀ ಜಗತ್ತಿನಲ್ಲಿಯೇ ಇರುವುದಿಲ್ಲ.”

●

ಆರೋಗ್ಯದಂಗಳ

# ನೋವಿಲ್ಲದ ಶಸ್ತ್ರ ಚಿಕಿತ್ಸೆಗಳು



• ಡಾ. ಜೆ.ಜಿ. ದೇವಧರ್

ಸ್ಟೇಶನ್ ರಸ್ತೆ
ಹಾವೇರಿ
(ಧಾರವಾಡ ಜಿಲ್ಲೆ)

# ಆರೋಗ್ಯದಂಗಳ

ಮದುವೆಯಾಗಿ ಆರು ವರ್ಷಗಳಾದರೂ ಆರತಿ ಗರ್ಭಧರಿಸಲಿಲ್ಲ. ಚಿಂತೆ ಶುರುವಾಯಿತು. ಮೂವತ್ತರೊಳಗಿನ ಆಕೆ ಪುಣ್ಯಕ್ಕೆ ಅವರಿವರಂತೆ 'ಬಾಬಾ-ಗೀಬಾ'ಗಳ ಆಶೀರ್ವಾದವೋ 'ಪುತ್ರಕಾಮೇಷ್ಟಿ' ಯಾಗವೋ ಎಂದು ತಲೆಕೆಡಿಸಿಕೊಳ್ಳಲಿಲ್ಲ. ತನ್ನ ಗರ್ಭದ ದೋಷವೇನೆಂದು ಅರಿತುಕೊಳ್ಳಲು ಸ್ತ್ರೀರೋಗತಜ್ಞರ ಬಳಿ ಹೋದಳು. ಪರೀಕ್ಷೆಯ ನಂತರ ತನ್ನ ಎರಡೂ ಅಂಡಾಶಯಗಳಲ್ಲಿ ಮುಷ್ಟಿಗಾತ್ರದ ಎರಡು ಗಂಟುಗಳಿವೆ; ಅದಕ್ಕಾಗಿ ಹೊಟ್ಟೆಯ ಶಸ್ತ್ರಚಿಕಿತ್ಸೆ ಆಗಬೇಕು ಎಂದು ಡಾಕ್ಟರಿಂದ ತಿಳಿದಾಗ ಕೊಂಚ ಗಾಬರಿಯಾದಳು. "ಹೊಟ್ಟೆಯ ಆಪರೇಶನ್ನು" ಎಂದದ್ದು ಆಕೆ ಹಿಂದೇಟು ಹಾಕುವಂತೆ ಮಾಡಿತು.

ಸುಮತಿ ೧೭ ವರ್ಷದ ಹುಡುಗಿ. ಆಕೆಯ ಗರ್ಭಕೋಶ ಕೆಳಗೆ ಜರಿಯತೊಡಗಿತ್ತು. ಡಾಕ್ಟರು ಹೊಟ್ಟೆಯ ಆಪರೇಶನ್ ಮಾಡಿ ಅದನ್ನು ಸರಿಪಡಿಸಬೇಕು, ಅದಕ್ಕಾಗಿ ಶಹರದ ದೊಡ್ಡ ಆಸ್ಪತ್ರೆಗೆ ಹೋಗಬೇಕು ಎಂದು ಹೇಳಿದಾಗ ಹಿಂಜರಿಯತೊಡಗಿದಳು. ಅವಳಿಗಿಂತ ಹೆಚ್ಚಿನ ಚಿಂತೆ ಆಕೆಯ ತಾಯಿಗೆ. ಮಗಳು ಇನ್ನೆರಡು ವರ್ಷಕ್ಕೆ ಮದುವೆಯಾಗಬೇಕಾದವಳು. ಈಗಲೇ ಗರ್ಭಕೋಶದ ಶಸ್ತ್ರಚಿಕಿತ್ಸೆಯಾಗಿ ಬಿಟ್ಟರೆ ಸುದ್ದಿ ಹಬ್ಬಿ ಮದುವೆಗೆ ತೊಂದರೆ. ಬೇರೆ ಯಾವುದಾದರೂ ಉಪಾಯವಿರಲಿಕ್ಕಿಲ್ಲವೆ ಎಂದು ಡಾಕ್ಟರನ್ನೇ ಕೇಳಿದಳು.

ಪದ್ಮಾವತಮ್ಮ ಐವತ್ತರ ಅಂಚಿನವಳು. ಹದಿನೆಂಟು ವರ್ಷಗಳ ಹಿಂದೆ ಒಮ್ಮೆ ಹೆರಿಗೆ ಕಷ್ಟವಾಗಿ ಸಿಜೇರಿಯನ್ ಮಾಡಿಸಬೇಕಾಗಿ ಬಂದಿತ್ತು. ಆರು ವರ್ಷಗಳ ಹಿಂದೆ ಗರ್ಭದ ರಕ್ತಸ್ರಾವದ ತೊಂದರೆ, ಗರ್ಭಕೋಶದ ಬಾವು ಮುಂತಾದ ಕಾರಣಗಳಿಗಾಗಿ ಶಸ್ತ್ರಚಿಕಿತ್ಸೆಯೂ ಆಗಿತ್ತು. ಗರ್ಭಕೋಶವನ್ನು ತೆಗೆಸಿಕೊಂಡಿದ್ದಳು. ಕಳೆದ ವರ್ಷ ಅವಳಿಗೆ ಆಗಾಗ ಹೊಟ್ಟೆನೋವು ಹಾಗೂ ಕಿಬ್ಬೊಟ್ಟೆಯಲ್ಲಿ ಉಬ್ಬಿದಂಥ ಅನುಭವವಾಯಿತು. ಸ್ತ್ರೀರೋಗತಜ್ಞೆಯನ್ನು ಕಂಡಳು. ಅಲ್ಟ್ರಾಸೌಂಡ್ ಇತ್ಯಾದಿ ತಪಾಸಣೆಯಿಂದ ಅಂಡಾಶಯಗಳಲ್ಲಿ ದ್ರವ ತುಂಬಿ ಗಂಟಿನಂತಾಗಿರುವುದು ಗೊತ್ತಾಯಿತು.

ವಹೀದಾ ಎಂಬ ೨೭ ವರ್ಷದ ಹೆಣ್ಣುಮಗಳಿಗೆ ಐದು ವರ್ಷಗಳಲ್ಲಿ ಎರಡು ಬಾರಿ ಸಿಜೇರಿಯನ್ ಆಗಿತ್ತು. ಆ ಮೇಲೆ ಮೇಲಿಂದ ಮೇಲೆ ಹೊಟ್ಟೆನೋವು ಎಂದು ನರಳತೊಡಗಿದಳು. ಒಮ್ಮೆ ಬಲಗಡೆ ಕಿಬ್ಬೊಟ್ಟೆಯಲ್ಲಿ ಬಾವೂ ಕಾಣಿಸಿಕೊಂಡಿತ್ತು. ಸ್ತ್ರೀರೋಗ ವೈದ್ಯರು ಪರೀಕ್ಷಿಸಿ, "ಕರುಳುಗಳು ಅಂಟಿಕೊಂಡಿವೆ, ಇದು ಮರುಕಳಿಸುವ ಅಪೆಂಡಿಸೈಟಿಸ್" ಎಂಬ ಅಭಿಪ್ರಾಯಕ್ಕೆ ಬಂದರು.

ಈ ಮೇಲಿನ ನಾಲ್ಕೂ ಪ್ರಕರಣಗಳಲ್ಲಿ ಲೆಪ್ರೊಸ್ಕೊಪಿಕ್ ವಿಧಾನವೆ ಸೂಕ್ತವೆಂಬ ಅಭಿಪ್ರಾಯ ಆಯಾ ವೈದ್ಯರದಾಯಿತು. ನಾಲ್ಕೂ ಕಡೆ ಕರೆ ಬಂದದ್ದರಿಂದ ಅಲ್ಲಲ್ಲಿಗೇ ಹೋಗಿ ಆಪರೇಶನ್ ಮಾಡಿಬಂದೆ.

ಆರತಿಯ ಅಂಡಾಶಯಗಳ ಗಂಟುಗಳ ನಿವಾರಣೆಗೆ ತಗಲಿದ್ದು ಮುಕ್ಕಾಲು ಗಂಟೆ ಅವಧಿ ಮಾತ್ರ. ಮರುದಿನವೇ ಸಂಜೆ ಆಕೆ ಈ ಹಿಂದೆಂದೂ ಏನೂ ತೊಂದರೆಯಿರಲೇ ಇಲ್ಲ ಎಂಬಷ್ಟು ಗೆಲುವಿನಿಂದ ಮನೆಗೆ ಮರಳಿದಳು. ಅಷ್ಟೇ ಅಲ್ಲ, ಮುಂದೆ ಕೆಲ ತಿಂಗಳುಗಳ ನಂತರ ಪತಿಯೊಂದಿಗೆ ನನ್ನಲ್ಲಿಗೆ ಬಂದು ಧನ್ಯವಾದ ಹೇಳಿಹೋದಳು. "ಇನ್ನು ಆರು ತಿಂಗಳಿಗೆ ಸಿಹಿ ಹಾಗೂ ಮುದ್ದಾದ ಮಗುವಿನೊಂದಿಗೆ ಬರುತ್ತೀ ತಾನೆ?" ಎಂದು ಚೇಷ್ಟೆ ಮಾಡಿದಾಗ ಆಕೆಯ ಮುಖ ನಾಚಿಕೆಯಿಂದ ಕೆಂಪಾದರೂ ಕಣ್ಣಲ್ಲಿ ಕೃತಜ್ಞತೆಯಿತ್ತು.

ಸುಮತಿಯ ಗರ್ಭಕೋಶ ಜಾರುವಿಕೆಯನ್ನು ತಡೆಗಟ್ಟುವ ಶಸ್ತ್ರಚಿಕಿತ್ಸೆಗೆ ಕೂಡ ಒಂದು ಗಂಟೆಯಷ್ಟು ಸಮಯ ಬೇಕಾಯಿತು. ಮೊನ್ನೆ ಆಕೆಯ ತಾಯಿ ಸಿಕ್ಕಿದ್ದರು. "ಮಗಳಿಗೆ ಮದುವೆ ಗೊತ್ತಾಗಿದೆ, ಆಮಂತ್ರಣ ಪತ್ರದೊಂದಿಗೆ ಬರುತ್ತೇವೆ," ಎಂದು ಹೇಳಿದರು.

ಪದ್ಮಾವತಮ್ಮನ ಅಂಡಾಶಯಗಳಲ್ಲಿ ತುಂಬಿದ ದ್ರವವನ್ನು ಹೀರಿ ತೆಗೆಯಲು ಹಿಡಿದದ್ದು ಒಂದು ತಾಸು ಅಷ್ಟೇ.

ವಹೀದಾಳ ಕರುಳಿನ ತೊಂದರೆಯನ್ನು ಕಣ್ಣಾರೆ ನೋಡಿ, ಮೆತ್ತಿಕೊಂಡಿದ್ದ ಅವುಗಳನ್ನು ಬಿಡಿಸಲು ಮುಕ್ಕಾಲು ಗಂಟೆ ಮಾತ್ರ ಬೇಕಾಯಿತು.

ಇದೆಲ್ಲ ಲೆಪ್ರೊಸ್ಕೊಪಿಯಿಂದಲೆ ಸಾಧ್ಯವಾದದ್ದು. ಒಂದು ವೇಳೆ ಈ ವಿಧಾನವೆಂಬ ವರದಾನ ಲಭಿಸದೇ ಹೋಗಿದ್ದಿದ್ದರೆ ದೀರ್ಘಾವಧಿಯ ಶಸ್ತ್ರಕ್ರಿಯೆ, ತತ್ಪೂರ್ವ ಮತ್ತು ನಂತರದ ಶುಶ್ರೂಷೆ, ಬಹುದಿನಗಳ ಆಸ್ಪತ್ರೆಯವಾಸ, ನಾನಾವಿಧ ಪರೀಕ್ಷೆ, ಔಷಧೋಪಚಾರ ಮತ್ತು ಇವೆಲ್ಲಕ್ಕೂ ಹೆಚ್ಚಾಗಿ ಕೊನೆಯವರೆಗೂ ಗಾಯದ ಕಲೆ ಉಳಿಯುವ ಭಯಗಳಲ್ಲೇ ಬಹುತೇಕ ರೋಗಿಗಳು ಕಾಲಕಳೆಯಬೇಕಾಗುತ್ತಿತ್ತು.

ಇಂದು ಲೆಪ್ರೊಸ್ಕೊಪಿ ವಿಧಾನ ಹೊಸ ಹೊಸ ಸಾಧ್ಯತೆಗಳನ್ನು ತನ್ನದಾಗಿಸಿಕೊಳ್ಳುತ್ತಿದೆ.

## ಸಾಕಾರಗೊಂಡ ಕಲ್ಪನೆ

ಹಿಂದೆ ಒಮ್ಮೆ ಬಾನುಲಿ ನಾಟಕವೊಂದು ಪ್ರಸಾರವಾಗಿತ್ತು. ದೇಹದ ಒಳಗಿನ ನಾನಾ ಭಾಗಗಳವರೆಗೆ ವ್ಯಕ್ತಿಗಳಿಬ್ಬರು ಹೋಗಿ ಅವುಗಳನ್ನು ನೋಡಿ ಬರುವ ಕಾಲ್ಪನಿಕ ಕಥೆ ಅದು. ವಿಜ್ಞಾನಿಯೊಬ್ಬ ಇಬ್ಬರನ್ನು ನಮ್ಮ ನರಗಳ ಗಾತ್ರಕ್ಕಿಂತಲೂ ಚಿಕ್ಕವರನ್ನಾಗಿ ಮಾರ್ಪಡಿಸುತ್ತಾನೆ. ಅವರಿಗೊಂದು ಪುಟ್ಟ ದೋಣಿ. ಬಲಗೈಯ ಮೂಲಕ ಅವರನ್ನು ಒಳಗೆ ನರಗಳಿಗೆ ಇಳಿಸುತ್ತಾನೆ. ರಕ್ತ ಪ್ರವಾಹದ ಗುಂಟ ಅವರು ಪ್ರಯಾಣ ಮುಂದುವರೆಸಿ ತಾವು ಕಾಣುವ ಪ್ರತಿಯೊಂದು ಅಂಗವನ್ನೂ ವರ್ಣಿಸುತ್ತ ಹೋಗುತ್ತಾರೆ. ಹೃದಯದಲ್ಲಿಳಿದಾಗ ಅವರಿಗೆ ಆ ವ್ಯಕ್ತಿಯ ಹಲವಾರು ಭಾವನೆಗಳು, ಆಶೆ-ನಿರಾಶೆಗಳು, ಅವಿತಿಟ್ಟ ಆಕಾಂಕ್ಷೆಗಳೇ ಮೊದಲಾದವುಗಳೆಲ್ಲ ಅರಿವಿಗೆ ಬರುತ್ತವೆ. ಕೇವಲ

ಆ ಶ್ರವಣ ಮಾಧ್ಯಮದ ಮೂಲಕ ನಮ್ಮನ್ನು ಅಂತರಂಗಯಾತ್ರೆಗೆ ಕರೆದೊಯ್ಯುವಲ್ಲಿ ನಾಟಕಕಾರ ಯಶಸ್ವಿಯಾಗುತ್ತಾನಷ್ಟೇ ಅಲ್ಲ, ಅಚ್ಚರಿಯಲ್ಲಿ ಮುಳುಗಿಸಿ ಎಬ್ಬಿಸುತ್ತಾನೆ. ನಾಟಕ ಪ್ರಸಾರವಾಗುತ್ತಿದ್ದಷ್ಟೂ ಸಮಯ ಆ ದೃಶ್ಯಗಳು ನಮ್ಮ ಕಣ್ಣೆದುರು ಕಟ್ಟುತ್ತಿದ್ದವು.

ಆ ಕಲ್ಪನೆ ಇಂದು ವೈದ್ಯ ವಿಜ್ಞಾನದಲ್ಲಿ ಸಾಕಾರರೂಪಗೊಂಡಿದೆ!

ಇನ್ನೊಂದು ಉದಾಹರಣೆ ನೀಡುತ್ತೇನೆ. ಮಹಾಭಾರತದ ಪ್ರಸಂಗ ಅದು. ಬ್ರಾಹ್ಮಣ ವೇಷಧಾರಿ ಅರ್ಜುನ ಕೆಳಗೆ ಬಿಂಬವನ್ನು ನೋಡಿ ಮೇಲೆ ತಿರುಗುತ್ತಿದ್ದ ಮತ್ಸ್ಯಯಂತ್ರವನ್ನು ಗುರಿಯಿಟ್ಟು ಭೇದಿಸಿದನಲ್ಲವೆ?

ಲೆಪ್ರೊಸ್ಕೊಪಿ ತಜ್ಞರದು ಒಂದು ರೀತಿಯಲ್ಲಿ ಅಂಥ ಜಾಣ್ಮೆ ಅಂಥ ಬಾಣಾಕ್ಷತೆ. ಎದುರು ಕಾಣುವ ಟಿ.ವಿ. ಬಿಂಬವನ್ನು ನೋಡುತ್ತಲೇ ಅವರು ತಮ್ಮ ಕೈ ಕೆಳಗೆ ಇರುವ ರೋಗಿಯ ಹೊಟ್ಟೆ ಮೊದಲಾದ ಅಂಗಗಳ ಚಿಕಿತ್ಸೆ ನಡೆಸುತ್ತಾರೆ.

ಜಲಾಂತರ್ಗಾಮಿಯಲ್ಲಿ ಕುಳಿತು ಅಲ್ಲಿನ ಗಾಜು ಕಿಟಕಿಯ ಮೂಲಕ ಸಾಗರಗರ್ಭದ ಅದ್ಭುತ ದೃಶ್ಯಗಳನ್ನು ನೋಡುತ್ತ ಮುಂದುವರೆಯುವ ಅನುಭವ ನಿಮಗಿರದಿದ್ದರೂ ಟಿ.ವಿ. ಇಲ್ಲವೆ ಚಲನ ಚಿತ್ರಗಳಲ್ಲಿ ಅಂಥ

ಲೆಪ್ರೊಸ್ಕೋಪಿ ಶಸ್ತ್ರಚಿಕಿತ್ಸೆ





ಅಂತರ್ಜಾಲ ಚಿತ್ರ

ನೋಟಗಳನ್ನು ಕಂಡೇ ಇರುತ್ತೀರಿ. ಲೆಪ್ರೊಸ್ಕೊಪಿ ಮಾನವ ಗರ್ಭದ ಹಾಗೂ ಅದರ ಅಕ್ಕಪಕ್ಕದ ದೃಶ್ಯಗಳನ್ನು ಸ್ಫುಟವಾಗಿ, ವಿವರವಾಗಿ ಟಿ.ವಿ. ಪರದೆಯ ಮೇಲೆ ತೋರಿಸುವಲ್ಲಿ ಸಮರ್ಥವಾಗಿದೆ. ಹೀಗಾಗಿ ಶಸ್ತ್ರಚಿಕಿತ್ಸಕನಿಗೆ ಇದು ಆಯಾ ಅಂಗವನ್ನು ನೋಡಿ, ಅಭ್ಯಸಿಸಿ, ಜತೆಗಾರರೊಂದಿಗೆ ಚರ್ಚಿಸಿ, ಸೂಕ್ತ ನಿರ್ಣಯ ಕೈಕೊಳ್ಳಲು ಅನುಕೂಲದ ಉಪಕರಣ. ರೋಗಪೀಡಿತ ಅಂಗವನ್ನು ಹೊರಳಿಸಿ ಹೊರಳಿಸಿ ನೋಡಲೂ ಬಹುದು. ತೊಂದರೆ ಏನು? ಯಾವ ಭಾಗದಲ್ಲಿ? ಯಾವ ಹಂತದಲ್ಲಿದೆ? ಏನು ಮಾಡಬೇಕು? ಇವೆಲ್ಲದರ ಕುರಿತು ಆಗಿಂದಾಗಲೇ ಅಲ್ಲಿಯೇ ನಿರ್ಣಯ ಕೈಗೊಳ್ಳಲು ಇದರಿಂದ ಶಸ್ತ್ರಚಿಕಿತ್ಸಕನಿಗೆ ಸಾಧ್ಯವಾಗುತ್ತದೆ. ಪರೀಕ್ಷಾರ್ಥವಾಗಿಯೂ ಲೆಪ್ರೊಸ್ಕೊಪಿ ನಡೆಸುವುದುಂಟು. ಇಂಥ ಪರೀಕ್ಷೆಯ ಸಂದರ್ಭಗಳಲ್ಲಿ ಶಸ್ತ್ರಚಿಕಿತ್ಸೆ ಮಾಡಿಯೇ ಬಿಡುವುದು ವಿಹಿತ ಎಂಬ ನಿರ್ಣಯಕ್ಕೆ ವೈದ್ಯರು ಬಂದರೆ ಆ ಕ್ರಮ ಕೈಗೊಳ್ಳುವುದೂ ಉಂಟು. ಕೆಲವೊಮ್ಮೆ ಬಯಾಪ್ಸಿಯ ಪ್ರಸಂಗವೂ ಇರುತ್ತದೆ. ಆಗ ಸಂಶಯಿತ ಅಂಗದ ಕೆಲಭಾಗವನ್ನು ಕತ್ತರಿಸಿ ಪರೀಕ್ಷೆಗೆ ಕಳಿಸಲು ಇಲ್ಲಿ ಅನುಕೂಲವುಂಟು.

ಎಂಡೊ ಕ್ಯಾಮರಾ ಎಂಬುದು ಅತಿಸೂಕ್ಷ್ಮವಾದ ಆದರೆ ಅತ್ಯಂತ ಜಾಣ ಅಕ್ಷ. ಇದನ್ನು 'ಜಾಣಾಕ್ಷ' ಎನ್ನುವುದೇ ಸೂಕ್ತ. ಈ ಕ್ಯಾಮರಾವನ್ನು ಉದ್ದೇಶಿತ ಭಾಗದಲ್ಲಿ ಒಂದು ಸೆಂಟಿಮೀಟರ್ ಗಾತ್ರದ ರಂಧ್ರದ ಮೂಲಕ ನಳಿಕೆ ಹಾಕಿ ಇಳಿಸಲಾಗುವುದು. ಅನ್ನನಾಳದಿಂದ ಹಿಡಿದು ಜಠರ, ಯಕೃತ್ತು,

ಪಿತ್ತಕೋಶ, ಪ್ಲೀಹ, ಮೇದೋಜೀರಕ, ಸಣ್ಣಕರುಳು, ಹರ್ನಿಯಾ, ದೊಡ್ಡ ಕರುಳು, ಗರ್ಭನಾಳ, ಅಂಡಾಶಯ, ಮತ್ತು ಮೂತ್ರಕೋಶ, ಮೂತ್ರನಾಳ ಗಳವರೆಗೂ ಇದರಿಂದ ೩೬೦ ಕೋನದಲ್ಲಿ ವೀಕ್ಷಿಸಬಹುದು.

## ಶಸ್ತ್ರಕ್ರಿಯೆ ಎಂತು

ಮೊದಲು ರೋಗಿಯನ್ನು ಶಸ್ತ್ರ ಚಿಕಿತ್ಸಾ ಕೋಣೆಯಲ್ಲಿ ಅರೆವಳಿಕೆ ಕೊಟ್ಟು ಮಲಗಿಸಿ ಹೊಕ್ಕುಳಿನ ಮೇಲೆ ಒಂದು ಸೂಜಿಯಿಂದ (Veer's Needle) ಹೊಟ್ಟೆಯಲ್ಲಿ ಗಾಳಿ ತುಂಬಲಾಗುವುದು. ನಂತರ ಅದೇ ಜಾಗದಲ್ಲಿ ಸೆಂಟಿಮೀಟರ್ ಗಾತ್ರದ ಚಿಕ್ಕ ಗಾಯಮಾಡಿ ನಳಿಕೆಯನ್ನು ಒಳಗೆ ಇಳಿಸಲಾ ಗುವುದು. ಈ ನಳಿಕೆಯ ಮೂಲಕ ಈ ಮೊದಲೇ ಹೇಳಿದಂತೆ ಎಂಡೊಕ್ಯಾಮರಾ ಒಳಸೇರುತ್ತದೆ. ಇದು ಪ್ರಖರ ಬೆಳಕು ಹಾಗೂ ಮಸೂರಗಳನ್ನುಳ್ಳದ್ದು. ಬೆಳಕನ್ನು ಬೀರಿದಾಗ ಟಿ.ವಿ. ಪರದೆಯ ಮೇಲೆ ಕ್ಯಾಮರಾ ಕಣ್ಣಿಂದ ನೋಡಲ್ಪಡುವ ಭಾಗ ಅದಕ್ಕಿಂತ ಎಷ್ಟೋ ಪಟ್ಟು ದೊಡ್ಡದಾಗಿ ಗೋಚರಿಸತೊಡಗುತ್ತದೆ. ಹೊಕ್ಕಳಿನ ಕೆಳಗೆ ಎರಡು ಕಡೆ ಇನ್ನೆರಡು ಅರ್ಧ ಸೆಂಟಿಮೀಟರ್ ಗಾತ್ರದ ರಂಧ್ರಗಳನ್ನು ಮಾಡಿ ಆ ರಂಧ್ರಗಳಲ್ಲಿ ಮತ್ತೆರಡು ಕೊಳವೆಗಳನ್ನು ಇಳಿಸಿ ಅವುಗಳ ಮೂಲಕ ಚಿಕಿತ್ಸಕೋಪಕರಣಗಳನ್ನು ಒಳಗೆ ಸೇರಿಸಲಾಗುವುದು. ಇಲ್ಲಿಂದ ಶುರುವಾಗು ತ್ತದೆ ಶಸ್ತ್ರಚಿಕಿತ್ಸಕನ ಕುಶಲಕರ್ಮ.

ಯಾವುದೇ ಅಂಗಕ್ಕೆ ಹಾನಿ ತಟ್ಟದಂತೆ, ಪೆಟ್ಟು ಇಲ್ಲವೆ ಗಾಯವಾಗದಂತೆ ಮತ್ತು ರಕ್ತಸ್ರಾವವಾಗದಂತೆ ಇಲ್ಲಿ ಶಸ್ತ್ರಚಿಕಿತ್ಸೆ ನಡೆಸಲು ಸಾಧ್ಯವಿದೆ. ಟಿ.ವಿ.ಯ ಮೇಲೆ ಲಕ್ಷ್ಯ ಹಾಗೂ ಕೈಯೊಳಗಿನ ಶಸ್ತ್ರಕ್ರಿಯಾ ಉಪಕರಣಗಳ ಮೇಲೆ ಹಿಡಿತಗಳನ್ನು ಏಕಕಾಲಕ್ಕೇ ಸಾಧಿಸಿಕೊಳ್ಳಬೇಕಾದ್ದು ಇಲ್ಲಿ ಅನಿವಾರ್ಯ. (ಎದುರಿನ ಕನ್ನಡಿಯಲ್ಲಿ ನಮ್ಮ ಪ್ರತಿಬಿಂಬ ನೋಡಿಕೊಳ್ಳುತ್ತ ತಟ್ಟೆಯಲ್ಲಿರುವ ಆಹಾರವನ್ನು ಚಾಕು, ಚಮಚ ಹಾಗೂ ಮುಳ್ಳು ಚುಚ್ಚುಗಗಳ ಮೂಲಕ ತೆಗೆದು ಮಗುವಿನ ಬಾಯಿಗಿರಿಸಿ ನೋಡಿ. ಆಗ ನಿಮಗೊದಗುವ ಕಷ್ಟದ ಕಲ್ಪನೆ ಬಂತೆಂದರೆ ಲೆಪ್ರೊಸ್ಕೊಪಿ ಚಿಕಿತ್ಸಕ ಯಾವ ರೀತಿ ಕಾರ್ಯ ನಿರ್ವಹಿಸುತ್ತಾನೆ, ಆತನ ಗಮನ ಎಲ್ಲಿ ಕೇಂದ್ರೀಕರಿಸಲ್ಪಟ್ಟಿರುತ್ತದೆ ಎಂಬುದರ ಅರಿವು ನಿಮಗೆ ಆಗುತ್ತದೆ.)

ಎದುರಿನ ಟಿ.ವಿ.ಯಲ್ಲಿ ಹೊಟ್ಟೆಯೊಳಗಿನ ಅಂಗದ ಉದ್ದೇಶಿತ ಭಾಗದ ಮೇಲೆ ಶಸ್ತ್ರೋಪಕರಣಗಳನ್ನು ಆಡಿಸುತ್ತ, ಬೇಕೆಂದರೆ ಆಯಾ ಅಂಗದ ಬಿಂಬವನ್ನು ಸ್ಥಿರವಾಗಿ ನಿಲ್ಲಿಸಿ, ಹಿಗ್ಗಿಸಿ ಅಥವಾ ವಿಡಿಯೋದಲ್ಲಿ ದಾಖಲಿಸಿ ಕೊಂಡು ಮುಂದಿನ ಅಧ್ಯಯನಕ್ಕೂ ಬಳಸಿಕೊಳ್ಳಬಹುದಾಗಿದೆ. ಇದರೊಂ ದಿಗೆ ಕೊಯ್ಯಬೇಕಾದ ಭಾಗವನ್ನು ಕೊಯ್ದು, ಕತ್ತರಿಸಿ ತೆಗೆಯಬೇಕಾದುದನ್ನು ಕತ್ತರಿಸಿ ತೆಗೆದು ಹಾಕಬಹುದು. ಆಮೇಲೆ ಅಲ್ಲಿ ಹೊಲಿಗೆ ಹಾಕುವುದೇ ಮೊದಲಾದ ಕೆಲಸಗಳನ್ನಲ್ಲದೆ ಅಂತರವಯವಗಳ ಮೇಲಿನ ಅಂಗಗಳನ್ನು

ಮತ್ತೆ ಸ್ವಸ್ಥಾನದಲ್ಲಿ ಹೇಗಿತ್ತೋ ಹಾಗೆ ಇರಿಸಲೂ ಬಹುದು. ಕೆಲವೊಂದು ಸಂದರ್ಭಗಳಲ್ಲಿ ಕೀವು, ದ್ರವಗಳು ತುಂಬಿಕೊಂಡ ಅಂಗಗಳನ್ನು ಈ ರೀತಿ ಒಡೆದಾಗ ಆ ಹೊಲಸನ್ನು ಬೇರೊಂದು ನಳಿಕೆಯ ಮೂಲಕ ಹೊರಗೆ ತೆಗೆಯುವುದು ಮತ್ತು ಔಷಧಯುಕ್ತ ನೀರಿನಿಂದ ತೊಳೆಯುವುದೇ ಮೊದಲಾದ ಕೆಲಸಗಳನ್ನೂ ಸಮರ್ಪಕವಾಗಿ ನಿರ್ವಹಿಸಬಹುದು.

## ಕೂಲಂಕಷ ಅಭ್ಯಾಸ

ಲೇಖನದ ಪ್ರಾರಂಭಕ್ಕೆ ನೀಡಿರುವ ಆರತಿಯ ಪ್ರಕರಣವನ್ನೇ ತೆಗೆದುಕೊಳ್ಳೋಣ. ಅವಳ ಅಂಡಾಶಯಗಳಲ್ಲಿ ಮುಷ್ಟಿಗಾತ್ರದ ಎರಡು ಗಂಟುಗಳಿದ್ದುವಲ್ಲ, ಅವನ್ನು ಲೆಪ್ರೊಸ್ಕೊಪಿಯ ಮೂಲಕವೇ ನಿವಾರಿಸಲಾಯಿತು. ಎರಡೂ ಅಂಡಾಶಯಗಳ ಗಂಟುಗಳ ಒಳಪದರದ ನಿರ್ಮೂಲನೆಗೆ ಮೊದಲು ಆಕೆ ಪಡೆದಿದ್ದ ಎಲ್ಲ ಸಲಹೆಗಳು, ತೆಗೆದುಕೊಂಡಿದ್ದ ಔಷಧಿ, ತೆಗೆಸಿಕೊಂಡಿದ್ದ ಎಕ್ಸ್‌ರೇ ಮೊದಲಾದುವನ್ನು ಕೂಲಂಕಷವಾಗಿ ಅಭ್ಯಸಿಸಲಾಯಿತು. ಹೀಗೆ ಅವಳ ತೊಂದರೆಯೇನೆಂಬುದರ ಬಗೆಗೆ ನಿಖರ ಅಭಿಪ್ರಾಯಕ್ಕೆ ಬಂದ ಮೇಲೆ ಲೆಪ್ರೊಸ್ಕೊಪಿಕ್ ಶಸ್ತ್ರಚಿಕಿತ್ಸೆಯನ್ನು ನೇರವಾಗಿ ಮಾಡಲು ಸಾಧ್ಯವಾಯಿತು.

ಪದ್ಮಾವತಮ್ಮನ ಅಂಡಾಶಯಗಳಲ್ಲಿ ತುಂಬಿಕೊಂಡಿದ್ದ ದ್ರವವನ್ನು ಹೀಗೆಯೇ ಒಡೆದು ಹೋಗಲಾಡಿಸಲಾಯಿತು. ವಹೀದಾಳ ಮೆತ್ತಿಹಾಕಿಕೊಂಡಿದ್ದ ಕರುಳುಗಳನ್ನು ಕೂಡ ಎಲ್ಲ ಎಚ್ಚರಿಕೆಗಳೊಂದಿಗೆ ಬಿಡಿಸಿ ಅಪೆಂಡಿಸೈಟಿಸ್‌ನಿಂದ ಆಕೆ ಮುಕ್ತಳಾಗುವಂತೆ ಮಾಡಿದ್ದೂ ಈ ಮೂಲಕವೆ.

ಈ ವಿಧಾನವನ್ನು ಸಂತಾನಹರಣ ಶಸ್ತ್ರ ಚಿಕಿತ್ಸೆಗಾಗಿ ಈಗ ಸರ್ವತ್ರ ಬಳಕೆಮಾಡಿಕೊಳ್ಳಲಾಗುತ್ತಿದೆ. ದುಡಿಯುವ ಮಹಿಳೆಯರಿಗಂತೂ ಇದರಿಂದ ತುಂಬ ಅನುಕೂಲವಾಗಿದೆ. ಶಸ್ತ್ರಚಿಕಿತ್ಸೆಯ ನಂತರ ಬಹಳ ದಿನಗಳವರೆಗೆ ವಿಶ್ರಾಂತಿ ಪಡೆಯಬೇಕಾದ ಅಗತ್ಯವೇ ಇಲ್ಲಿಲ್ಲವಲ್ಲ.

ಒಂದು ಅಂದಾಜಿನ ಪ್ರಕಾರ, ಅಮೆರಿಕ ಮುಂತಾದ ಮುಂದುವರಿದ ರಾಷ್ಟ್ರಗಳಲ್ಲಿ ಗರ್ಭಸಂಬಂಧಿ ತೊಂದರೆಗಳಿಗೆ ಮಾಡಬೇಕಾದ ಶಸ್ತ್ರಚಿಕಿತ್ಸೆಗಳಲ್ಲಿ ಶೇಕಡಾ ೯೦ರಷ್ಟನ್ನು ಈ ವಿಧಾನದಿಂದಲೇ ಮಾಡುತ್ತಿದ್ದಾರಂತೆ. ಭಾರತದಲ್ಲಿ ಕೆಲವೇ ಬೃಹನ್ನಗರಗಳಲ್ಲಿ ಈ ಅನುಕೂಲವಿದ್ದು ಬಹುತೇಕರಿಗೆ ಈ ವಿಧಾನವು ಅಪರಿಚಿತವೂ ಸುಲಭವಾಗಿ ಲಭ್ಯವಾಗದಂಥದೂ ಆಗಿಬಿಟ್ಟಿದೆ. ಹೊಟ್ಟೆಯ ಕ್ಷಯರೋಗಗಳೇ ಮೊದಲಾದುವನ್ನು ಗುರುತಿಸಲು ಹಾಗೂ ಚಿಕಿತ್ಸೆ ನೀಡಲು ಇದರಂಥ ಸರಳ ಉಪಾಯ ಬೇರೆ ಇಲ್ಲವೆ ಇಲ್ಲ. ಸಂತಾನಭಾಗ್ಯದಿಂದ ವಂಚಿತರಾದ ಮಹಿಳೆಯರಿಗೆ ಅವರು ಪ್ರನಾಳಶಿಶುವಿನ ತಾಯಿಯಾಗಲು ಬಯಸಿದರೆ ಈ ವಿಧಾನ ನೆರವಿಗೆ ಬರುತ್ತದೆ.

ನನಗೆ ಈ ಲೆಪ್ರೊಸ್ಕೊಪಿಕ್ ಉಪಕರಣಗಳ ಪರಿಚಯವಾದದ್ದು ೧೯೮೦-೮೧ರಲ್ಲಿ. ಇಂಗ್ಲೆಂಡಿನಲ್ಲಿದ್ದ ನನ್ನ ತಮ್ಮ ಇದನ್ನು ನನಗೆ ಕಳಿಸಿಕೊಟ್ಟ.



ಹಾವೇರಿಯಂಥ ಪಟ್ಟಣದಲ್ಲಿ ವೈದ್ಯಕೀಯ ವೃತ್ತಿಯಲ್ಲಿರುವ ನಾನು ಮೊದಲು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲೂ ಸರಕಾರಿ ಆಸ್ಪತ್ರೆಗಳಲ್ಲೂ ಸಂತಾನ ಹರಣ ಶಸ್ತ್ರಕ್ರಿಯೆಗಳನ್ನು ನೆರವೇರಿಸತೊಡಗಿದೆ. ಕೈ ಕೂತಂತೆ ನನ್ನದೇ ಆದ ಕೆಲ ವಿಧಾನಗಳನ್ನು ಅಳವಡಿಸಿಕೊಂಡೆ. ಆ ವಿಧಾನಗಳ ಕುರಿತು ಮಣಿಪಾಲ ಮತ್ತು ಮುಂಬಯಿಗಳಲ್ಲಿ ನಡೆದ ವೈದ್ಯಕೀಯ ಸಮ್ಮೇಳನಗಳಲ್ಲಿ ಪ್ರಬಂಧ ಮಂಡಿಸಿದೆ. ಮುಂಬಯಿ ಸಮ್ಮೇಳನಕ್ಕೆ ಫ್ರಾನ್ಸಿನ ಡಾ. ಪ್ರೊಫೆಸರ್ ಬ್ರುಹಾತ್ ಬಂದಿದ್ದರು. ಸಣ್ಣ ಊರಿನ ವೈದ್ಯನಾಗಿದ್ದರೂ ನನ್ನ ಪ್ರಬಂಧದಲ್ಲಿ ಕೆಲವು ದೊಡ್ಡ ಹಾಗೂ ಮಹತ್ವದ ವಿಚಾರಗಳಿವೆ ಎಂದು ಅವರು ಪ್ರಶಂಸಿಸಿದರು. ಫ್ರಾನ್ಸಿನಲ್ಲೂ ನನ್ನ ವಿಚಾರಗಳನ್ನು ಮಂಡಿಸಲು ಆಹ್ವಾನವಿತ್ತರು. ಎರಡು ವರ್ಷಗಳ ನಂತರ ಫ್ರಾನ್ಸಿನ ಕ್ಲೆಮೊಫೆರಾ ವಿಶ್ವವಿದ್ಯಾಲಯದಿಂದ ನನಗೆ ಕರೆ ಬಂತು. ಪ್ರೊ. ಬ್ರುಹಾತ್ ಏರ್ಪಡಿಸಿದ್ದ ಆ ಸಮ್ಮೇಳನಕ್ಕೆ ಜರ್ಮನಿಯ ಡಾ. ಕರ್ಟ್ ಸೆಮ್ ಬಂದಿದ್ದರು. ಅವರು ಈ ವಿಧಾನದ ಶಸ್ತ್ರಚಿಕಿತ್ಸೆಗಳಲ್ಲಿ ಜಗತ್ತಿಗೇ ಗುರುವಿದ್ದಂತೆ. "ಜರ್ಮನಿಗೆ ಬಂದು ಒಂದು ಡಿಪ್ಲೋಮಾ ಪರೀಕ್ಷೆ ಮುಗಿಸು," ಎಂದು ನನ್ನನ್ನು ಆತ್ಮೀಯತೆಯಿಂದ ಒತ್ತಾಯಿಸಿದರು. ಈ ಅವಕಾಶಗಳು ನನಗೆ ಈ ವಿಧಾನದಲ್ಲಿ ಅವರೆಷ್ಟು ಮುಂದುವರೆದಿದ್ದಾರೆ ಮತ್ತು ನಾನು ಸಾಗಬೇಕಾದ ದಾರಿ ಯಾವುದು ಎಂಬುದನ್ನು ಖಚಿತವಾಗಿ ಅರಿತುಕೊಳ್ಳಲು ಸಹಾಯಕವಾದುವು.

ರಂಗೋಲಿ ಹಾಕಬಲ್ಲ ಕೈಗೆ ಎಳೆಗಳ ಮೇಲೆ ಹಿಡಿತ ಸಿಕ್ಕರೆ ಸಾಕು,

ಹೊಸ ಹೊಸ ಚಿತ್ತಾರಗಳು ಚಿತ್ತಭಿತ್ತಿಯ ಮೇಲೆ ಮೂಡಿ ಅಂಗಳದಲ್ಲಿ ಸಾಕಾರಗೊಳ್ಳುತ್ತವೆ. ಹಾಗೆಯೇ ಪ್ರಯೋಗಶೀಲನಾದ ವ್ಯಕ್ತಿಗೆ ಯಾವುದೇ ಕ್ಷೇತ್ರದಲ್ಲೂ ಸತತ ಚಿಂತನದಿಂದ ಹೊಸದನ್ನು ಸಾಧಿಸುವುದು ಸುಲಭವೆನಿಸುತ್ತದೆ. ಈ ಮಾತಿಗೆ ಶಸ್ತ್ರಚಿಕಿತ್ಸಕನೂ ಹೊರತಲ್ಲ ಎಂಬುದು ನನ್ನ ಅನುಭವ.

ಕಳೆದ ಒಂದೂವರೆ ಶತಮಾನದ ಅವಧಿಯಲ್ಲಿ ಗರ್ಭಸಂಬಂಧಿ ಶಸ್ತ್ರಕ್ರಿಯೆಗಳಲ್ಲಿ ಹೊಟ್ಟೆಕುಯ್ಯುವುದು, ಕ್ರಿಯಾನಂತರ ಹೊಲಿಗೆ ಹಾಕಿ ಗಾಯ ಮಾಯುವವರೆಗೆ ಎಲ್ಲ ಎಚ್ಚರಿಕೆ ವಹಿಸುವುದೇ ಮೊದಲಾದವುಗಳಲ್ಲಿ ಅನೇಕ ಸುಧಾರಣೆಗಳಾಗಿವೆ ನಿಜ. ಆದರೆ ಜೀವಕ್ಕೆ ಅಪಾಯ ಮತ್ತು ನೋವು-ನರಳುವಿಕೆಗಳ ಸಂಭವ ಜಾಸ್ತಿ ಇತ್ತು. ವೈದ್ಯ ವಿಜ್ಞಾನದ ಎಡೆಬಿಡದ ಪ್ರಯೋಗಗಳ ಫಲವಾಗಿ ಇಂದು 'ಕನಿಷ್ಠ ಶಸ್ತ್ರ ಚಿಕಿತ್ಸೆ'ಯ ಹಂತಕ್ಕೆ ಬಂದು ತಲುಪಿದ್ದೇವೆ. ಅಲ್ಟ್ರಾಸೋನೋಗ್ರಫಿ, ಎಂಡೋಸ್ಕೋಪಿ, ಮೈಕ್ರೋವೇವ್, ಶಾಕ್‌ವೇವ್ ಹಾಗೂ ಲೇಸರ್ ಚಿಕಿತ್ಸೆಗಳಂಥ ಹೊಸ ಬಾಣಗಳು ವೈದ್ಯಕೀಯ ಲೋಕದ ಬತ್ತಳಿಕೆಯಲ್ಲಿ ಪ್ರತ್ಯಕ್ಷವಾಗಿವೆ. ತೆರೆದ ಗರ್ಭದ ಶಸ್ತ್ರಚಿಕಿತ್ಸೆ ಈ ಕಾರಣದಿಂದ ಇಲ್ಲದಂತಾಗಿ ತನ್ಮೂಲಕ ನೋವು-ಗಾಯ-ದೀರ್ಘಕಾಲೀನ ಆಸ್ಪತ್ರೆವಾಸ



ಮತ್ತು ಬಹುಕಾಲದ ಔಷಧೋಪಚಾರಗಳೂ ಅನವಶ್ಯವೆನಿಸಿವೆ.

ಈ ಮೊದಲೊಮ್ಮೆ ಒಂದು ಬಾನುಲಿ ನಾಟಕದ ಉದಾಹರಣೆ ನೀಡಿದೆನಷ್ಟೆ. ಅದರಲ್ಲಿ ರಕ್ತನಾಳಗಳ ಮೂಲಕ ಇಬ್ಬರನ್ನು ದೇಹದ ಬೇರೆಬೇರೆ ಭಾಗಗಳಲ್ಲಿ ಸಂಚರಿಸುವಂತೆ ವೈದ್ಯನೊಬ್ಬ ಮಾಡಿದ ಚಿತ್ರಣವಿದೆಯೆಂದೆನಲ್ಲ. ಆದರೆ ಅದೀಗ ಕೇವಲ ಕಲ್ಪನೆಯಾಗುಳಿದಿಲ್ಲ, ಪ್ರತ್ಯಕ್ಷವಾಗಿ ಪ್ರಯೋಗಗೊಳ್ಳುತ್ತಿದೆ ಮತ್ತು ಎಷ್ಟೋ ಕ್ಲಿಷ್ಟ ಸಮಸ್ಯೆಗಳಿಗೆ ಪರಮ ಪರಿಹಾರವೂ ಆಗುತ್ತಿದೆ. ಹೈಟೆಕ್ ಡಿಜಿಟಲ್ ಮೈಕ್ರೊ ಮೋಟಾರ್ ಚಾಲಿತ ಯಂತ್ರಗಳು ಆ ದಿಶೆಯಲ್ಲೀಗ ಬಳಸಲ್ಪಡುತ್ತಿವೆ.

### ಏನೆಲ್ಲ ಆಗುತ್ತದೆ!

ಕೊಳವೆಯ ಮೂಲಕ ಒಳಗೆ ಹಾಕಲ್ಪಡುವ ಶಸ್ತ್ರಗಳು ಬರಿಗಣ್ಣಿಗೆ ಕಾಣದಂಥ ಕೆಲವು ಅಂಶಗಳನ್ನು ಹೊಂದಿರುತ್ತವೆ. ಆಡಿಸುವಾತನ ಕೈ ಚಳಕದಲ್ಲೇ ಎಲ್ಲ ಅಡಗಿದೆ, ಆತನ ಆಜ್ಞೆಯನುಸಾರ ಬೊಂಬೆ ಕುಣಿಯುತ್ತದೆ-ಮಣಿಯುತ್ತದೆ, ಅಲ್ಲವೆ? ಹಾಗೆಯೇ ಇಲ್ಲಿಯೂ ಶಸ್ತ್ರಚಿಕಿತ್ಸಕನ ಕೈ ಚಳಕವೇ ಮುಖ್ಯವಾಗುತ್ತದೆ. ಒಳಗಿಳಿಸಲ್ಪಟ್ಟ ಶಸ್ತ್ರ ಬಯಸಿದಾಗ ಕತ್ತರಿಯಾಗಿಯೂ, ಇನ್ನೊಮ್ಮೆ ಚಿಮ್ಮಟದಂತೆಯೂ, ಮತ್ತೊಮ್ಮೆ ಬೆಸುಗೆಗೂ ಹೀಗೆ ಬಹುವಿಧ ಉಪಯೋಗಕ್ಕೆ ಬರುತ್ತದೆ. ಹೊಲಿಗೆ ಹಾಕಲೂ ಇದನ್ನು ಉಪಯೋಗಿಸಲಾಗುತ್ತದೆ. ಇವುಗಳೊಂದಿಗೆ ವಿದ್ಯುತ್ ಉದ್ದೀಪನ ಶಾಖವಿಕಿರಣಗಳಿಂದ (ಏಕಧ್ರುವ ಮತ್ತು ದ್ವಿಧ್ರುವ) ಮಾಡುವ ಚಿಕಿತ್ಸೆ, ಲೇಸರ್ ಕಿರಣ ಪ್ರಯೋಗಗಳೂ ನಡೆಯುತ್ತವೆ.

ಇನ್ನು ಕೆಲವು ಸಂದರ್ಭಗಳಲ್ಲಿ ನೈಸರ್ಗಿಕ ಮಾರ್ಗವಾಗಿಯೇ ದೇಹವನ್ನು ಪ್ರವೇಶಿಸಿ ಚಿಕಿತ್ಸೆ ನಡೆಸಬೇಕಾಗುತ್ತದೆ. ಮೂತ್ರನಾಳದ ಮಾರ್ಗವನ್ನೇ ತೆಗೆದುಕೊಳ್ಳೋಣ. ಇಲ್ಲಿ ಸಾಗಿ ಮೂತ್ರನಾಳ, ಮೂತ್ರ ಪಿಂಡ, ಮೂತ್ರ ಕೋಶ ಇವುಗಳಲ್ಲಿ ಉಂಟಾದ ಹರಳುಗಳನ್ನು ಎಂಡೋಸ್ಕೊಪಿಯಿಂದಲೇ ವೀಕ್ಷಿಸಿ ಅಲ್ಲಿಯೇ ಅವುಗಳನ್ನು ಲೇಸರ್ ಕಿರಣ ಇಲ್ಲವೆ ಮೈಕ್ರೋವೇವ್‌ಗಳ ಸಹಾಯದಿಂದ ಪುಡಿಮಾಡಿ ಹೊರಗೆ ತೆಗೆಯುವುದೂ ಈಗ ಸಾಧ್ಯವಾಗಿದೆ. ಬಾಯಿ, ಅನ್ನನಾಳದ ಮೂಲಕ ಹೊಟ್ಟೆ, ಸಣ್ಣ ಕರುಳುಗಳವರೆಗೆ ಅಂತರ್ ಸಂಚಾರವೂ ಮೈಕ್ರೋ ಮೋಟಾರ್ ಚಾಲಿತ ಸಲಕರಣೆಗಳಿಂದ ಸಾಧ್ಯ. ಹಾಗೆಯೆ ಗುದದ್ವಾರದ ಮೂಲಕ ದೊಡ್ಡ ಕರುಳಿನವರೆಗೆ ಸಾಗಿ ಅಲ್ಲಿಯ ತೊಂದರೆ ನಿವಾರಿಸುವುದು; ರಕ್ತನಾಳದ ಮೂಲಕ ಮಿನಿ ಮೋಟಾರ್ ಚಾಲಿತ ಯಂತ್ರಗಳನ್ನು ಸಾಗಿಸಿ ಅಲ್ಲಿಯ ಗಂಟುಗಳನ್ನು, ಅಡೆತಡೆಗಳನ್ನೂ; ಮಿದುಳು ಅಥವಾ ಹೃದಯಗಳಂಥ ಬಹುಸೂಕ್ಷ್ಮ ಭಾಗಗಳಿಗೂ ಹೋಗಿ ಗಂಟು, ವ್ರಣ, ರಕ್ತಗರಣೆಗಳನ್ನು ಇಲ್ಲವಾಗಿಸುವ ಚಿಕಿತ್ಸೆಯೂ ಈಗ ವ್ಯಾಪಕವಾಗುತ್ತಿದೆ. ದೊಡ್ಡ ಕಟ್ಟಡಗಳ ನಿರ್ಮಾಣದಲ್ಲಿ ಟ್ರಾಲಿ, ಬಕೆಟ್ ಮುಂತಾದುವನ್ನು ಇಳಿಸಿ ಏರಿಸಿ ಕಲ್ಲು-ಮಣ್ಣು ಸಿಮೆಂಟು ಸಾಗಿಸುವುದನ್ನು

ಗಮನಿಸಿದ್ದೀರಲ್ಲ, ಹಾಗೆಯೇ ಮೂತ್ರಕೋಶದ ಹರಳು, ಪಿತ್ತಕೋಶದ ಹರಳುಗಳನ್ನು ಲೇಸರ್ ಕಿರಣ ಬಿಟ್ಟು ಪುಡಿ ಮಾಡಿದ ಮೇಲೆ ಅತಿಚಿಕ್ಕ ಬಕೆಟ್ ಒಳಗಿಳಿಸಿ ಆ ಪುಡಿಯನ್ನು ತೆಗೆಯುವುದೂ ಉಂಟು.

### ಟಿ.ಸಿ.ಆರ್.ಇ. ಶಸ್ತ್ರಚಿಕಿತ್ಸೆ

ಈ ಶಸ್ತ್ರಚಿಕಿತ್ಸೆಗೆ ಗರ್ಭಕೋಶದ ನಿರ್ಮೂಲನೆ ಎಂದು ಕರೆಯಬಹುದು. ಇದು ಅತಿ ನೂತನ ಪರಿಕಲ್ಪನೆ. ಮಹಿಳೆಯ ಮಾಸಿಕ ರಜಸ್ರಾವಕ್ಕೆ ಕಾರಣವಾದ ಗರ್ಭಕೋಶದ ಒಳಪದರಿನ ಮೇಲ್‌ಮೈಗಳು ಪ್ರತಿ ತಿಂಗಳೂ ಕಳಚಿಕೊಂಡು ಸ್ರಾವವಾಗುತ್ತದೆ. ಮುಂದಿನ ದಿನಗಳಲ್ಲಿ ಗರ್ಭಕೋಶದ ಒಳಪದರಿನ ಮೇಲ್‌ಮೈ ಮತ್ತೆ ನಿರ್ಮಾಣಗೊಳ್ಳಬೇಕು. ಇದು ಕ್ರಮಬದ್ಧವಾಗಿ ನಡೆಯುವ ಕ್ರಿಯೆ.

ಕೆಲವು ಮಹಿಳೆಯರಿಗೆ ಅತಿಸ್ರಾವ, ಬಿಳಿಸೆರಗು, ಅತಿ ರಕ್ತಸ್ರಾವವಾಗಿ ಅದರಿಂದ ದೈಹಿಕ ಮತ್ತು ಮಾನಸಿಕ ತೊಂದರೆಗಳನ್ನು ಅನುಭವಿಸುವಂತಾಗುತ್ತದೆ. ಇದನ್ನು ನಿವಾರಿಸಲು ತಕ್ಕ ಉಪಾಯಗಳನ್ನು ಚಿಕಿತ್ಸೆಗಳನ್ನು ಕಂಡು ಹಿಡಿಯಲು ವೈದ್ಯ ವಿಜ್ಞಾನ ಸತತ ಶ್ರಮಿಸಿತು. 'ಗರ್ಭಕೋಶದ ಒಳಪದರಗಳನ್ನು ತೆಗೆದು ಹಾಕಿದರೆ ಹೇಗೆ?' ಎಂಬ ವಿಚಾರ ಬಹುಕಾಲದವರೆಗೆ ಚರ್ಚೆಗೀಡಾಗಿ ಇದೇ ಸೂಕ್ತ ಎಂಬ ನಿರ್ಣಯಕ್ಕೆ ವೈದ್ಯ ವಿಜ್ಞಾನದ ಅಧ್ವರ್ಯುಗಳು ಬಂದರು. ಕಾಲಾಂತರದಲ್ಲಿ ಇದು ಫ್ರಾನ್ಸ್, ಅಮೆರಿಕ, ಜರ್ಮನಿ ಮುಂತಾದೆಡೆ ಪ್ರಯೋಗಿಸಲ್ಪಟ್ಟು ಉಪಯುಕ್ತ ಎಂದು ಕಂಡು ಬಂತು. ನಂತರ ಇಂಗ್ಲೆಂಡಿನಲ್ಲಿಯೂ ಇದು ಜನಪ್ರಿಯ ವಿಧಾನವೆನಿಸಿತು. ಆದರೆ ಯಾವುದೇ ಒಂದು ವಿಧಾನವನ್ನು ವಕ್ರದೃಷ್ಟಿಯಿಂದ ನೋಡುವಂಥವರು ಎಲ್ಲೆಡೆಯೂ ಇರುತ್ತಾರೆ. ಮೊನ್ನೆ ಮೊನ್ನೆ ಅಂದರೆ ೧೯೯೦ರಲ್ಲಿ ಟಿ.ಸಿ.ಆರ್.ಇ. ಸರ್ವತ್ರ ಮಾನ್ಯತೆ ಪಡೆದಿದೆ.

ನಮ್ಮ ದೇಶದ ಮಹಾನಗರಗಳಲ್ಲಿ ಈ ವಿಧಾನ ಜನಪ್ರಿಯವಾಗುತ್ತಿದೆಯಾದರೂ ಇದರಲ್ಲಿ ತರಬೇತಿ ಪಡೆದ ಡಾಕ್ಟರುಗಳ ಕೊರತೆಯಿದೆ. ಅಲ್ಲದೆ ಬಹ್ವಂಶ ಡಾಕ್ಟರುಗಳಿಗೇ ಈ ವಿಧಾನದ ಬಗ್ಗೆ ಗೊತ್ತಿಲ್ಲ. ಗರ್ಭಕೋಶವನ್ನೇ ತೆಗೆದುಹಾಕುವ ಶಸ್ತ್ರ ಚಿಕಿತ್ಸೆಗೆ ಪರ್ಯಾಯವಾಗಿರುವಂಥದು ಈ ಶಸ್ತ್ರಕ್ರಿಯೆ. ಅತಿ ರಜುಸ್ರಾವದ ತೊಂದರೆಯಿರುವ ಮಹಿಳೆಯರಿಗೆ ಖಂಡಿತವಾಗಿಯೂ ಈ ಟಿ.ಸಿ.ಆರ್.ಇ. ಒಂದು ವರದಾನ.

ಗರ್ಭಕೋಶವನ್ನೇ ತೆಗೆದು ಹಾಕುವ ಕ್ರಮದಿಂದ ಹೆಂಗಸಿಗೆ ಮಾನಸಿಕವಾಗಿ ಕೆಲವೊಂದು ತೊಂದರೆಗಳು ಉದ್ಭವಿಸುತ್ತವೆ. ಒಂದು ದೃಷ್ಟಿಯಲ್ಲಿ ತಾನು ಅಂಗಹೀನೆ ಎಂಬ ಭಾವನೆ ಆಕೆಯಲ್ಲಿ ಬೆಳೆಯುತ್ತದೆ. ಜತೆಗೆ ಅನವಶ್ಯಕ ಭಯ ಹೆಚ್ಚಿ ಇದರಿಂದ ತನ್ನ ಗರ್ಭದಲ್ಲಿ ಏನು ಅಪಪರಿಣಾಮವಾಗುವುದೋ ಎಂಬ ಸಂಶಯವೂ ಆಕೆಯನ್ನು ಕಾಡತೊಡಗುತ್ತದೆ.

ಆದರೆ ಟಿ.ಸಿ.ಆರ್.ಇ. ವಿಧಾನದಲ್ಲಿ, ಈ ಮೊದಲೇ ಹೇಳಿದಂತೆ,



ನಾನಾವಿಧ ಉಪಯೋಗಿ ಶಸ್ತ್ರೋಪಕರಣಗಳು

ಗರ್ಭದ್ವಾರದ ಮೂಲಕ ರಿಸೆಕ್ಟೋಸ್ಕೋಪ್‌ನಿಂದ ಗರ್ಭಕೋಶದ ಒಳಪದರನ್ನು ಹೆರೆದು ಹಾಕಲಾಗುತ್ತದೆ. (ತೆಂಗಿನಕಾಯಿಯ ಮೂರು ಕಣ್ಣುಗಳ ಪೈಕಿ ಒಂದನ್ನು ಛೇದಿಸಿ ಕಾಯಿಯ ಒಳಗಿನ ತಿರುಳನ್ನೆಲ್ಲ ತುರಿದು ತೆಗೆಯುವುದನ್ನು ಕಲ್ಪಿಸಿಕೊಳ್ಳಿ.) ಇದರಲ್ಲಿ ಲೇಸರ್ ಕಿರಣಗಳ ಬಳಕೆಯನ್ನು ಮಾಡಲಾಗುತ್ತದೆ.

ಈ ಟಿ.ಸಿ.ಆರ್.ಇ. ವಿಧಾನದ ಉಪಯುಕ್ತತೆಯ ಕುರಿತಂತೆ 'ಬ್ರಿಟಿಶ್ ಮೆಡಿಕಲ್ ಜರ್ನಲ್'ನಲ್ಲಿ (೧೯೯೪ರ ಸಮೀಕ್ಷೆ) ಹೇಳಿರುವ ಮಾತು ಉಲ್ಲೇಖನೀಯ. "ನೂರಕ್ಕೆ ೨೦ ರಿಂದ ೯೦ರಷ್ಟು ಮಹಿಳೆಯರು ಇದು ತಮ್ಮ ದೊಡ್ಡ ಹೊರೆ ಇಳಿಸಿದಂತಾಯಿತು ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಕೆಲವರಿಗೆ ಮಾತ್ರ ಎರಡನೆ ಬಾರಿಗೂ ಟಿ.ಸಿ.ಆರ್.ಇ. ಮಾಡಬೇಕಾಗಿ ಬಂತು. ತಿಂಗಳ ಸ್ರಾವದ ಮೊದಲು ಹೊಟ್ಟೆನೋವು ಅನುಭವಿಸಿ ಹೆಚ್ಚು ಸ್ರಾವದ ತೊಂದರೆ ಅನುಭವಿಸುವವರು, ಗರ್ಭಕೋಶದ ಗಡ್ಡೆ ಉಳ್ಳವರು, ಇವರಿಗೆಲ್ಲ ಈ ವಿಧಾನದಿಂದ ಬಲು ಉಪಕಾರವಾಗಿದೆ. ಆದ್ದರಿಂದ ಜಗತ್ತಿನ ಎಲ್ಲೆಡೆ ಟಿ.ಸಿ.ಆರ್.ಇ. ವಿಧಾನ ಪರಿಚಯವಾಗಬೇಕು. ಅದು ನಮ್ಮ ಸ್ತ್ರೀ ಸಮುದಾಯಕ್ಕೆ ನಿಜಕ್ಕೂ ಮಾನಸಿಕ ಹಾಗೂ ದೈಹಿಕ ಸೌಖ್ಯ ಕಾಪಾಡಿಕೊಳ್ಳಲು ನೆರವಾಗುತ್ತದೆ."

ಅಂಡನಾಳ ಸರಿಯಾಗಿ ಕಾರ್ಯ ನಿರ್ವಹಿಸುತ್ತದೆಯೋ ಇಲ್ಲವೋ ಎಂಬುದನ್ನು ಅರಿಯಲು ಹಾಗೂ ಒಂದು ವೇಳೆ ಅದರಲ್ಲಿ ಏನಾದರೂ ವ್ಯತ್ಯಯವಿದ್ದರೆ ಅದನ್ನು ಸರಿಪಡಿಸಲು ಕೂಡ ಉದರದರ್ಶಕ ವಿಧಾನದಿಂದ ಸಾಧ್ಯ. ಗರ್ಭಕೋಶಕ್ಕೆ ಬಣ್ಣದ ನೀರನ್ನು ಹಾಕಿ ಅದು ಗರ್ಭನಾಳದ ಮೂಲಕ ಹೊಟ್ಟೆಯನ್ನು ಸೇರುವುದೋ ಹೇಗೆ ಎಂಬುದನ್ನು ಉದರದರ್ಶಕದಿಂದ ಪರೀಕ್ಷಿಸಬಹುದು. ಗರ್ಭನಾಳ ಕಟ್ಟಿಕೊಂಡಿದ್ದರೆ ಅದಕ್ಕೆ ಒಂದು ಹೊಸ ಮಾರ್ಗವನ್ನೂ ಕಲ್ಪಿಸಬಹುದು. ಇದು ಅತ್ಯಂತ ಸೂಕ್ಷ್ಮವಾದ ಶಸ್ತ್ರಚಿಕಿತ್ಸೆ. ಮೈಕ್ರೊಸರ್ಜರಿ ಎಂಡೊಸ್ಕೋಪಿಯಿಂದ ಇದನ್ನು ನೆರವೇರಿಸಬಹುದು.

ಕೆಲವು ಪುರುಷರಿಗೆ ಕರುಳು, ಮೂತ್ರನಾಳ, ಪಿತ್ತಕೋಶಗಳ ತೊಂದರೆಯಿಂದಾಗಿ ಬದುಕು ಅಸಹನೀಯವೆನಿಸುವುದುಂಟು. ಹೊಟ್ಟೆನೋವು ಕೇವಲ ವಾಯುವಿಕಾರದಿಂದಲೇ ಬರುವುದಿಲ್ಲ. ಇನ್ನಿತರ ಕಾರಣಗಳೂ ಅದಕ್ಕಿರಬಹುದು. ಗೌಸುಸಾಹೇಬನೆಂಬ ೪೮ ರ ವ್ಯಕ್ತಿ ಹೀಗೆಂದು ನನ್ನ ಬಳಿ ಬಂದ. ಆದಾಗಲೇ ಆತ ಅನೇಕ ಡಾಕ್ಟರರ ಬಳಿ ಹೋಗಿ ಬಂದಿದ್ದ. ತಪಾಸಣೆಯ ನಂತರ ಆತನ ಪಿತ್ತಕೋಶದಲ್ಲಿ ಹರಳುಗಳಿವೆ ಎಂಬುದು ಗೊತ್ತಾಯಿತು. ಲೆಪ್ರೊಸ್ಕೋಪಿಕ್ ಕೊಲೆಸಿಸ್ಟೆಕ್ಟಮಿಯಿಂದ ಆತನ ಪಿತ್ತಕೋಶದ ಹರಳುಗಳನ್ನು ಹೊರತೆಗೆಯಲಾಯಿತು. ಮರುದಿನವೇ ಆತ ಹಗುರಮನಸ್ಸಿನಿಂದ, ಹುಡುಗನ ಹಾಗೆ ಚುರುಕಿನಿಂದ ಮನೆಗೆ ನಡೆದ.



ಶಸ್ತ್ರಕ್ರಿಯಾ ಕೊಠಡಿಯಲ್ಲಿ ನಿರತ ವೈದ್ಯರು

ಇನ್ನೊಬ್ಬ ಹುಡುಗ, ೧೬-೧೭ ವರ್ಷದವ. "ನನಗೆ ಪಕ್ಕೆಯಿಂದ ಬಲಕಿಬ್ಬೊಟ್ಟೆಯವರೆಗೆ ಸಹಿಸಲಾರದಂಥ ನೋವು," ಎಂದ. ಕೆಲವೊಮ್ಮೆ ಮೂತ್ರ ವಿಸರ್ಜಿಸುವಾಗ ಉರಿಯುತ್ತದೆ, ನೋವಾಗುತ್ತದೆ ಎಂದೂ ಹೇಳಿದ. ಎಕ್ಸ್-ರೇ ಮೂಲಕ ತಪಾಸಿಸಿದಾಗ ಬಲ ಮೂತ್ರನಾಳದ ಮಧ್ಯದಲ್ಲಿ ಉತ್ತತ್ತಿ ಬೀಜದ ಆಕಾರದ ಹರಳು ಸಿಕ್ಕಿ ಹಾಕಿಕೊಂಡದ್ದು ಗೋಚರಿಸಿತು. ಗಾಳಿಯನ್ನು ಹೊಟ್ಟೆಯೊಳಗೆ ತುಂಬದೆ ಒಳ ಪದರದ ಅಡಿಯಲ್ಲಿ ತುಂಬಿ, ಮೂತ್ರನಾಳವನ್ನಷ್ಟೆ ಬೇರ್ಪಡಿಸಿಕೊಂಡು ಲೆಪ್ರೊಸ್ಕೊಪಿಯ ಮೂಲಕ ಆ ಹರಳನ್ನು ತೆಗೆದುಹಾಕಿದೆ. ಇದೊಂದು ರೀತಿಯಲ್ಲಿ ನಾನೇ ಕಂಡುಕೊಂಡ ಪ್ರಾಯೋಗಿಕ ವಿಧಾನ.

ಇಂಥ ಕೆಲವು ಪ್ರಯೋಗಗಳನ್ನು ಮಾಡಲು ನನಗೆ ಪ್ರೇರಣೆಯಾದವರು ಗರ್ಭ ಹಾಗೂ ಮೂತ್ರನಾಳ ಸಂಬಂಧಿ ನಾನಾ ವಿಧ ತೊಂದರೆಗೆ ಒಳಗಾದ ರೋಗಿಗಳು, ವೈದ್ಯ ಮಿತ್ರರು ಹಾಗೂ ಜರ್ಮನಿಯ ಪ್ರೊ. ಡಾ. ಕರ್ಟ್ ಸೆಮ್ ಅವರು.

ಈ ಆಧುನಿಕ ಶಸ್ತ್ರಕ್ರಿಯಾ ಕ್ರಮಗಳು ಖಂಡಿತವಾಗಿಯೂ ಪರಿಪೂರ್ಣವಾದವುಗಳು. ಯಾಕೆಂದರೆ ಸಾಂಪ್ರದಾಯಿಕ ಶಸ್ತ್ರಕ್ರಿಯೆಯಲ್ಲಿ ಕೆಲವು ನ್ಯೂನತೆಗಳು ಇದ್ದೇ ಇವೆ ಎಂಬುದು ನಿರ್ವಿವಾದದ ಮಾತು. ಒಂದು ರೀತಿಯಲ್ಲಿ ಅವು ಕತ್ತಲೆಯಲ್ಲಿ ಕೈ ಆಡಿಸಿ ವಸ್ತುವೊಂದನ್ನು ಹುಡುಕುವಂಥ ಸಾಹಸ ಎಂದರೆ ತಪ್ಪಾಗದು. ಜತೆಗೆ ರಕ್ತ ಪೂರೈಕೆಯೇ ಮೊದಲಾದ ಅವಶ್ಯಕ ವಿಧಿಗಳನ್ನೂ ಅನುಸರಿಸಬೇಕಾಗಿ ಬರುತ್ತದೆ. ಆದರೆ ಈ ವಿನೂತನ ವಿಧಾನಗಳಲ್ಲಿ ಎಲ್ಲವೂ ಸುಸ್ಪಷ್ಟವಾಗಿ ಕಾಣುವುದರಿಂದ ಯಾವ ಸಂಶಯಕ್ಕೂ ಎಡೆಯಾಗದಂತೆ ಅತಿ ಕಡಿಮೆ ಅವಧಿಯಲ್ಲಿ ಶಸ್ತ್ರಚಿಕಿತ್ಸೆ ಮಾಡಿ ಮುಗಿಸಬಹುದು. ಅಲ್ಲದೆ ರಕ್ತಪೂರೈಕೆಯೇ ಮೊದಲಾದವುಗಳೂ ಇಲ್ಲಿ ಅನವಶ್ಯವೆನಿಸುತ್ತವೆ.

"ಜಾಗತಿಕ ಮಟ್ಟದಲ್ಲೀಗ 'ಅಂತರ್‌ಶಸ್ತ್ರಶಾಸ್ತ್ರ ಶಿಸ್ತು'ಗಳನ್ನೊಳಗೊಂಡ ಒಂದು ವಿಚಾರಧಾರೆ ಪ್ರಚಲಿತವಾಗುತ್ತಿದೆ. ಇಲ್ಲಿ ಸ್ತ್ರೀರೋಗ ತಜ್ಞ, ಮೂತ್ರಪಿಂಡ ರೋಗತಜ್ಞ, ಹಾಗೂ ಉದರರೋಗ ತಜ್ಞರು ಒಟ್ಟಾಗಿ ಕಾರ್ಯನಿರ್ವಹಿಸಬಹುದು. ಮೇಲ್ನೋಟಕ್ಕೆ ಇವರೆಲ್ಲರ ಕಾರ್ಯ ಕ್ಷೇತ್ರ ಬೇರೆ ಬೇರೆ ಎನಿಸಿದರೂ ಅವುಗಳಲ್ಲಿ ಒಂದು ರೀತಿಯ ಅಪ್ರತ್ಯಕ್ಷ ಸಂಬಂಧವಿದೆ. ಆ ಸಂಬಂಧವನ್ನು ಸದೃಢಗೊಳಿಸುವುದೇ ಈ ಹೊಸ ವಿಚಾರಧಾರೆಯ ಮೂಲಧ್ಯೇಯ," ಇಂಗ್ಲೆಂಡಿನ ಡಾ. ವಿಕ್‌ಹ್ಯಾಂ ೧೯೯೧ರ 'ಬ್ರಿಟಿಶ್ ಮೆಡಿಕಲ್ ಜರ್ನಲ್'ನಲ್ಲಿ ಬರೆದ ಈ ಮಾತುಗಳು ಗಮನಾರ್ಹ. ಅವರು ಈ ದಿಶೆಯಲ್ಲಿ ಮುಂಬರುವ ದಿನಗಳಲ್ಲಿ ಎಂಥೆಂಥ ಬದಲಾವಣೆಗಳಾಗಲಿವೆ ಎಂಬದರ ಒಂದು ಸ್ಥೂಲ ಚಿತ್ರವನ್ನು ತಮ್ಮ ಲೇಖನದಲ್ಲಿ ನೀಡಿದ್ದಾರೆ.

ಇತ್ತೀಚೆಗೆ ಎಂಡೋ ಕ್ಯಾಮರಾಗಳು ಮೂರು ಆಯಾಮಗಳ (3

Dimension) ಚಿತ್ರಗಳಿಂದ ಅಂತರವಯವಗಳನ್ನು ಸ್ಫುಟವಾಗಿ ಒಡಮೂಡಿಸಬಲ್ಲಂಥವು. ಅಷ್ಟೇ ಅಲ್ಲ, ವಿಶಿಷ್ಟವಾದ ಝೂಮ್ ಲೆನ್ಸ್ ಹಾಗೂ ಸ್ವಚಾಲಿತ ಬೆಳಕು ನಿಯಂತ್ರಣವುಳ್ಳಂಥವು. ಇವುಗಳ ಮೂಲಕ ವ್ಯಕ್ತಿಯ ಉದ್ದೇಶಿತ ಅವಯವದ ಚಿತ್ರಗಳನ್ನು ವಿಡಿಯೋ ಮಾಡಿಕೊಳ್ಳುವುದೂ ಸಾಧ್ಯ. ಅಲ್ಲದೆ ಉಪಗ್ರಹಗಳ ಮೂಲಕ ಈ ಚಿತ್ರಗಳನ್ನು ಬೇರೆ ಬೇರೆಯ ಮೂರು ದೇಶಗಳಲ್ಲಿ ಕೂತಿರುವ ಶಸ್ತ್ರಕ್ರಿಯಾ ತಜ್ಞರಿಗೆ ಕಳಿಸಬಹುದಾಗಿದೆ. ಉದಾಹರಣೆಗೆ ಮುಂಬಯಿಯ ಆಸ್ಪತ್ರೆಯೊಂದರಲ್ಲಿ ಗರ್ಭಕೋಶದ ತೊಂದರೆಯಿಂದ ಶಸ್ತ್ರಚಿಕಿತ್ಸೆಗೆಂದು ದಾಖಲಾದ ಒಬ್ಬ ಮಹಿಳೆ ಆಪರೇಶನ್ ಥೇಟರಿನಲ್ಲಿ ಮಲಗಿದ್ದಾಳೆಂದಿಟ್ಟುಕೊಳ್ಳಿ. ಎಂಡೋ ಕ್ಯಾಮರಾದ ಮೂಲಕ ಆಕೆಯ ಗರ್ಭದ ಪರೀಕ್ಷೆ ನಡೆಸಿ ಅದನ್ನು ಆಗಿಂದಾಗಲೇ ಉಪಗ್ರಹದ ಮೂಲಕ ಸಿಡ್ನಿ, ನ್ಯೂಯಾರ್ಕ್ ಮತ್ತು ಲಂಡನ್ನಿನಲ್ಲಿ ಕೂತಿರುವ ಮೂವರು ತಜ್ಞರಿಗೆ ಕಾಣುವಂತೆ ಬಿತ್ತರಿಸಬಹುದು. ಅವರು ಕೂಲಂಕಷ ಪರೀಕ್ಷೆ, ಚರ್ಚೆಗಳ ಮೂಲಕ (ಅವರಲ್ಲಿ ಪರಸ್ಪರ ಮಾತಾಡಲು ಅನುವಾಗುವಂತೆ, ಸಂಪರ್ಕ ಏರ್ಪಡಿಸುವುದು ಈಗ ಶಕ್ಯ) ಆ ಮೂವರೂ ಒಂದು ನಿರ್ಧಾರಕ್ಕೆ ಬಂದ ಮೇಲೆ ತಾವು ಕೂತಲ್ಲಿಂದಲೇ ನಿರ್ದೇಶನಗಳನ್ನು ನೀಡುತ್ತ ಹೋಗುತ್ತಾರೆ. ಆ ನಿರ್ದೇಶನಗಳಿಗೆ ಅನುವರ್ತಿಯಾಗಿ ಮುಂಬಯಿಯಲ್ಲಿನ ಕಂಪ್ಯೂಟರೀಕೃತ ಶಸ್ತ್ರಚಿಕಿತ್ಸಾ ಕೊಠಡಿಯಲ್ಲಿ ಶಸ್ತ್ರಚಿಕಿತ್ಸೆ ಮುಂದುವಯುತ್ತದೆ. ಆರಂಭಿಕ ಹಂತದಿಂದ ಹಿಡಿದು, ಕೊನೆಯ ಹಂತದವರೆಗೂ ಅಷ್ಟೇ ಏಕೆ, ತದನಂತರದ ನಿರ್ಮಲೀಕರಣದವರೆಗಿನ ಕೆಲಸದವರೆಗೂ ಹೀಗೆ ದೂರ ನಿಯಂತ್ರಣದಿಂದ ಕಾರ್ಯನಿರ್ವಹಿಸಬಹುದಾದ ಕಾಲವೂ ದೂರವೇನಿಲ್ಲ. ಈ ಸಂದರ್ಭದಲ್ಲೇ ಇಡೀ ಪ್ರಕ್ರಿಯೆಯನ್ನು ವಿಡಿಯೋದಲ್ಲಿ ಟೇಪ್ ಮಾಡಿಕೊಳ್ಳುವ ಅನುಕೂಲವೂ ಇದೆ.

'ಯಂತ್ರ ಮಾನವನ' (ರೋಬೋಟ್) ನೆರವನ್ನೂ ಈ ದಿಶೆಯಲ್ಲಿ ಪಡೆಯಬಹುದಾಗಿದೆ. ಈ ಯಂತ್ರಮಾನವರನ್ನು 'ವಿಶಿಷ್ಟ ಗುಲಾಮ' (SpecificSlave)ರೆಂದೇ ಕರೆಯಲಾಗುತ್ತದೆ. ಅಮೆರಿಕದಲ್ಲೀಗ ಇಂಥ 'ವಿಶಿಷ್ಟ ಗುಲಾಮ'ರಿಗೆ ಸೂಚನೆ ನೀಡುತ್ತ ತಜ್ಞರು ಶಸ್ತ್ರ ಚಿಕಿತ್ಸೆಗಳನ್ನು ಮಾಡಿದ ಸುದ್ದಿಗಳು ಬಂದಿವೆ. ೧೯೯೨-೯೩ರಲ್ಲಿ ನಾನು ಫ್ರಾನ್ಸ್, ಜರ್ಮನಿಗಳಿಗೆ ಹೋಗಿದ್ದಾಗ ಇಂಥದೊಂದು ಆಪರೇಶನ್ನನ್ನು ವೀಕ್ಷಿಸುವ ಅವಕಾಶ ಒದಗಿತು.

ಇಂಥ ಅತ್ಯಾಧುನಿಕ ಸಾಮಗ್ರಿಗಳನ್ನುಳ್ಳ ಶಸ್ತ್ರಕ್ರಿಯಾತಜ್ಞರು ನಮ್ಮ ಮಹಾನಗರಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆಂದು ಈ ಮೊದಲೇ ಹೇಳಿದ್ದೇನೆ. ಆದರೆ ಒಂದು ರೀತಿಯಲ್ಲಿ ಈ ಜನ ಕೇವಲ ಅತ್ಯಂತ ಶ್ರೀಮಂತವರ್ಗಕ್ಕೆ ಮಾತ್ರ ಅನುಕೂಲಿಗಳಾಗಿದ್ದಾರೆಂಬುದನ್ನು ಇಲ್ಲಿ ಸ್ಪಷ್ಟಪಡಿಸಲೇಬೇಕು. ಈಗಿನ ದಿನಗಳಲ್ಲಿ 'ಸಮಯವೇ ಹಣ'ವಾಗಿರುವಾಗ ಪ್ರತಿಯೊಬ್ಬನಿಗೂ ಎಲ್ಲವೂ ದಿಢೀರನೇ ಆಗಬೇಕು. ಅದಕ್ಕಾಗಿ ಹಣ ಎಷ್ಟು

ಖರ್ಚಾದರೂ ಅವರು ಲೆಕ್ಕಿಸುವುದಿಲ್ಲ.

ಆದರೆ ಮಧ್ಯಮ ವರ್ಗದವರ ಪಾಡೇನು?

ಈ ಅತ್ಯಾಧುನಿಕ ಉಪಕರಣಗಳಿಗೆ ಬೆಲೆ ಜಾಸ್ತಿ. ಅಲ್ಲದೆ ವಿದೇಶಗಳಿಂದಲೇ ತರಿಸಿಕೊಳ್ಳಬೇಕು. (ನನಗೆ ಇಂಗ್ಲೆಂಡಿನಲ್ಲಿರುವ ನನ್ನ ತಮ್ಮ- ಆತನೂ ಡಾಕ್ಟರನೇ- ಇಂಥ ಉಪಕರಣಗಳನ್ನು ಒದಗಿಸಿದ.' ಕನಿಷ್ಠ ಶಸ್ತ್ರಬಳಕೆಯಾಗುವ ಈ ಕ್ರಮದಲ್ಲಿ ದೀರ್ಘಕಾಲೀನ ಆಸ್ಪತ್ರೆವಾಸ, ತದನಂತರದ ಔಷಧೋಪಚಾರ ಮುಂತಾದ ಇನ್ನಿತರ ವೆಚ್ಚಗಳು ಕಡಿಮೆ. ಇವನ್ನೆಲ್ಲ ಗಮನಿಸಿ ಮಹಾನಗರದ ಡಾಕ್ಟರುಗಳು ತಮ್ಮ ಬಳಿ ಬರುವವರಿಂದ ಹೆಚ್ಚು ಹಣ ಪಡೆಯುತ್ತಿದ್ದಾರೆ.

ಆದರೆ ನಾನಿರುವುದು ಹಾವೇರಿಯಂಥ ಪಟ್ಟಣದಲ್ಲಿ. ಇದ್ದುದರಲ್ಲೇ ಅತಿ ಕಡಿಮೆ ಖರ್ಚಿನಲ್ಲಿ ಈ ಶಸ್ತ್ರಕ್ರಿಯೆಗಳನ್ನು ನಿರ್ವಹಿಸುವತ್ತಲೇ ಸದಾ ನನ್ನ ಗಮನ. ಯಾಕೆಂದರೆ ವೈದ್ಯನಾದವನಿಗೆ ಕೇವಲ ಹಣ ಮುಖ್ಯವಾಗಬಾರದು; ಪ್ರತಿಯೊಂದು ಶಸ್ತ್ರಚಿಕಿತ್ಸೆಯೂ ಆತನಿಗೆ ಒಂದೊಂದು ಅನುಭವದ ಪಾಠವಾಗಬೇಕು ಎಂಬುದು ನನ್ನ ಅಭಿಪ್ರಾಯ; ಅಷ್ಟೇ ಅಲ್ಲ ಪ್ರಾಮಾಣಿಕ ನಂಬಿಕೆ ಕೂಡ.

### ಅಲ್‌ಟ್ರಾಸೌಂಡ್ ಪ್ರಸಾರ...

*ಗರ್ಭಸ್ಥ ಶಿಶುವನ್ನು ಅಲ್‌ಟ್ರಾಸೌಂಡ್ ಪರೀಕ್ಷಣೆಯ ಮೂಲಕ ಮಾನಿಟರ್ ಪರದೆಯ ಮೇಲೆ ನೋಡುವುದು ಸಾಮಾನ್ಯವಾದ ಸಂಗತಿ. ಆದರೆ ಈಗ ನೂರಾರು ಮೈಲು ದೂರದವರೆಗೂ ಅಲ್‌ಟ್ರಾಸೌಂಡ್ ಪರೀಕ್ಷಣೆಯನ್ನು ನೇರವಾಗಿ ಪ್ರಸಾರ ಮಾಡಬಹುದಾಗಿದೆ. ಸ್ಥಳೀಯ ವೈದ್ಯರು ಬಯಸಿದರೆ ದೂರದ ಊರುಗಳ ವಿಶೇಷಜ್ಞರನ್ನು ಈ ಪ್ರಸಾರದ ಮೂಲಕ ಸಂಪರ್ಕಿಸಿ ಅವರ ಅಭಿಪ್ರಾಯ, ಸಲಹೆಗಳನ್ನೂ ಪಡೆಯಬಹುದಾಗಿದೆ. ಇದರಿಂದ ಸ್ಥಳೀಯ ವೈದ್ಯನ ಸಮಯದ ಉಳಿತಾಯದ ಜತೆಗೆ ದೂರದಲ್ಲಿರುವ ವಿಶೇಷಜ್ಞರ ಅಭಿಪ್ರಾಯಕ್ಕಾಗಿ ಕಾಯಬೇಕಾದ, ಕಾದು ಬೇಸರಿಯಬೇಕಾದ ಪ್ರಸಂಗವೂ ತಪ್ಪುತ್ತದೆ.*

*ಈ ವ್ಯವಸ್ಥೆಯಿಂದ ವಿಶೇಷಜ್ಞರ ಅಭಿಪ್ರಾಯ ದೊರೆಯಲು ಕೇವಲ ೧೫ ನಿಮಿಷಗಳು ಸಾಕು.*

Printed and Published by S.K. KATOTE on behalf of Loka Shikshana Trust at Samyukta Karnataka Press, Koppikar Road, Hubli-580 020. (Phone: 364303): No. 2, Residency Road, Bangalore-560 025. (Phone: 2213265).

**Managing Editor: K. SHAMARAO**

Registered with the Registrar of Newspaper for India under No. 3633/57.




# ಲೋಕ ಶಿಕ್ಷಣ ಟ್ರಸ್ಟ್
# ಗ್ರಂಥಮಾಲೆಯ ಪ್ರಕಟಣೆಗಳು
## ಹುಬ್ಬಳ್ಳಿ-ಬೆಂಗಳೂರು

| | ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|---|
| ೧. | ನನಗೆ ನಾನೇ ಮಾದರಿ | ಶ್ರೀ ಬಿ.ಡಿ. ಜತ್ತಿ | ರೂ. ೪೦-೦೦ |
| ೨. | ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಿ.ಡಿ. ಜತ್ತಿ | ,, ೧೫-೦೦ |
| ೩. | ಕೃಷ್ಣವತಾರ ಭಾಗ-೧ | ಮೂಲ: ಶ್ರೀ ಕೆ.ಎಂ. ಮುನ್ಶಿ<br>ಅನುವಾದ: ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ | ,, ೨೦-೦೦ |
| ೪. | ಕೃಷ್ಣಾವತಾರ ಭಾಗ-೨ | -"- | ,, ೨೫-೦೦ |
| ೫. | ಕೃಷ್ಣಾವತಾರ ಭಾಗ-೩ | -"- | ,, ೨೦-೦೦ |
| ೬. | ಕೃಷ್ಣಾವತಾರ ಭಾಗ-೪ | -"- | ,, ೨೦-೦೦ |
| ೭. | ಕೃಷ್ಣಾವತಾರ ಭಾಗ-೫ | -"- | ,, ೨೫-೦೦ |
| ೮. | ಕೃಷ್ಣಾವತಾರ ಭಾಗ-೬ | -"- | ,, ೨೦-೦೦ |
| ೯. | ಕೃಷ್ಣಾವತಾರ ಭಾಗ-೭ | -"- | ,, ೨೦-೦೦ |
| ೧೦. | ಕೃಷ್ಣಾವತಾರ ಭಾಗ-೮ | -"- | ,, ೨೫-೦೦ |
| ೧೧. | ಕೃಷ್ಣಾವತಾರ ಭಾಗ-೯, ೧೦ | -"- | ,, ೨೦-೦೦ |
| ೧೨. | ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ | ಡಾ. ಸೂರ್ಯನಾಥ ಕಾಮತ | ,, ೪೫-೦೦ |
| ೧೩. | ವಂದೇಮಾತರಂದಿಂದ ಜನಗಣಮನದವರೆಗೆ | ಶ್ರೀ ವಿ.ಎಚ್. ದೇಸಾಯಿ | ,, ೫೦-೦೦ |
| ೧೪. | ಗೀತಾ ನಿತ್ಯಪಾಠ | ಶ್ರೀ ರಂಗನಾಥ ದಿವಾಕರ | ,, ೩-೦೦ |
| ೧೫. | ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು | ಪ್ರೊ. ಕೆ.ಎಸ್. ನಾರಾಯಣಾಚಾರ್ಯ | ,, ೨೦-೦೦ |
| ೧೬. | ಗಾಂಧೀಜಿ ನಾನು ಕಂಡಂತೆ | ಶ್ರೀ ರಂಗನಾಥ ದಿವಾಕರ | ,, ೧೦-೦೦ |
| ೧೭. | ನೆನಪಿನಂಗಳದಲ್ಲಿ | ಶ್ರೀ ಜಿ.ಎಂ. ಪಾಟೀಲ | ,, ೨೦-೦೦ |

ವಿ.ಸೂ. ಪುಸ್ತಕ ಮಾರಾಟಗಾರರಿಗೆ ಕನಿಷ್ಠ ೧೦ ಪ್ರತಿಗಳನ್ನು ತರಿಸಿದರೆ ಶೇ. ೨೫ರಷ್ಟು ಕಮೀಷನ ಕೊಡಲಾಗುವದು. ಪುಸ್ತಕಗಳು ಬೇಕಾದಲ್ಲಿ ತಕ್ಷಣ ಕೆಳಕಂಡ ವಿಳಾಸಕ್ಕೆ ಎಲ್ಲ ವಿವರಗಳೊಂದಿಗೆ ಡಿ.ಡಿ. ಅಥವಾ ಮನಿಯಾರ್ಡರ್ ಮೂಲಕ ಬರೆದು ತಿಳಿಸುವುದು. ಅಂಚೆ ವೆಚ್ಚ ಪ್ರತ್ಯೇಕ. ವಿ.ಪಿ.ಪಿ. ಸೌಲಭ್ಯ ಇರುವುದಿಲ್ಲ.

ಪ್ರಸಾರಾಂಗ ವ್ಯವಸ್ಥಾಪಕರು
ಸಂಯುಕ್ತ ಕರ್ನಾಟಕ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-೨೦.
ಸಂಯುಕ್ತ ಕರ್ನಾಟಕ, ನಂ. ೨, ರೆಸಿಡೆನ್ಸಿ ರಸ್ತೆ, ಬೆಂಗಳೂರು-೨೫.

Cover Printed at: Bharat Photo Offset Works, Dharwad. Ph: 40545

KASTURI, Kannada Digest Reg No. KRNG - 43, Licence No. L2120 - WPP No. 33 Price - Rs. 6-00



ನುವಾರ, ಸೋಮವಾರ,
ಹುಟ್ಟಿದ ಹಬ್ಬ, ಯುಗಾದಿ, ಮದುವೆ,
ದೀಪಾವಳಿ.....



ಡ್ರೆಸ್ ಮೆಟಿರಿಯಲ್, ರುಬಿಯಾ, ಸೂಟಿಂಗ್ಸ್,
ಶರ್ಟಿಂಗ್ಸ್, ದೋತರಗಳು,
ಯುನಿಫಾರಂಗಳು, ಕಾಟನ್,
ಪಾಲಿಯೆಸ್ಟರ್‌ಗಳಲ್ಲಿ ನಿಮ್ಮ ಪರಿವಾರಕ್ಕಾಗಿ.

# ದಾವಣಗೆರೆ

ಫ್ಯಾಶನ್ನಿನ ಪ್ರತಿರೂಪ




ದಾವಣಗೆರೆ ಕಾಟನ್ ಮಿಲ್ಸ್
ಪೋ.ಬಾ. ನಂ. 201, ದಾವಣಗೆರೆ - 577 002.
(A division of Morarjee Goculdas Spinning & Weaving Company Ltd., Bombay)

MAP-15-95 KAN